ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ—೩

ಪ್ರಧಾನ ಸಂಪಾದಕ:

ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

# ಪ್ರಭುಲಿಂಗಲೀಲೆಯ ಸಂಗ್ರಹ




ಸಂಪಾದಕರು:

ಎಂ. ಎಸ್. ಬಸವಲಿಂಗಯ್ಯ, ಎಂ.ಎ., ಬಿ.ಎಲ್.

ಎಂ. ಆರ್. ಶ್ರೀನಿವಾಸಮೂರ್ತಿ, ಬಿ.ಎ.

ಬೆಂಗಳೂರು ಪ್ರೆಸ್, ಮೈಸೂರು ರೋಡು

ಬೆಂಗಳೂರು ಸಿಟಿ

೧೯೩೪

# ಮುನ್ನುಡಿ

ಕನ್ನಡ ಸಾಹಿತ್ಯವನ್ನು ಅಭಿವೃದ್ಧಿಪಡಿಸಬೇಕೆಂಬ ಘನೋದ್ದೇಶದಿಂದ ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿಗಳು ಒಂದು "ಕನ್ನಡ ಪ್ರಕಟನಸಮಿತಿ"ಯನ್ನು ನಿಯಮಿಸಿ, ಪ್ರತಿ ವರ್ಷವೂ ಪ್ರಸಿದ್ಧರಾದ ಗ್ರಂಥಕರ್ತರನ್ನು ನಿಷ್ಕರ್ಷಿಸಿ ಅವರಿಂದ ಗ್ರಂಥಗಳನ್ನು ಪ್ರಕಟನೆಗೆ ಸಿದ್ಧಪಡಿಸುವುದಕ್ಕೆ ತಕ್ಕ ಏರ್ಪಾಡನ್ನು ಮಾಡಿರುತ್ತಾರೆ.

ಈ ಗ್ರಂಥಗಳು ಎರಡು ಬಗೆಯವು:

೧. ಈ ನವೀನ ಕಾಲಕ್ಕೆ ಬೇಕಾದ ಮತ್ತು ಜನಸಾಮಾನ್ಯಕ್ಕೆ ಜ್ಞಾನವನ್ನು ಹರಡಬಲ್ಲ ಸಾಹಿತ್ಯ, ಕಲೆ, ವಿಜ್ಞಾನ, ತತ್ವ, ಚರಿತ್ರೆ, ಧರ್ಮ, ನೀತಿ, ಸಂಸ್ಕೃತಿ ಮುಂತಾದ ವಿಷಯಗಳನ್ನು ಲಲಿತವಾದ ಹೊಸಗನ್ನಡ ಶೈಲಿಯಲ್ಲಿ ವಿವಾದಾಸ್ಪದವಲ್ಲದ ನಿಷ್ಕೃಷ್ಟವಾದ ರೀತಿಯಲ್ಲಿ ತಿಳಿಸತಕ್ಕುವು. ಇವು ಸ್ವತಂತ್ರ ಗ್ರಂಥಗಳಾಗಿರಬಹುದು; ಅಥವಾ ಭಾಷಾಂತರಗಳಾಗಿರಬಹುದು, ಸಂಕಲನಗಳಾಗಿರಬಹುದು.

೨. ಕನ್ನಡದ ಪೂರ್ವದ ಸಾಹಿತ್ಯವನ್ನು ಜನರಲ್ಲಿಯೂ ವಿದ್ಯಾರ್ಥಿವರ್ಗದಲ್ಲಿಯೂ ಹೆಚ್ಚು ಪ್ರಚಾರಕ್ಕೆ ತರುವುದಕ್ಕಾಗಿ, ಉತ್ತಮ ಕಾವ್ಯಗಳ ಸಂಗ್ರಹಗಳು. ಇವು ವಿದ್ಯಾರ್ಥಿಗಳ ಪಾಠಕ್ಕೆ ಅನುಕೂಲವಾಗಿರಬೇಕು; ಮೂಲಪ್ರತಿಗಳನ್ನು ಪರಿಶೋಧಿಸಿದ ಶುದ್ಧಪಾಠವನ್ನು ಒಳಕೊಂಡು, ಪೀಠಿಕೆ, ಶಬ್ದಕೋಶ, ಅವಶ್ಯವಾದ ಟಿಪ್ಪಣಿಗಳೊಡನೆ ಕೂಡಿರಬೇಕು.

ಹೀಗೆ ಏರ್ಪಟ್ಟು ಗ್ರಂಥಕರ್ತರಿಗೆ ಒಪ್ಪಿಸಿದ ಕೆಲಸಗಳಲ್ಲಿ "ಪ್ರಭುಲಿಂಗಲೀಲೆಯ ಸಂಗ್ರಹ" ಮೂರನೆಯದು. ಈ ಸಂಗ್ರಹ ಕಾರ್ಯವನ್ನು ಕುರಿತು ಗುಣಜ್ಞರ ಪರಾಮರ್ಶೆಗಾಗಿ ಒಂದೆರಡು ಮಾತನ್ನು ಅರಿಕೆ ಮಾಡಿಕೊಳ್ಳಬೇಕಾಗಿದೆ.

ನಮ್ಮ ಪ್ರೌಢಕಾವ್ಯಗಳು ಸಾಧಾರಣವಾಗಿ ಬಹಳ ವಿಸ್ತಾರವಾಗಿರುವುದರಿಂದ ಅವುಗಳಲ್ಲಿ ಬಹುಸ್ವಲ್ಪ ಭಾಗವನ್ನು ಮಾತ್ರ ಪರೀಕ್ಷೆ

ಗಳಿಗೆ ಪಠ್ಯಭಾಗವಾಗಿ ಇಡುವ ಪದ್ಧತಿ ರೂಢಿಗೆ ಬಂದಿದೆ. ಸಾಮಾನ್ಯ ಜನರಂತೂ ಈ ಕಾವ್ಯಗಳನ್ನು ಓದುವುದೇ ಅಪೂರ್ವ. ಇದು ವ್ಯಸನಕರವಾದ ಸಂಗತಿ. ಒಂದು ಕಾವ್ಯದ ಸೊಬಗನ್ನು, ಒಬ್ಬ ಕವಿಯ ಕವಿತಾಶಕ್ತಿಯನ್ನು ತಿಳಿಯಬೇಕಾದರೆ ಕಾವ್ಯವನ್ನು ಸಂಪೂರ್ಣವಾಗಿ ಓದಬೇಕು; ಇಲ್ಲ ಉತ್ತಮ ಭಾಗಗಳೆಲ್ಲವನ್ನಾದರೂ ನೋಡಬೇಕು. ಈ ಸಮಷ್ಟಿದೃಷ್ಟಿ ಸಾಧ್ಯವಾಗುವಂತೆ, ಪಾಠಕ್ಕೆ ಪ್ರಮಾಣ ಅತಿವಿಸ್ತಾರದಂತೆ, ಕಾವ್ಯಗಳನ್ನು ಅದರದರ ಸ್ವಭಾವಕ್ಕೆ ಉಚಿತವಾಗಿ ಸಂಗ್ರಹಿಸಿದರೆ ವಿದ್ಯಾರ್ಥಿಗಳಿಗೂ ಜನಸಾಮಾನ್ಯಕ್ಕೂ ಹಿತಕರವೂ ಪ್ರಯೋಜನಕರವೂ ಆಗಬಹುದೆಂಬ ನಂಬಿಕೆಯಿಂದ ಈ ಸಂಗ್ರಹಗಳನ್ನು ಮಾಡುತ್ತದೆ. ಇದರಲ್ಲಿ ಮುಖ್ಯ ಗಮನ—ಕಥಾಸರಣಿ ಕೆಡಬಾರದು; ಒಟ್ಟು ಕಥೆಯ ಸ್ವಾರಸ್ಯಕ್ಕೆ, ಪಾತ್ರನಿರೂಪಣಕ್ಕೆ ಭಂಗ ಬರಬಾರದು; ಅವಶ್ಯವಾದ ವರ್ಣನೆಯ ಮತ್ತು ವಿವರಣೆಯ ಸಾರ ಬಿಟ್ಟುಹೋಗಬಾರದು; ಎಲ್ಲಕ್ಕಿಂತ ಪ್ರಧಾನವಾದದ್ದು— ಕವಿಯ ವ್ಯಕ್ತಿತ್ವಕ್ಕೆ, ಆತನ ವಿಶೇಷ ಪ್ರತಿಭೆಗೆ ಲೋಪ ಬರಕೂಡದು. ಇಷ್ಟನ್ನೂ ಸಾಧಿಸುವುದು ಸಂಗ್ರಹಕಾರನ ಕರ್ತವ್ಯ; ಆದರೆ ಕಷ್ಟ. ನಿಸ್ಸಾರವಾದ ಚರ್ವಿತ ಚರ್ವಣವಾದ ಭಾಗಗಳನ್ನು ಮನಃಕ್ಲೇಶವಿಲ್ಲದೆ ಬಿಟ್ಟರೂ ಆತನು ಆಗಾಗ್ಗೆ ಧರ್ಮಸಂಕಟಕ್ಕೆ ಸಿಕ್ಕದೆ ಇರಲಾರನು. ಯಾವ ಸುಂದರವಾದ ಪ್ರಕರಣವನ್ನು ಉಳಿಸಿಕೊಳ್ಳಲಿ, ಈ ಭಾವವನ್ನೂ ಚಮತ್ಕಾರವನ್ನೂ ಹೇಗೆ ಬಿಡಲಿ ಎಂದು ಆತನು ತನ್ನೊಡನೆಯೇ ಹೋರಾಡದೆ ಇರನು. ತನ್ನ ಸಂಸ್ಕಾರವನ್ನೂ ಅಭಿರುಚಿಯನ್ನೂ ಪ್ರಮಾಣವಾಗಿಟ್ಟುಕೊಂಡರೂ, ತನ್ನ ಸಂಗ್ರಹ ಬಹುಜನ ಸಮ್ಮತವಾಗಬೇಕೆನ್ನುವುದನ್ನು ಮರೆಯನು. ಕೊನೆಗೆ ಸಹೃದಯರ ಕರುಣೆಗೆ ಸಂಗ್ರಹಕಾರನು ಶರಣನು.

ಈ ಸಂಪುಟದಲ್ಲಿ ಸಂಗ್ರಹಿಸಿರುವ ಚಾಮರಸನ ಪ್ರಭುಲಿಂಗಲೀಲೆ ಮತಗ್ರಂಥವಾದರೂ ಕನ್ನಡ ಸಾಹಿತ್ಯದಲ್ಲಿ ಅತ್ಯುತ್ತಮವಾದ ಕಾವ್ಯಗಳಲ್ಲಿ ಒಂದಾಗಿದೆ. ಸಾಹಿತ್ಯ ದೃಷ್ಟಿಯಿಂದ ಮುಖ್ಯವಾಗಿ ವಿದ್ಯಾರ್ಥಿಗಳು ಈ ಕಾವ್ಯಪರಿಚಯವನ್ನು ಮಾಡಿಕೊಳ್ಳಬೇಕೆಂಬ ಉದ್ದೇಶದಿಂದ ಇದನ್ನು ಸಂಗ್ರಹಿಸಿದೆ. ವಿಷಯ ಸಂಯೋಜನೆಯಲ್ಲಿಯೂ, ಕಥಾರಚನೆಯ

ಕೌಶಲ್ಯದಲ್ಲಿಯೂ, ಪಾತ್ರ ನಿರೂಪಣೆಯಲ್ಲಿಯೂ, ಸರಳ ಸಹಜರೀತಿ ಶೈಲಿಗಳಲ್ಲಿಯೂ ಚಾಮರಸನ ಕವಿತಾಮಾರ್ಗ ಉತ್ಕೃಷ್ಟವಾದುದು. ಈ ಕಾವ್ಯ ಸೌಂದರ್ಯಗಳನ್ನು ಸರ್ವರೂ ರುಚಿ ನೋಡಿ ಆನಂದಪಡಬಹುದಾಗಿದೆ. ಮತಗ್ರಂಥವಾದುದರಿಂದ ಸಿದ್ಧಾಂತ ಬೋಧನೆಯೂ, ಧರ್ಮೋಪದೇಶವೂ ಈ ಕಾವ್ಯದಲ್ಲಿ ಉಂಟು. ಇವೂ ಕೂಡ ಉದಾತ್ತಭಾವವುಳ್ಳ, ವಿಶಾಲ ಹೃದಯವುಳ್ಳ, ವಿವಿಧ ಮತಗಳ ನಾಮರೂಪಾಂತರಗಳಿಂದ ವಿಮುಖರಾಗದ ಎಲ್ಲಾ ಧರ್ಮಾಭಿಮಾನಿಗಳಿಗೂ ಆದರಣೀಯವಾಗಿವೆ. ಈ ಭಾಗದಲ್ಲಿ ವಿದ್ಯಾರ್ಥಿಗಳಿಗೆ ಸಾಹಿತ್ಯ ವ್ಯಾಸಂಗಕ್ಕೆ ಬೇಕಾದಷ್ಟು ನಿಷ್ಕೃಷ್ಟವಾದ ತಿಳಿವಳಿಕೆ ಹುಟ್ಟಬೇಕೆಂದು ಪೀಠಿಕೆಯಲ್ಲೂ, ಟಿಪ್ಪಣಿಯಲ್ಲೂ ವಿಚಾರಪೂರ್ವಕವಾಗಿ ಮತವಿಷಯಗಳನ್ನು ಸ್ಪಷ್ಟಪಡಿಸಿದೆ. ಮತೋದ್ಧಾರಕರ ಜೀವನಚರಿತೆಗಳಲ್ಲಿ ಕಂಡುಬರುವ ವ್ಯತ್ಯಾಸಗಳನ್ನು ಸಮಯೋಚಿತವಾಗಿ ತೋರಿಸಿದೆ. ಈ ವಿಮರ್ಶನ ಕಾರ್ಯವನ್ನು ಶ್ರದ್ಧೆಯಿಂದಲೂ, ಭಕ್ತಿಯಿಂದಲೂ ಮಾಡಿದೆ. ಏನಾದರೂ ನ್ಯೂನಾತಿರೇಕಗಳಿದ್ದಲ್ಲಿ ಪ್ರಾಜ್ಞರು ದಯವಿಟ್ಟು ತಿಳಿಸಿದರೆ ತಿದ್ದಬಹುದಾಗಿದೆ.

ಭಗವತ್ಕೃಪೆಯಿಂದಲೂ, ಕನ್ನಡಿಗರ ಸೌಹಾರ್ದ ಸಹಕಾರಗಳಿಂದಲೂ ಈ ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆ ಬೆಳೆಯುತ್ತಾ ಬರಲಿ ಎಂದು ಪ್ರಾರ್ಥಿಸುತ್ತೇನೆ.

ಬೆಂಗಳೂರು,
೨೮–೬–೧೯೩೪.

ಬಿ. ಎಂ. ಶ್ರೀಕಂಠಯ್ಯ,
ಸಮಿತಿಯ ಅಧ್ಯಕ್ಷ ಮತ್ತು ಪ್ರಧಾನ ಸಂಪಾದಕ.

# ವಿಷಯ ಸೂಚಿಕೆ

# ಸಂಕೇತಗಳ ವಿವರ

| | |
|---|---|
| ಅ. ದೇ. ರ. | ಅಮುಗಿ ದೇವಯ್ಯನ ರಗಳೆ |
| ಅ. ವ್ಯೋ. | ಅಲ್ಲಮ ವ್ಯೋಮ |
| ಕವಿ. ಚ. | ಕವಿಚರಿತ್ರೆ |
| ಕ. ಕ. ಜೀ. ವಿ. | ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ |
| ಗು. ರಾ. ಚಾ. | ಗುರುರಾಜ ಚಾರಿತ್ರ |
| ಚೆ. ಬ. ಪು. | ಚೆನ್ನಬಸವ ಪುರಾಣ |
| ಚೋ. ಬ. ಚ. | ಚೋರಬಸವ ಚರಿತ್ರೆ |
| ನಿ. ವಂ. ರ. | ನಿರಂಜನ ವಂಶ ರತ್ನಾಕರ |
| ಪ್ರ. ಕ. | ಪ್ರಬುದ್ಧ ಕರ್ಣಾಟಕ |
| ಪಾ. ಸೋ. ಪು. | ಪಾಲ್ಕುರಿಕೆ ಸೋಮನಾಥ ಪುರಾಣ |
| ಪ್ರ. ಕೋ. ಪ. | ಪ್ರಭುದೇವರ ಕೋಲು ಪದಗಳು |
| ಪ್ರ. ನ. ತಾ. | ಪ್ರಭುದೇವರ ನಟನ ತಾರಾವಳಿ |
| ಪ್ರ. ಪು. | ಪ್ರಭುದೇವರ ಪುರಾಣ |
| ಪ್ರ. ದೇ. ರ. | ಪ್ರಭುದೇವರ ರಗಳೆ |
| ಪ್ರ. ಸ್ತೋ. ಸಂ. | ಪ್ರಭುದೇವರ ಸ್ತೋತ್ರ ಸಂಗ್ರಹ |
| ಪ್ರ. ದೇ. ವ. | ಪ್ರಭುದೇವರ ವಚನಗಳು |
| ತೆ. ಪ್ರ. ಲೀ. (ಪಿ. ಬ.) | ಪ್ರಭುಲಿಂಗಲೀಲೆ—ತೆಲುಗು ಪಿಡುಪರ್ತಿ ಬಸವಕವಿ |
| ತೆ. ಪ್ರ. ಲೀ. (ಪಿ. ಸೋ.) | ಪ್ರಭುಲಿಂಗಲೀಲೆ—ತೆಲುಗು ಪಿಡುಪರ್ತಿ ಸೋಮನಾಥ |
| ತ. ಪ್ರ. ಲೀ. | ಪ್ರಭುಲಿಂಗಲೀಲೆ—ತಮಿಳು |
| ಸಂ. ಪ್ರ. ಲೀ. | ,, —ಸಂಸ್ಕೃತ |
| ಗ. ಪ್ರ. ಲೀ. | ,, —(ಗದ್ಯಾತ್ಮಕ) |
| ಪ್ರೌ. ಕಾ. | ಪ್ರೌಢರಾಯನ ಕಾವ್ಯ |
| ಬ. ಧ್ವಾಂ. ದಿ. | ಬಸವಧ್ವಾಂತ ದಿವಾಕರ |

| | |
|---|---|
| ಬ. ಪು. | ಬಸವ ಪುರಾಣ |
| ಭೈ. ಕಾ. | ಭೈರವೇಶ್ವರ ಕಾವ್ಯ |
| ಭೈ. ಕಾ. ಕ. ರ. | ಭೈರವೇಶ್ವರಕಾವ್ಯ ಕಥಾಸೂತ್ರ ರತ್ನಾಕರ |
| ಮ. ದೇ. ಪು. | ಮಹದೇವಿಯಕ್ಕನ ಪುರಾಣ |
| ಮ. ದೇ. ರ. | ಮಹದೇವಿಯಕ್ಕನ ರಗಳೆ |
| ರಾ. ಕಾ. | ರಾಘವಾಂಕನ ಕಾವ್ಯ |
| ರೇ. ಸಿ. ಪು. | ರೇವಣಸಿದ್ಧೇಶ್ವರ ಪುರಾಣ |
| ರೇ. ಸಿ. ರ. | ರೇವಣ ಸಿದ್ಧ ರಗಳೆ |
| ರೇ. ಸಾಂ. | ರೇವಣ ಸಾಂಗತ್ಯ |
| ವ. ಶಾ. ಸಾ. | ವಚನಶಾಸ್ತ್ರಸಾರ |
| ವೀ. ಧ. ಶಿ. | ವೀರಶೈವ ಧರ್ಮ ಶಿರೋಮಣಿ |
| ವೀ. ಮ. ಪು. | ವೀರಶೈವಾಮೃತ ಮಹಾಪುರಾಣ |
| ಶಿ. ಕ. ಸಾ. | ಶಿವಕಥಾಸಾಗರ |
| ಶಿ. ಚಿಂ. | ಶಿವತತ್ವ ಚಿಂತಾಮಣಿ |
| ಶಿ. ತ. ಮಂ. | ಶಿವಾದ್ವೈತಮಂಜರಿ |
| ಶಿ. ಸೂ. | ಶಿವಾನುಭವಸೂತ್ರ (ವ್ಯಾಖ್ಯಾನ) |
| ಶೂ. ಸಂ. | ಶೂನ್ಯ ಸಂಪಾದನೆ |
| ಶೂ. ಸ. (ಮು.) | ಶೂನ್ಯ ಸಂಪಾದನೆ—ಮುದ್ರಿತ (ಗೂಳೂರು ಸಿದ್ಧವೀರಣಾರ್ಯನದು) |
| ಸಿ. ಪು. | ಸಿದ್ಧರಾಮ ಪುರಾಣ |
| ಸಿಂ. ಪು. | ಸಿಂಗಿರಾಜ ಪುರಾಣ |
| ಸಿ. ಶಿ. | ಸಿದ್ಧಾಂತ ಶಿಖಾಮಣಿ |
| ಸೂ. ತ. | ಸೂಕ್ಷ್ಮತಂತ್ರ |
| Kan. Lit. | Kannada Literature by E. P. Rice |
| Tel. Lit. | Telugu Literature by Chenchaiya and Bhujanga Rao |

# ಪೀಠಿಕೆ

**I. ಪ್ರಭುಲಿಂಗಲೀಲೆಯ ಕರ್ತೃ.**—ಚಾಮರಸನು ಪ್ರಭುಲಿಂಗಲೀಲೆಯನ್ನು ಬರೆದಿರುವನೆನ್ನುವುದಕ್ಕೆ ಆ ಗ್ರಂಥದಲ್ಲಿ ಯಾವ ಆಧಾರಗಳೂ ಇದ್ದಂತೆ ತೋರುವುದಿಲ್ಲ. ಗ್ರಂಥಾರಂಭದಲ್ಲಾಗಲಿ ಗ್ರಂಥ ಮುಕ್ತಾಯದಲ್ಲಾಗಲಿ ಕವಿ ಪದ್ಧತಿಯಂತೆ ತನ್ನ ಹೆಸರು, ಗುರು ಮುಂತಾದುವನ್ನು ಹೇಳಿಕೊಂಡಿಲ್ಲ. ಆದರೆ ಹಲವು ಓಲೆಯ ಪ್ರತಿಗಳಲ್ಲಿ ಮೊದಲನೆಯ ಗತಿಯ ಷಟ್ಪದಿಗಳು ಆರಂಭವಾಗುವುದಕ್ಕೆ ಮುಂಚೆ ನಾಲ್ಕು ಕಂದಗಳೂ ಒಂದು ವೃತ್ತವೂ ಇವೆ.[1] ಅವುಗಳಲ್ಲಿ "......ಸಿಖಿಳಾಗಮ ನಿಪುಣಂ ಸುನಾಮ ಸೀಮಂ ಚಾಮಂ" ಎಂಬದಾಗಿಯೂ "ನಾನೊರೆವೆನಿಳೆಗೆ ವಸ್ತುಕದಿಂದಂ" ಎಂಬದಾಗಿಯೂ, ಇರುವುದರಿಂದ ಕವಿ ತನ್ನ ಹೆಸರನ್ನು ಸ್ಪಷ್ಟವಾಗಿ ಹೇಳಿಕೊಂಡಿದ್ದಾನೆಂದು ಬೇಕಾದರೆ ಭಾವಿಸಬಹುದು. ಕರ್ಣಾಟಕ ಕವಿಗಳು ತಮ್ಮ ಗ್ರಂಥಗಳನ್ನು ರಗಳೆಯಲ್ಲೋ ಷಟ್ಪದಿಗಳಲ್ಲೋ ಬರೆದಿರುವುದಾದರೂ ಗ್ರಂಥಾರಂಭದಲ್ಲಿ ಅಥವಾ ಪ್ರತಿ ಸಂಧಿಯ ಆರಂಭದಲ್ಲಿ ಕಂದ ಮತ್ತು ವೃತ್ತಗಳನ್ನು ಬರೆದಿರುವ ಕೆಲವು ಉದಾಹರಣೆಗಳುಂಟು.[2]

ಪ್ರಭುಲಿಂಗಲೀಲೆಯ ಕರ್ತೃ ಚಾಮರಸನೆನ್ನುವುದು ಪ್ರಮಾಣಾಂತರಗಳಿಂದ ಸಿದ್ಧವಾಗುತ್ತದೆ.[3] ಕನ್ನಡ ಕವಿಗಳಲ್ಲಿ ಅದೃಶ್ಯಕವಿ, ಸಿದ್ಧನಂಜೇಶ, ಶಾಂತಲಿಂಗದೇಶಿಕ ಮುಂತಾದವರು ಈ ವಿಷಯವನ್ನು ಸ್ಪಷ್ಟವಾಗಿ ಹೇಳಿದ್ದಾರೆ. ಎರಡನೆಯದಾಗಿ, ಅನೇಕ ವೀರಶೈವ ಕವಿಗಳು ಪೂರ್ವ

---

1. ಪರಿಶಿಷ್ಟವನ್ನು I (i) ನೋಡಿ. ಕೆಲವು ಪ್ರತಿಗಳಲ್ಲಿ ಕೆಲವು ಗತಿಗಳವರೆಗೆ ಪ್ರತಿ ಗತಿಯ ಪ್ರಾರಂಭದಲ್ಲಿಯೂ ಒಂದೊಂದು ಕಂದ ಪದ್ಯವಿದೆ. 2. ಹರೀಶ್ವರನು ಬರೆದಿರುವ ಶರಣ ರಗಳೆ, ಪ್ರಸನ್ನ ಶಂಕರ ಲಿಂಗಾಂಕಿತ ಕೆಲವು ರಗಳೆಗಳು, ಸಾನಂದ ಪುರಾಣದ ಕೆಲವು ಸಂಧಿಗಳು, ಭೈರವೇಶ್ವರಕಾವ್ಯ. 3. ಪ್ರೌ. ಕಾ. ಸಂಧಿ 21, ಪದ್ಯಗಳು 30–31 ; ರಾ. ಕಾ ಸಂಧಿ 14, ಪದ್ಯ 2 ; ಗು. ರಾ. ಚಾ. ಸಂಧಿ 13, ಪದ್ಯ 33 ; ಭೈ. ಕಾ. ಕ. ರ. ಸಂಪುಟ I, ಪುಟ 79–80.

ಕವಿಸ್ತವಾವಸರದಲ್ಲಿ ಚಾಮರಸನ ಹೆಸರನ್ನೂ ಸೇರಿಸಿದ್ದಾರೆ. ಮೂರನೆಯದಾಗಿ ಪ್ರಭುಲಿಂಗಲೀಲೆಯನ್ನು ತೆಲುಗಿನಲ್ಲಿ ಬರೆದ ಪಿಡುಪರ್ತಿ ಸೋಮನಾಥನೂ[4] ಪಿಡುಪರ್ತಿ ಬಸವಕವಿಯೂ[5] ಕನ್ನಡದ ಪ್ರಭುಲಿಂಗಲೀಲೆಯನ್ನು ಚಾಮರಸ ಬರೆದನೆಂದೂ, ಅದನ್ನು ತಾವು ತೆಲುಗಿನಲ್ಲಿ ಬರೆದೆವೆಂದೂ ಹೇಳಿದ್ದಾರೆ. ಈ ಪ್ರಬಲವಾದ ಪ್ರಮಾಣಗಳಿಂದ ಪ್ರಭುಲಿಂಗಲೀಲೆಯನ್ನು ಚಾಮರಸ ಬರೆದನೆಂದು ನಿಷ್ಕರ್ಷಿಸಬಹುದು.

**II. ಚಾಮರಸನ ಕಾಲ.**—ಚಾಮರಸನ ಕಾಲವನ್ನು [6]ಡಾ॥ ಕಿಟ್ಟೆಲ್ ಅವರು ಸುಮಾರು ಕ್ರಿ. ಶ. 1460 ಎಂದೂ, [7]ರಾ. ನರಸಿಂಹಾಚಾರ್ಯರು ಮತ್ತು ಇ. ಪಿ. ರೈಸ್ ಅವರು ಕ್ರಿ. ಶ. ಸುಮಾರು 1430 ಎಂದೂ ಹೇಳಿದ್ದಾರೆ. [8]ಪಂಡಿತ ಸುಬ್ರಾಯಶಾಸ್ತ್ರಿಗಳು ಕನ್ನಡ ಭಾರತ ಕರ್ತನ ವಿಚಾರವಾಗಿ ಬರೆಯುತ್ತ ಚಾಮರಸನು ಹರೀಶ್ವರ ಮತ್ತು ರಾಘವಾಂಕರ ಸಮಕಾಲೀನನಾಗಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ. ಹರೀಶ್ವರ ಮತ್ತು ರಾಘವಾಂಕರ ಕಾಲವನ್ನು [9]ರಾ. ನರಸಿಂಹಾಚಾರ್ಯರು ಮತ್ತು[10] ಇ. ಪಿ. ರೈಸ್ ಅವರು ಸುಮಾರು ಕ್ರಿ. ಶ. 1165 ಎಂಬದಾಗಿಯೂ, [11]ಡಾ॥ ವೆಂಕಟಸುಬ್ಬಯ್ಯ ಅವರು ಕ್ರಿ. ಶ. ಹದಿಮೂರನೆಯ ಶತಮಾನದ ಉತ್ತರಾರ್ಧವೆಂಬದಾಗಿಯೂ ಹೇಳಿದ್ದಾರೆ. ಕವಿ ತನ್ನ ಗ್ರಂಥ ಮುಕ್ತಾಯಮಾಡಿದ ಕಾಲವನ್ನು ಹೇಳದೆ ಇರುವುದು ಈ ಭಿನ್ನಾಭಿಪ್ರಾಯಗಳಿಗೆ ಸ್ವಲ್ಪಮಟ್ಟಿಗೆ ಕಾರಣವಾಗಿದೆ. ಆದರೆ ಅದಕ್ಕಿಂತ ಹೆಚ್ಚಾಗಿ ವೀರಶೈವ ಗ್ರಂಥಗಳಲ್ಲಿ ಬರುವ ಎರಡು ಕಥೆಗಳು ಈ ಭಿನ್ನಾಭಿಪ್ರಾಯಗಳಿಗೆ ಮುಖ್ಯ ಕಾರಣಗಳೆಂದು ಹೇಳಬೇಕು. ಈ ಕಥೆಗಳಲ್ಲಿ ಮೊದಲನೆಯದು [12]ಚಾಮರಸ ಮತ್ತು ಕುಮಾರ ವ್ಯಾಸರಿಗೆ ಸಂಬಂಧಪಟ್ಟದ್ದು; ಎರಡನೆಯದು [13]ಕುಮಾರವ್ಯಾಸ ಮತ್ತು ರಾಘವಾಂಕರಿಗೆ ಸಂಬಂಧಪಟ್ಟದ್ದು. ಮೊದಲನೆಯ ಕಥೆಯಿಂದ ಚಾಮರಸನ ತಂಗಿಯನ್ನು ಕುಮಾರವ್ಯಾಸನಿಗೆ ಕೊಟ್ಟು ಮದುವೆಯಾಗಿತ್ತೆಂದೂ,

---

4. ಪ್ರ. ಲೀ. ತೆ. (ಪಿ. ಸೋ.) ಪುಟ 166. 5. ಪ್ರ. ಲೀ. ತೆ. (ಪಿ. ಬ.) ಪುಟ 94. 6. ಡಾ॥ ಕಿಟ್ಟೆಲ್ ಅವರ ನಿಘಂಟು, ಪೀಠಿಕೆ ಪುಟ vi. 7. ಕವಿ ಚ. ಸಂಪುಟ II, ಪುಟ 59; Kan. Lit. ಪುಟ 68. 8. ಪ್ರ. ಕ. ಸಂಪುಟ IV, ದೀಪಾವಳಿಯ ಸಂಚಿಕೆ, ಪುಟಗಳು 5–16. 9. ಕವಿ ಚ. ಸಂಪುಟ I, ಪುಟ 168. 10. Kan. Lit. ಪುಟ 55. 11. ಕ. ಕ. ಜೀ. ವಿ. ಪುಟ 166. 12. ಗು. ರಾ. ಚಾ. ಸಂಧಿ 13. 13. ರಾ. ಕಾ. ಸಂಧಿ 14.

ಗದುಗಿನ ದೊರೆಯಾದ ದೇವರಾಯನು ಭಾರತವನ್ನು ಕನ್ನಡದಲ್ಲಿ ಬರೆಯಿರಿ ಎಂದು ಆಜ್ಞೆಮಾಡಿದಾಗ ಕುಮಾರವ್ಯಾಸನು ಮೊದಲ ಐದು ಪರ್ವಗಳನ್ನೂ ಚಾಮರಸನು ಅದರ ಮುಂದಿನ ಐದು ಪರ್ವಗಳನ್ನೂ ಬರೆದು ಒಪ್ಪಿಸಲು, ಪಂಡಿತರು ಚಾಮರಸನ ಕೃತಿ ಉತ್ತಮವಾದುದೆಂದು ಹೇಳಿದಂತೆಯೂ, ಕುಮಾರವ್ಯಾಸನು ಚಿಂತಾಕ್ರಾಂತನಾಗಿ ಮನೆಗೆ ಹೋಗಲು ಅವನ ಹೆಂಡತಿ ಚಿಂತೆಗೆ ಕಾರಣವನ್ನು ತಿಳಿದು ತನ್ನ ಅಣ್ಣನ ಕೃತಿಯನ್ನು ಸುಟ್ಟು ಭಸ್ಮಮಾಡಿ ಗಂಡನನ್ನು ಸಮಾಧಾನಪಡಿಸಿದಂತೆಯೂ, ತರುವಾಯ ಚಾಮರಸನು ವೀರಶೈವ ದೀಕ್ಷೆ ಪಡೆದು ಪ್ರಭುಲಿಂಗಲೀಲೆಯನ್ನು ಬರೆದಂತೆಯೂ, ಆ ಪ್ರಭುಲಿಂಗಲೀಲೆಯನ್ನು ದೊರೆ ಆನೆಯ ಮೇಲಿಟ್ಟು ಮೆರೆವಣಿಗೆ ಮಾಡಿಸಿದಂತೆಯೂ ತಿಳಿಯುತ್ತದೆ.

ಎರಡನೆಯ ಕಥೆಯಿಂದ ಕುಮಾರವ್ಯಾಸನು ಹರಿಹರ ಮತ್ತು ರಾಘವಾಂಕರನ್ನು ಸೋಲಿಸಬೇಕೆಂದು ಹಂಪೆಗೆ ಹೋದಂತೆಯೂ, ಅಲ್ಲಿ ರಾಘವಾಂಕನ ಪಾಂಡಿತ್ಯ ಮತ್ತು ಕವಿತಾ ಸಾಮರ್ಥ್ಯಗಳಿಂದ ಜಿತನಾಗಿ ರಾಘವಾಂಕನನ್ನು ಹೊಗಳಿ ಅವನಿಂದ [14]ಹರಿಹರನ ಮಹತ್ವವನ್ನು ಕೇಳಿ ಕೃತಾರ್ಥನಾದಂತೆಯೂ ತಿಳಿಯುತ್ತದೆ.

ಒಬ್ಬ ಕವಿ ಇನ್ನೊಬ್ಬನಿಗಿಂತ ಉತ್ತಮನೆಂದು ತೋರಿಸುವುದಕ್ಕೆ ಎಲ್ಲ ಸಾಹಿತ್ಯಗಳಲ್ಲಿಯೂ ದಂತಕಥೆಗಳು ಇರುವುದುಂಟು. ಅನೇಕ ವೇಳೆ ಈ ದಂತ ಕಥೆಗಳು ಕವಿಗಳ ಕಾಲ ನಿರ್ಣಯಕ್ಕೆ ಸಹಾಯಮಾಡುವುದಿಲ್ಲ. ಆದುದರಿಂದ ಇವುಗಳನ್ನು ಬಿಟ್ಟು ಚಾಮರಸನು ಕ್ರಿ. ಶ. 1430 ಸುಮಾರಿನಲ್ಲಿ ಇದ್ದಿರಬೇಕೆಂದು ಮುಂದೆ ಹೇಳಿರುವ ಕಾರಣದಿಂದ ನಿಶ್ಚಯಿಸುವುದೇ ಯುಕ್ತವಾಗಿದೆ. ಪ್ರೌಢದೇವರಾಯನ ಕಾಲದಲ್ಲಿ ನೂರೊಂದು ವಿರಕ್ತರು ಇದ್ದರೆಂದು ವೀರಶೈವ ಗ್ರಂಥಗಳು ಹೇಳುತ್ತವೆ. ಚಾಮರಸ, ಜಕ್ಕಣಾರ್ಯ, ಲಕ್ಕಣ್ಣ ದಂಡೇಶ ಮುಂತಾದವರೆಲ್ಲ ಈ ನೂರೊಂದು ವಿರಕ್ತರಲ್ಲಿ ಸೇರಿದವರೆಂದು ಗ್ರಂಥಗಳು ತಿಳಿಸುತ್ತವೆ. ಚಾಮರಸ ಮತ್ತು ಜಕ್ಕಣಾರ್ಯರ ವಿಚಾರದಲ್ಲಿ ಸ್ಪಷ್ಟವಾದ ಶಾಸನಾಧಾರಗಳಿಲ್ಲ

14. ರಾಘವಾಂಕನ ಸೋದರಮಾವನೂ ಕವಿಯೂ ಆದ ಹರಿಹರ, ಗುಹಾಸುರನ ಸಂಹಾರಾರ್ಥವಾಗಿ ಅವತಾರಮಾಡಿದ ಹರಿಹರನಲ್ಲ.

ದಿದ್ದರೂ ಲಕ್ಕಣ್ಣ ದಂಡೇಶನ ವಿಚಾರದಲ್ಲಿ ಅಂತಹ ಆಧಾರಗಳಿರುವುದರಿಂದಲೂ,[15] ಪ್ರೌಢದೇವರಾಯನಲ್ಲಿ ಅವನು ಮಂತ್ರಿಯಾಗಿದ್ದನೆಂದು ಅವುಗಳಿಂದ ಸಿದ್ಧಿಸುವುದರಿಂದಲೂ, ಸಮಕಾಲೀನನಾದ ಚಾಮರಸನು ಕ್ರಿ. ಶ. 1430ರ ಸುಮಾರಿನಲ್ಲಿ ಇದ್ದಿರಬೇಕೆಂದು ಹೇಳಬೇಕಾಗುತ್ತದೆ.

**III. ಚಾಮರಸನ ಜೀವನ ಚರಿತ್ರೆ.**—ಚಾಮರಸನ ವಿಚಾರವಾಗಿ ನಮಗೆ ಹೆಚ್ಚು ಸಂಗತಿಗಳು ತಿಳಿದಿಲ್ಲ. ಆತನು ತನ್ನ ತಂದೆತಾಯಿಗಳು, ಗುರು, ಹುಟ್ಟಿದ ಸ್ಥಳ ಮುಂತಾದುವಾವುದನ್ನೂ ಹೇಳಿಕೊಂಡಿಲ್ಲ. ಕರಸ್ಥಲದ ವೀರಣ್ಣೊಡೆಯ, ನಾಗಿದೇವ ಮುಂತಾದ ವಿರಕ್ತರ ಚರಿತ್ರೆಗಳು, ನಾಗಲಿಂಗನ ಕಥೆ, ವಿರಕ್ತರ ಕಾವ್ಯ ಮುಂತಾದ ಗ್ರಂಥಗಳಲ್ಲಿ ದೊರೆಯುತ್ತವೆ. ಆದರೆ ಚಾಮರಸನ ವೃತ್ತಾಂತ ಮಾತ್ರ ಆ ಗ್ರಂಥಗಳಲ್ಲಿ ಇಲ್ಲ.

ಚಾಮರಸನು ಹಿಂದಿನ ಜನ್ಮದಲ್ಲಿ ಒಂದು ಇರುವೆಯಾಗಿದ್ದನೆಂದೂ, ಕಕ್ಕಯ್ಯನ ಪ್ರಸಾದವನ್ನು ಬಸವಣ್ಣನವರಿಗೆ ತಂದುಕೊಟ್ಟನೆಂದೂ [16]ಗುರುರಾಜ ಚಾರಿತ್ರದಲ್ಲಿ ಹೇಳಿದೆ. ಆತನ ಮನುಷ್ಯ ಜನ್ಮದ ವೃತ್ತಾಂತವನ್ನು ನೋಡಿದರೆ, ಹುಟ್ಟಿದ ಸ್ಥಳದ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿವೆ. ಚಾಮರಸನು ನಾಗಣಪುರದವನೆಂದು [17]ಪ್ರಭುದೇವರ ಸಾಂಗತ್ಯದಲ್ಲಿ ಹೇಳಿದೆ. ಆತನು ಗದುಗಿನವನೆಂದು [18]ಗುರುರಾಜ ಚಾರಿತ್ರ, [19]ಚೋರಬಸವ ಚರಿತ್ರೆ ಮುಂತಾದುವುಗಳಲ್ಲಿ ಹೇಳಿದೆ. ಪ್ರೌಢರಾಯನ ಕಾವ್ಯ, ಭೈರವೇಶ್ವರ ಕಾವ್ಯಕಥಾಸೂತ್ರ ರತ್ನಾಕರಗಳಿಂದ ಆತನು ವಿಜಯನಗರದ ಪ್ರೌಢದೇವರಾಯನ ಆಸ್ಥಾನದಲ್ಲಿದ್ದನೆಂದು ತಿಳಿದುಬರುತ್ತದೆ.

ನೂರೊಂದು ವಿರಕ್ತರಿಗೆ [20]ಶಂಕರಾಚಾರ್ಯ ಸ್ವಾಮಿಗಳೆಂಬವರು ಷಟ್ಸ್ಥಲ ಜ್ಞಾನೋಪದೇಶ ಮಾಡಿದಂತೆ ತಿಳಿಯುವುದರಿಂದ ಈ ಶಂಕರಾಚಾರ್ಯಸ್ವಾಮಿಗಳು ಚಾಮರಸನಿಗೆ ಗುರುವಾಗಿದ್ದಿರಬಹುದು. ಆದರೆ ರಾಘವಾಂಕರ ಕಾವ್ಯ, ಚೋರಬಸವ ಚರಿತ್ರಾದಿಗಳ ಪ್ರಕಾರ ಉದ್ದಾನಿಯ

---

15. ಮುಳಬಾಗಿಲಿನ ಶಾಸನಗಳು ೩, ೯೬; ಕೋಲಾರ 104 ; ಬೌರಿಂಗಪೇಟೆ 72, 87; ಇತ್ಯಾದಿ. 16. ಸಂಧಿ ೧೩, ಪದ್ಯ ೧೩. 17. ಪ್ರ. ಸಾಂ. ಪುಟ ೨, ಪದ್ಯ ೧೨. 18. ಸಂಧಿ ೧೩, ಪದ್ಯಗಳು ೨೭—೩೩. 19. ಚೋ. ಬ. ಚ. ಸಂಧಿ ೧, ಪದ್ಯಗಳು ೩೧—೩೬. 20. ನಿ. ವಂ. ರ. ಪುಟ ೩೩.

ವೀರೇಶನೇ ಲಿಂಗದಿಂದ ಮೂಡಿಬಂದು ಉಪದೇಶಮಾಡಿ ಗುರುವಾದಂತೆ ತೋರಿಬರುತ್ತದೆ.

ಚಾಮರಸನು ಜನ್ಮತಃ ವೀರಶೈವನೆಂದು ನಾವು ಅಭಿಪ್ರಾಯ ಪಡುತ್ತೇವೆ. ಆತನನ್ನು "ಅನ್ಯಮತ ಕೋಳಾಹಲ", "ವೀರಶೈವಾ ಚಾರಮಾರ್ಗ ಸಾರೋದ್ಧಾರ" ಎಂಬ ಬಿರುದುಗಳಿಂದ [21]ಸಿದ್ಧಸಂಜೀಶನು ಹೊಗಳಿದ್ದಾನೆ. ಆದರೆ ಚಾಮರಸನು ಕೆರೆಯ ಪದ್ಮರಸ, ಚತುರ್ಮುಖ ಬೊಮ್ಮರಸಾದಿಗಳಂತೆ ವಾದ ವಿವಾದಗಳನ್ನು ಮಾಡಿದನೆಂದು ಗ್ರಂಥಗಳಲ್ಲಿ ಹೇಳಿಲ್ಲ. ಮುಕುಂದ ಪೆದ್ದಿ ಮತ್ತು ಕುಮಾರವ್ಯಾಸರ ಹೆಸರುಗಳು ಚಾಮರಸನ ಜೀವನ ಕಥಾ ಸಂದರ್ಭದಲ್ಲಿ ಬರುವುವಾದರೂ ಅವರು ವಾದ ಗಳನ್ನು ಮಾಡಿದರೆಂದಾಗಲಿ, ಚಾಮರಸನು ಅವರನ್ನು ಸೋಲಿಸಿದ ನೆಂದಾಗಲಿ ವೀರಶೈವ ಗ್ರಂಥಗಳಲ್ಲಿ ಹೇಳಿಲ್ಲ.[22]

ಚಾಮರಸನು ಲೌಕಿಕದಲ್ಲಿ ಉನ್ನತ ಸ್ಥಾನವನ್ನು ಪಡೆದಿದ್ದನೆಂದು ಪ್ರೌಢರಾಯನ ಕಾವ್ಯವು ತಿಳಿಸುತ್ತದೆ. ಪ್ರಭುಲಿಂಗಲೀಲೆಯನ್ನು ಪಂಥದ ಪ್ರಕಾರ ಚಾಮರಸನು ತಂದ ಮೇಲೆ ಜಕ್ಕಣಾರ್ಯನು ಅದರ ಅರ್ಥ ವಿವರಣೆಯನ್ನು ಮಾಡಿದಂತೆಯೂ, ಪ್ರೌಢದೇವರಾಯನು ಮೆಚ್ಚಿ ಕೊಂಡಂತೆಯೂ, ಅನಂತರ ಜಕ್ಕಣಾರ್ಯನು ಮಂತ್ರಿಪದವಿಯಿಂದ ನಿವೃತ್ತನಾಗಿ [23]ತನ್ನ ಕೆಲಸವನ್ನು ಚಾಮರಸನಿಗೆ ಮಾಡಿಕೊಟ್ಟಂತೆಯೂ ಅದರಲ್ಲಿ ಹೇಳಿದೆ. ಆದರೆ ಇದಕ್ಕೆ ಉಪಷ್ಟಂಭಕಗಳಾಗಿ ಇತರ ಗ್ರಂಥಗಳಲ್ಲಿ ಏನೂ ದೊರೆಯುವುದಿಲ್ಲ.

---

21. ಗು. ರಾ. ಚಾ. ಸಂಧಿ 13, ಪದ್ಯ 27. 22. ಶ್ರೀಮಾನ್ ಎಸ್. ಶ್ರೀಕಂಠಶಾಸ್ತ್ರಿ, ಎಂ.ಎ. ಅವರು ಇಂಡಿಯನ್ ಆಂಟಿಕ್ವರಿ ಸಂಪುಟ LVII, (1928) ಪುಟ 79ರಲ್ಲಿ ಚಾಮರಸನ ವಿಚಾರಕ್ಕೆ "He defeated in linguistic disputations both the Vaishnava Acharya Mukunda Peddi and the Smartha Poet Kumara Vyasa" ಎಂದು ಬರೆದಿದ್ದಾರೆ. ಇದಕ್ಕೆ ಆಧಾರಗಳು ನಮಗೆ ಕಂಡುಬಂದಿಲ್ಲ. 23. ಪ್ರೌ. ಕಾ. ಸಂಧಿ ೨೧, ಪದ್ಯ ೩೪. ದಾವಣಗೆರೆಯ 29ನೆಯ ಶಾಸನದಲ್ಲಿ ಒಬ್ಬ ಚಾಮನೃಪಾಲ ಅಥವಾ ಚಾಮರಾಜನ ವಿಚಾರ ವಿದೆ. ಇವನು ಪ್ರೌಢದೇವರಾಯನ ಸಮಕಾಲೀನನಾಗಿಯೂ, ಪ್ರೌಢರಾಯನ ಸಮಸ್ತ ಸೈನ್ಯಾಧ್ಯಕ್ಷನಾಗಿಯೂ ಇದ್ದಂತೆ ಅದರಲ್ಲಿ ಹೇಳಿದೆ. ಇವನೇ ಚಾಮರಸನೆಂದು ಹೇಳುವುದಕ್ಕೆ ತಕ್ಕ ಪ್ರಮಾಣಗಳಿಲ್ಲ. ಜಕ್ಕನ್ನ ಎಂಬ ಆಂಧ್ರಕವಿಯ ವಿಕ್ರಮಾಂಕ ಚರಿತ್ರದಲ್ಲಿ ಒಬ್ಬ

**IV. ಅಲ್ಲಮನ ವಿಚಾರ.**—ಪ್ರಭುಲಿಂಗಲೀಲೆ [24]ಅಲ್ಲಮನ ಚರಿತ್ರೆಯಾಗಿದೆ. ಅಲ್ಲಮನಿಗೆ ಪ್ರಭುದೇವರೆಂದೂ ಅಲ್ಲಮ ಪ್ರಭುವೆಂದೂ ನಾಮಾಂತರಗಳುಂಟು. ಅಲ್ಲಮನು ಸಾಮಾನ್ಯನಲ್ಲ, ಪರಶಿವನ ಅವತಾರ. ಸಾಕ್ಷಾತ್ ಶಿವರೂಪಿಯೆಂದು ಆತನನ್ನು ಶಿವಶರಣರು ಜೀವಿತ ಕಾಲದಲ್ಲಿಯೇ ತಿಳಿದಿದ್ದರು. ವೀರಶೈವೋದ್ಧರಣದ ಕಾಲಕ್ಕೆ ತಲೆದೋರಿ, ಬಸವಾದಿ ಪ್ರಮಥರಿಗೆ ಬೆಂಬಲವಾಗಿ ನಿಂತು ಎಲ್ಲರಿಗೂ ಜ್ಞಾನಬೋಧೆಯನ್ನು ಮಾಡಿದ ಮಹಾತ್ಮನಾತನು; ಶಿವಶರಣರಲ್ಲೆಲ್ಲ ಅತ್ಯಂತ ಮೇಧಾವಿಯೂ ವೈರಾಗ್ಯಪರನೂ ಜ್ಞಾನಸಂಪನ್ನನೂ ಆದ ಮಹಾತ್ಮನಾತನು. ಬಸವೇಶ್ವರನನ್ನು ಉತ್ಸವ ಮೂರ್ತಿಯಾಗಿ ನಿಲ್ಲಿಸಿ ವೀರಶೈವೋದ್ಧಾರದ ಮಹೋತ್ಸವವನ್ನು ಸಾಂಗವಾಗಿ ನೆರವೇರಿಸಿದ ಮಹಾತ್ಮನಾತನು.

ಕ್ರಿ. ಶ. ಹನ್ನೆರಡನೆಯ ಶತಮಾನದ ಮಧ್ಯಭಾಗದಲ್ಲಿ ಶೈವ-ವೀರಶೈವಗಳ ಜೀರ್ಣೋದ್ಧಾರವು ಕರ್ಣಾಟಕ ದೇಶದಲ್ಲಿ ಬಹಳ ಹುರುಪಿನಿಂದ ನಡೆಯಿತು. ಕಾಶ್ಮೀರ ಪ್ರಾಂತವು ಮುಸಲ್ಮಾನರಿಂದ ಆಕ್ರಾಂತವಾಗಿ ಅಲ್ಲಿದ್ದ ಶೈವ ಪಂಡಿತರು ದಕ್ಷಿಣ ಹಿಂದೂಸ್ಥಾನಕ್ಕೆ ಬಂದು ನೆಲಸಿದ್ದು ಇದಕ್ಕೆ ಒಂದು ಕಾರಣ. ತಮಿಳು ನಾಡಿನಲ್ಲಿ ಪೆರಿಯ ಪುರಾಣದ ರಚನೆಯೂ ಶೈವಭಕ್ತಿ ಪಂಥದ ಪ್ರಚಾರವೂ ಉಂಟಾಗಿ, ಆ ಭಕ್ತಿ ಪ್ರವಾಹವು ಕರ್ಣಾಟಕ ದೇಶಕ್ಕೂ ಬಂದುದು ಇನ್ನೊಂದು ಕಾರಣ. ಆಗ ಕರ್ಣಾಟಕ ದೇಶದಲ್ಲಿ ವೀರಶೈವ ಮತೋದ್ಧಾರದ ಕೇಂದ್ರಗಳು ಮೂರು ಇದ್ದುವೆಂದು ಹೇಳಬಹುದು. ಉತ್ತರದಲ್ಲಿ ಸೊನ್ನಲಾಪುರ, ಮಧ್ಯದಲ್ಲಿ ಕಲ್ಯಾಣ ಪಟ್ಟಣ, ದಕ್ಷಿಣದಲ್ಲಿ ಬಳ್ಳಿಗಾವೆ. ಸೊನ್ನಲಾಪುರದಲ್ಲಿ

---

ಚಾಮನಾಮಾತ್ಯನ ಉಲ್ಲೇಖವಿದೆ. ಇವನು, ಪ್ರೌಢದೇವರಾಯನಲ್ಲಿ ಮಂತ್ರಿಯಾಗಿದ್ದನೆಂದೂ ತಿಳಿಯುತ್ತದೆ. ಆದರೆ ಚಾಮನಾಮಾತ್ಯನು ವೀರಶೈವನೆಂದಾಗಲಿ, ಚಾಮರಸನೇ ಆಗಿರುವನೆಂದಾಗಲಿ ಹೇಳುವಷ್ಟು ಆಧಾರಗಳು ವಿಕ್ರಮಾಂಕ ಚರಿತ್ರೆಯಲ್ಲಿ ಇಲ್ಲ. ಶ್ರೀಮಾನ್ ಎಸ್. ಶ್ರೀಕಂಠಶಾಸ್ತ್ರಿಗಳು ಇಂಡಿಯನ್ ಆಂಟಿಕ್ವೆರಿ ಸಂಪುಟ LVII, ಪುಟ 79ರಲ್ಲಿ ಪ್ರಭುಲಿಂಗಲೀಲಾ ಕರ್ತೃ ಚಾಮರಸನನ್ನು ಉದ್ದೇಶಿಸಿ, "This Chamarasa was evidently the patron of Siddhanna Mantri, who in turn patronised the Telugu poet Jakkanna who wrote Vikramarka Charitramu" ಎಂದು ಬರೆದಿದ್ದಾರೆ. ಇದು ಸಾಧುವೆಂದು ನಮಗೆ ತೋರುವುದಿಲ್ಲ. 24. ಶಿವಶರಣನಾದ ಅಲ್ಲಯ್ಯನೆಂಬವನು ಬೇರೆ ಇದ್ದಾನೆ. ಇವನ ವಿಚಾರ ಶಿ. ಕ. ಸಾ. ಕಥೆ ೮೬ರಲ್ಲಿದೆ.

ಮೃಡಮೂರ್ತಿಯೆಂದೆನಿಸಿದ ಸಿದ್ಧರಾಮನು ಪ್ರಸಿದ್ಧ ಪವಾಡ ಪುರುಷನಾಗಿ ಕರ್ಮಯೋಗತತ್ಪರನಾಗಿ ಕ್ಷೇತ್ರಪತಿಯಾಗಿದ್ದನು. ಕಲ್ಯಾಣ ಪಟ್ಟಣದಲ್ಲಿ ನಂದೀಶ್ವರಾವತಾರವೆನಿಸಿದ ಬಸವೇಶ್ವರನು ಜಂಗಮಪ್ರಾಣನಾಗಿ ಭಕ್ತಿ ಯೋಗತತ್ಪರನಾಗಿ ಕ್ಷೇತ್ರಪತಿಯಾಗಿದ್ದನು. ಬಳ್ಳಿಗಾವೆ ಬನವಸೆ ಪ್ರಾಂತ ಗಳಲ್ಲಿ ಪರಶಿವಮೂರ್ತಿಯೆನಿಸಿದ ಅಲ್ಲಮನು ನಿರಂಜನ ಲಿಂಗವಾಗಿ ಜ್ಞಾನ ಯೋಗತತ್ಪರನಾಗಿ ಕ್ಷೇತ್ರಪತಿಯಾಗಿದ್ದನು. ಈ ಮೂವರು ಮಹಾತ್ಮರು ಹೀಗೆ ಬೇರೆ ಬೇರೆ ಕಡೆಗಳಲ್ಲಿ ಕೆಲಸಮಾಡುತ್ತಿದ್ದರೂ, ಅವರವರ ಕಾರ್ಯ ಕಲಾಪಗಳೂ ಮಹಿಮೋನ್ನತಿಯೂ ಪರಸ್ಪರವಾಗಿ ತಿಳಿದಿದ್ದುವು. ಕರ್ಮ ಭಕ್ತಿ ಜ್ಞಾನಗಳು ಕಲ್ಯಾಣ ಪಟ್ಟಣದಲ್ಲಿ ಏಕತ್ರ ಸೇರಿ ವೀರಶೈವ ಮತೋದ್ಧಾರದ ಕಾರ್ಯವು ಅಲ್ಲಿಂದ ನೆರವೇರುವುದೇ ಉತ್ತಮವೆಂದು ಅಲ್ಲಮಪ್ರಭು ಆಲೋಚಿಸಿದಂತೆ ತೋರುತ್ತದೆ. ಆದುದರಿಂದ ಆತನು ಕಲ್ಯಾಣ ಪಟ್ಟಣಕ್ಕೆ ಹೋಗಿ ಶಿವಾನುಭವಗೋಷ್ಠಿಯ ಅಧ್ಯಕ್ಷಸ್ಥಾನವನ್ನು ಅಲಂಕರಿಸಿದನು.

ಮೇಲೆ ಹೇಳಿದ ಮೂವರು ಮಹಾತ್ಮರಲ್ಲಿ ಸಿದ್ಧರಾಮನೂ ಬಸವೇಶ್ವರನೂ ಇನ್ನೂ ಸಾಧನೆಯಲ್ಲಿ ನಿರತರಾಗಿದ್ದರೆಂದು ಹೇಳಬಹುದು. ಅಲ್ಲಮ ಪ್ರಭುವಾದರೋ,—ಆತನ ವಚನಗಳನ್ನು ನೋಡಿದರೆ—ಮೊದಲಿನಲ್ಲೇ ಪರಿಪೂರ್ಣನಾಗಿ ಜಿತಕಾಮನಾಗಿ ವೈರಾಗ್ಯಮೂರ್ತಿಯಾಗಿ ಗೋಚರಿಸುತ್ತಾನೆ. ಆ ಜೀವವು ಪಕ್ವಸ್ಥಿತಿಗೆ ಬಂದ ಮೆಟ್ಟಲುಗಳು ನಮಗೆ ಕಾಣುವುದಿಲ್ಲ. ಆತನಲ್ಲಿ ಸಂಕಲ್ಪಸಿದ್ಧಿ ಮಹತ್ತಾಗಿ ಇದ್ದಿತು. ಆದುದರಿಂದ ಸಾಧನೆಯೆಲ್ಲವೂ ಅಂತರಂಗದಲ್ಲಿ ನಡೆದು ಕ್ಷಿಪ್ರದಲ್ಲಿ ಆತನು ಜ್ಞಾನದ ಋಸಿಯಾದನು. "ನಾನೆಂಬಹಂಕಾರದಲ್ಲಿ ನಾನುಂಡೆನಾದರೆ ಎನಗದೇ ಭಂಗ. ಸ್ತುತಿ ನಿಂದೆಗೆ ನೊಂದೆನಾದೊಡೆ ಅಂಗೈಯಲ್ಲಿದ್ದ ಗುಹೇಶ್ವರ ಲಿಂಗಕ್ಕೆ ದೂರ"[25] ಎಂದು ಹೇಳುವುದಕ್ಕೆ ಅರ್ಹನಾಗುವಂತೆ "ನಾನು" ಎಂಬ ಅಹಂಭಾವವನ್ನು ಜಯಿಸಿದವನಾದ್ದರಿಂದ ಅಲ್ಲಮಪ್ರಭು ಪ್ರಾರಂಭ ದಲ್ಲಿಯೇ ಪ್ರಭುಪದವಿಯನ್ನು ಪಡೆದನು. ನಿಷ್ಕಾಮ ಕರ್ಮವೆಂಬುದು ಪ್ರಭುವಿಗೆ ಸಹಜ ಲಕ್ಷಣವಾಯಿತು. ಆತನ ಜೀವನ ಚರಿತ್ರೆಯಲ್ಲಿ

25. ವ. ಶಾ. ಸಾ. ಪುಟ ೧೩೫.

ಭಕ್ತಸ್ಥಲ ಮಾಹೇಶ್ವರಸ್ಥಲಗಳ ಮನೋಭಾವವು ಅದೃಶ್ಯವಾಗಿರು ವುದರಿಂದ ಭಕ್ತಿಸಾಧನೆಯ ಹೋರಾಟಗಳಾಗಲಿ, ಜಂಗಮ ಲಿಂಗ ಸಾಮರಸ್ಯದ ತೊಡಕುಗಳಾಗಲಿ, ದಾಸೋಹದ ಪ್ರಕಟನೆಗಳಾಗಲಿ ಕಂಡು ಬರುವುದಿಲ್ಲ.

ಪ್ರಭುವು ಈ ಪ್ರಪಂಚದ ಕಾರ್ಯಕಲಾಪಗಳನ್ನು ಹೊರಗಡೆ ನಿಂತು ನೋಡುತ್ತಿದ್ದನು. ಆದುದರಿಂದ ಆತನಿಗೆ ಮನುಷ್ಯರ ಕುಂದುಕೊರತೆಗಳೂ ಹೆಚ್ಚುಗಡಮೆಗಳೂ ಚೆನ್ನಾಗಿ ಗೋಚರಿಸುತ್ತಿದ್ದುವು. ಆತನು ಮನುಷ್ಯರ ಆಚಾರ ವ್ಯವಹಾರಗಳನ್ನು ಸ್ಥೂಲದೃಷ್ಟಿಯಿಂದ ನೋಡಿ ಸಂತುಷ್ಟನಾಗು ತ್ತಿರಲಿಲ್ಲ. ಆಚಾರ ವ್ಯವಹಾರಗಳು ಯಾವ ಬುದ್ಧಿಯಿಂದ ಜನಿತವಾಗಿವೆ? ಆ ಬುದ್ಧಿಯ ಗುಣಾವಗುಣಗಳೇನು? ಎಂಬದಾಗಿ ಸೂಕ್ಷ್ಮದೃಷ್ಟಿ ಯಿಂದ ಅಂತರಂಗವನ್ನು ಭೇದಿಸಿ ಶೋಧಿಸುತ್ತಿದ್ದನು. ಏಕೆಂದರೆ ಅಲ್ಲಮ ಪ್ರಭು ಷಟ್ಸ್ಥಲ ಸಾಧನೆಯಿಂದ ಅಂತರ್ಮುಖಿಯಾಗಿ ಪ್ರಶಾಂತನಾಗಿ ಅಂತರ್ಗತವಾದ ಚಿದಂಶವನ್ನು ಸರ್ವವ್ಯಾಪಕವಾಗಿ ಮಾಡಿದ್ದನು. ಸರ್ವದ ರಲ್ಲಿಯೂ ಶಿವಕಳೆಯಿದ್ದು ಸರ್ವವೂ ಶಿವಪ್ರಸಾದವೆಂದು ತಿಳಿದಿದ್ದುದರಿಂದ ಅಭೇದಬುದ್ಧಿಯೂ ಅದ್ವೈತಭಾವನೂ ಆತನಲ್ಲಿ ರೂಢಮೂಲವಾಗಿದ್ದುವು.

ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗಗಳ ಏಕತ್ವಾನುಸಂಧಾನವನ್ನು ಮಾಡಿ, ತನ್ನಲ್ಲಿಯೇ ಗುರು ಲಿಂಗ ಜಂಗಮವನ್ನು ಐಕ್ಯಮಾಡಿದ್ದ ಅಲ್ಲಮ ಪ್ರಭುವಿನ ಪರೀಕ್ಷೆಗೆ ಯಾವ ಋಷಿಗಳು, ಸಾಧಕರು, ಸಿದ್ಧರು ಸಿಕ್ಕಿದರೂ ಸುಲಭದಲ್ಲಿ ತೇರ್ಗಡೆಯಾಗುತ್ತಿರಲಿಲ್ಲ. ಕರ್ಮದ ಕೋಟಲೆಯನ್ನು ಮೀರಿ ಕ್ರಿಯಾರಹಿತನಾಗಿದ್ದ ಅಲ್ಲಮನು ಪಾಪ ಕರ್ಮಗಳನ್ನು ಜರೆಯುವುದಿರಲಿ, ಪುಣ್ಯಕರ್ಮಗಳನ್ನೂ ತಿರಸ್ಕರಿಸಿ ಕರ್ಮದ್ವಯದಿಂದ ಬಿಡುಗಡೆಯನ್ನು ಪಡೆಯಿರೆಂದೂ ಲಿಂಗದ ಬೆಳಕಿನಲ್ಲಿ "ನಿರ್ವಯಲಾಗಿ" ಹೋಗಿರೆಂದೂ ಬೋಧಿಸುತ್ತಿದ್ದನು. ದೀಕ್ಷಾ ಸಂಸ್ಕಾರದಿಂದ ಷಟ್‌ಸ್ಥಲವು ಕರ್ಮಪರಂಪರೆ ಗಳಲ್ಲಿ ಆರಂಭವಾದರೂ ಜೀವನು ಅಂತರ್ಮುಖಿಯಾಗಿ ಕರ್ಮರಹಿತನಾಗಿ ಐಕ್ಯವನ್ನು ಕಟ್ಟಕಡೆಯಲ್ಲಿ ಪಡೆಯಬಹುದೆನ್ನುವುದು ಪ್ರಭುವಿಗೆ ತಿಳಿದಿತ್ತು. ಹೀಗೆ ಅಂತರ್ಮುಖಿಯಾಗಲು ಸಾಧನೆ ಬೇಕೆಂಬುದೂ ತಿಳಿದಿತ್ತು. ಆ ಸಾಧನೆಗೆ ಕರ್ಮದೊಂದಿಗೆ ಜ್ಞಾನವು ಬೇಕೆಂಬುದೂ ತಿಳಿದಿತ್ತು.

ವೀರಶೈವವು ಕ್ರಿಯಾಜ್ಞಾನಗಳೆರಡಕ್ಕೂ ಪ್ರಾಶಸ್ತ್ಯವನ್ನು ಕೊಟ್ಟಿದೆ ಎನ್ನುವುದನ್ನು ಬೋಧಿಸುವುದಕ್ಕೆ ಪ್ರಭುವು ಲೋಕ ಸಂಚಾರಮಾಡಿದನು. ಜ್ಞಾನರಹಿತರಾಗಿ ಕೇವಲ ಬಾಹ್ಯಕರ್ಮಗಳಲ್ಲಿಯೇ ಮಗ್ನರಾಗಿ ಕರ್ಮ ಪಾಷಂಡಿಗಳೆನಿಸಿದ ಅನೇಕರಿಗೆ–ಒಳಗೆ ನೋಡಿರೋ, ಗುರು ಲಿಂಗ ಜಂಗಮ ವೆಂಬುದು ಬೇರೆಯಿಲ್ಲ, ಭವಿಯೆಂಬುದು ಬೇರೆ, ಪ್ರಸಾದವೆಂಬುದು ಬೇರೆ, ಪ್ರಾಣಲಿಂಗಿಯ ಪರಿಯೇ ಬೇರೆ—ಎಂದು ಅಡಿಗಡಿಗೆ ತಿದ್ದಿ ಹೇಳುತ್ತಿದ್ದನು.

ಪ್ರಭುವು ಬಹಳ ವೈರಾಗ್ಯಪರನಾದರೂ ಲೋಕ ಕಲ್ಯಾಣಕ್ಕಾಗಿ ಮೂಲಾಹಂಕಾರದಲ್ಲಿ ನಿಂತು ಕೆಲವು ಮಾನವ ಸಂಬಂಧಗಳನ್ನು ಇಟ್ಟು ಕೊಂಡಿದ್ದನು. ಈ ಸಂಬಂಧಗಳಲ್ಲಿ ಪರಮ ಶಾಂತಿಮೂರ್ತಿಯಾದ ಆತನ ಚಿತ್ತವೃತ್ತಿ ಚೆನ್ನಾಗಿ ವ್ಯಕ್ತಪಡುವುದು. ಬಸವೇಶ್ವರ, ಚನ್ನಬಸವ ಮತ್ತು ಸಿದ್ಧರಾಮರಲ್ಲಿ ಪ್ರಭುವಿಗೆ ಬಹಳ ಪ್ರೀತಿಯಿತ್ತು. ಅವರು ತಮ್ಮ ಸುಗುಣಗಳಿಂದ ಆತನನ್ನು ವಶಪಡಿಸಿಕೊಂಡಿದ್ದರು. ಬಸವೇಶ್ವರನನ್ನು ಶಿಷ್ಯನಂತೆಯೂ, ಚನ್ನಬಸವನನ್ನು ಪುತ್ರನಂತೆಯೂ, ಸಿದ್ಧರಾಮನನ್ನು ಮಿತ್ರನಂತೆಯೂ ಆದರಿಸಿ ಅವರೆಲ್ಲರಿಗಿಂತ ತಾನು ಜ್ಞಾನಿಯಾದರೂ ಅವರೊಡನೆ ಬಹಳ ಬಳಕೆಯಿಂದಿದ್ದು ಅವರ ಗುಣಗಳನ್ನು ಆಗಾಗ್ಗೆ ಶ್ಲಾಘಿಸುತ್ತ, ಅವಗುಣಗಳನ್ನು ಸಲ್ಲುಡಿಗಳಿಂದ ತಿದ್ದುತ್ತ, ತತ್ತ್ವೋಪದೇಶ ಮಾಡುತ್ತಿದ್ದನು.

ಶಿವಶರಣರಲ್ಲೆಲ್ಲ ಪ್ರಭುವಿನ ಮೂರ್ತಿಮಹತ್ವವು ಅಪೂರ್ವವಾದುದು. ವೀರಶೈವದ ಇತಿಹಾಸದಲ್ಲಿ ಆತನು ಅದ್ವಿತೀಯ ಪುರುಷನಾಗಿದ್ದಾನೆ. ಆತನ ದೃಷ್ಟಿ ನಮ್ಮ ಹೃದಯಗಳನ್ನು ಭೇದಿಸಿ ಗುಪ್ತವಾದ ಆಲೋಚನೆ ಗಳನ್ನೂ ಲೋಪದೋಷಗಳನ್ನೂ ಹಿಡಿದೆಳೆಯುತ್ತದೆ. ಆತನ ಶಕ್ತಿ ಮೂಲೆ ಮೂಲೆಗಳಲ್ಲೂ ನಮ್ಮನ್ನು ಸಂಧಿಸಿ ನಮ್ಮ ಆತ್ಮಸಾಕ್ಷಿಯನ್ನು ಎಚ್ಚರಿಸಿ ಕೂಡಿಸುತ್ತದೆ. ಆತನ ವಚನಗಳನ್ನೂ ಬೋಧೆಯನ್ನೂ ಓದಿದವರು ಆ ಪ್ರಭುವಿನ ಮೂರ್ತಿ ಸ್ವರೂಪವನ್ನು ಎಂದಿಗೂ ಮರೆಯರು. ಆತನು ವೀರಶೈವಮಾರ್ಗೋಪದೇಶವನ್ನು ಮಾಡಿದವನಾದರೂ, ಮತಾಭಿಮಾನದ ಸಂಕುಚಿತ ಹೃದಯವು ಆತನದಲ್ಲ. ಸತ್ಯದ ಬೆಳಕನ್ನು ಕಂಡ ಆ ಮಹಾತ್ಮನ ಹೃದಯವು ವಿಶ್ವವಿಸ್ತಾರವುಳ್ಳದ್ದು. ಆತನ ಮೂರ್ತಿ ಆತ್ಮ

ಸಾಕ್ಷಿಯ ಸ್ಥಾನದಲ್ಲಿ ಎಲ್ಲರ ಹೃದಯುಗಳಲ್ಲಿಯೂ ಇರುವುದಾದ್ದರಿಂದ ಹೃದಯುಗುಹಾನಿವಾಸ ಎಂಬ ವಿಶೇಷಾರ್ಥ ಪ್ರತಿಪಾದಿತನಾಗಿ ಗುಹೇಶ್ವರ ನಾಮಾಂಕಿತನಾಗಿ ಇಂದಿಗೂ ಇರುವಂತೆ, ಎಂದೆಂದಿಗೂ ಇರುವಂತೆ ಆತನು ಕಾಣುತ್ತಾನೆ.

**V. ಪ್ರಭುಲಿಂಗಲೀಲೆಯ ಕಥಾ ಸಾರಾಂಶ.**—ಮೇಲೆ ನಿರೂಪಿಸಿದ ಅದ್ಭುತ ಮೂರ್ತಿ ಸ್ವರೂಪವುಳ್ಳ ಮಹಾತ್ಮನ ಜೀವನ ಚರಿತ್ರೆಯನ್ನು ಚಾಮರಸನು ಬರೆದಿದ್ದಾನೆ. ಪ್ರಭುಲಿಂಗಲೀಲೆಯನ್ನು ಓದಿದವರು ಚಾಮರಸನು ಆ ಕಾರ್ಯಕ್ಕೆ ತಕ್ಕ ಪ್ರತಿಭಾಸಂಪತ್ತಿಯುಳ್ಳವನೆಂದೂ, ಆ ಕಾರ್ಯವನ್ನು ಬಹಳ ಜವಾಬ್ದಾರಿಯಿಂದ ತೃಪ್ತಿಕರವಾಗಿ ನೆರವೇರಿಸಿದ್ದಾನೆಂದೂ ಹೇಳಬಲ್ಲರು. ಪ್ರಾರಂಭದಲ್ಲಿ ಗುರು ಗುಹೇಶ್ವರ ಲಿಂಗವನ್ನು ವಂದನೆಮಾಡಿ ಬಸವ, ಚನ್ನಬಸವ, ಮಡಿವಳ ಮಾಚಯ್ಯ ಮುಂತಾದ ಅವತಾರ ಪುರುಷರ ಹರಕೆಯನ್ನು ಬಯಸಿ "ಅಲ್ಲಮ ಪ್ರಭು ಸಂಪ್ರದಾಯುದ ಸಲ್ಲಲಿತ ಸನ್ಮಾರ್ಗವನು ನಾನೆಲ್ಲರಜೀವಂಡದಲಿ ಪೇಳುವೆನುಚಿತವಚನದಲಿ" ಎಂದು ಉದ್ದಿಷ್ಟ ಕಾರ್ಯವನ್ನು ಚಾಮರಸನು ಹೇಳಿದ್ದಾನೆ. ಈ ಗ್ರಂಥವು "ಸತ್ತವರ ಕಥೆಯಲ್ಲ, ಜನನದ ಕುತ್ತದಲಿ ಕುದಿಕುದಿದು ಕರ್ಮದ ಕತ್ತಲೆಗೆ ಸಿಲುಕುವರ ಸೀಮೆಯ ಮಾತು ತಾನಲ್ಲ, ಹೊತ್ತುಹೋಗದೆ ಪುಂಡರಾಲಿಪ ಮತ್ತ ಮತಿಗಳ ಗೋಷ್ಠಿಯಲ್ಲ"[26] ಜೀವನನ್ನು ಬ್ರಹ್ಮದಲ್ಲಿ ಐಕ್ಯಮಾಡಿಸಿದ ಲಿಂಗಾಂಗ ಸಾಮರಸ್ಯವನ್ನು ಬಲ್ಲ ದಿವ್ಯ ಶರಣರ ವಿಚಾರ ಮತ್ತು ಸಿದ್ಧಾಂತಸಾರ ಸರ್ವಸ್ವ ಎಂದು ಚಾಮರಸನು ಹೇಳುತ್ತಾನೆ.

ಅವ್ಯಕ್ತವಾಗಿದ್ದ ಪರವಸ್ತುವಿಂದ ಹೇಗೆ ಆದಿರುದ್ರನ ಉತ್ಪತ್ತಿಯಾಯಿತೆನ್ನುವುದನ್ನು ಆಗಮೋಕ್ತರೀತಿಯಲ್ಲಿ ಹೇಳಿ ಆದಿರುದ್ರನ ವಾಸಸ್ಥಾನವಾದ ರಜತಾಚಲವನ್ನು ಕವಿ ವರ್ಣಿಸಿದ್ದಾನೆ. ಅಲ್ಲಿ ಈಶ್ವರಾಸ್ಥಾನ ವರ್ಣನೆಯಾದ ಮೇಲೆ ಸಿಂಹಾಸನದಲ್ಲಿ ಕುಳಿತಿರುವ ಪಾರ್ವತೀ ಪರಮೇಶ್ವರರನ್ನು ಚಿತ್ರಿಸಿದ್ದಾನೆ.

---

26. ಸಾಮಾನ್ಯವಾಗಿ ವೀರಶೈವ ಗ್ರಂಥಗಳಲ್ಲಿ ಹೆಚ್ಚು ಕಡಮೆ ಇದೇ ಅಭಿಪ್ರಾಯದ ಪದ್ಯಗಳು ಬರುತ್ತವೆ.

[27]ಒಂದಾನೊಂದು ದಿನ "ಪರಕಲಿಸಿ ದಂತಚ್ಛವಿಯ ಬೆಳದಿಂಗಳನು ಸುರಿವಾ ಕರ ಚೆಲುವ ಬಾಯ್ದೆರೆಯು ಪರಮೇಶ್ವರಿ" ತನ್ನ ಪತಿಯನ್ನು ಕುರಿತು "ಶಿವನೆ, ನಿನ್ನೊಡ್ಡೋಲಗದೊಳೊಪ್ಪುವ ಮಹಾಘನಮಹಿಮ ರೆಲ್ಲರು ಭವಕೆ ಬಾರದೆ ನಿತ್ಯಸುಖದಿಂದಿಪ್ಪರೋ ಮೇಣು ಇವರಿಗೆಯು ನೆಲೆ ಯಿಲ್ಲವೊ?" ಎಂದು ಕೇಳಿದಳು. ಆಗ ಶಿವನು ನಾಮರೂಪ ಕ್ರಿಯೆಗಳನ್ನು ಗೆಲಬಲ್ಲವರಿಗೆ ಮಾತ್ರ ನಿತ್ಯಸುಖವೆಂದೂ, ಅದಕ್ಕಾಗಿ ಭೂಮಿಯಲ್ಲಿ ಮಾನವ ಶರೀರದಿಂದ ಜನಿಸಿ ಸಾಧನೆ ಮಾಡಬೇಕೆಂದೂ ಹೇಳುವನು. ಹಾಗಾದರೆ ಭೂಲೋಕದಲ್ಲಿ ಇದನ್ನು ಬೋಧಿಸುವ ಗುರುವಾರು? ಎಂದು ಕೇಳಲು ಈಶ್ವರನು, ನಿರಹಂಕಾರ ಮತ್ತು ಸುಜ್ಞಾನಿಗಳಿಗೆ ಮಗನಾಗಿ ಹುಟ್ಟಿದ ಅಲ್ಲಮನೇ ಆ ಗುರುವೆಂದೂ, ಆತನು ಅನುಪಮನೆಂದೂ ಗುಣ ಪ್ರಶಂಸೆಯನ್ನು ಮಾಡುವನು. ಆಗ ಪಾರ್ವತಿ ಅಲ್ಲಮನನ್ನು ತಾನು ವಶಪಡಿಸಿಕೊಂಡು ನಿಜತತ್ವವನ್ನು ತಿಳಿಯುವುದಾಗಿ ಶಪಥಮಾಡಿ ತನ್ನ ತಾಮಸಗುಣದ ಮೂರ್ತಿಯಾದ ಮಾಯೆಯನ್ನು[28] ಆ ಕೆಲಸಕ್ಕೆ ನಿಯಮಿಸುವಳು.

ಬೆಳುವಲ ನಾಡಿನ ರಾಜಧಾನಿಯಾದ ಬನವಸೆಯಲ್ಲಿ ಮಮಕಾರ ನೃಪನಿಗೂ ಪಟ್ಟದ ರಾಣಿಯಾದ ಮಾಯಾದೇವಿಗೂ ಮಾಯೆ ಮಗಳಾಗಿ ಜನಿಸಿದಳು. ಮಾಯೆ ಜನಿಸಿದ ಕೂಡಲೆ "ಮುತ್ತು ನರೆತಿಹ ಜೀವ ಜಾಳರಿಗೆತ್ತಿ ಕಾಮಗ್ರಹ ವಿಕಾರತೆ ಮುತ್ತಿ ಮುರುಟಿಸುತಿರ್ದುದು;" ಸಮಾಧಿಗತರಾಗಿ ಮೇಲೆ ಬೆತ್ತಬಿದಿರು ಬೆಳದಿದ್ದವರಿಗೂ ಚಿತ್ತಸಂಚಲ ವಾಯಿತು. ಅವರೆಲ್ಲರೂ ಹೀಗೆ ತಮ್ಮ ಮನಸ್ಸುಗಳು ಪಲ್ಲಟವಾಗಿ ಕಾಮ ಮೋಹಗಳು ಜನಿಸುವುದಕ್ಕೆ ಏನು ಕಾರಣವೋ! ಈ ಮಾಯೆ ಎತ್ತಣಿಂದ ಬಂದುದೋ! ಎಂದು ಚಿಂತಾಕ್ರಾಂತರಾಗಿರಲು ದುರ್ವಾಸ ಮಹರ್ಷಿ ಅವರಲ್ಲಿಗೆ ಬಂದು ಕೈಲಾಸದಲ್ಲಿ ಪಾರ್ವತೀಪರಮೇಶ್ವರರಿಗಾದ ಸಂಭಾಷಣೆ

---

27. ಈ ಪೀಠಿಕಾ ಪ್ರಕರಣದ ಕಥೆ ಕೆಲವು ಗ್ರಂಥಗಳಲ್ಲಿ ಬೇರೆ ರೀತಿಯಿದೆ. ಪರಿಶಿಷ್ಟ I (ii) ಭಾಗವನ್ನು ನೋಡಿ. 28. ಪಾರ್ವತಿ ಷೋಡಶಕಳೆಗಳನ್ನು ಸೇರಿಸಿ ಒಂದು ರೂಪವನ್ನು ಸೃಜಿಸಿ ಅದರ ಸೌಂದರ್ಯಕ್ಕೆ ತಾನೇ ಮುಗ್ಧಳಾದಂತೆಯೂ ಭೂಮಿಗೆ ಹೋಗಿ ಅಲ್ಲಮನನ್ನು ಹಿಡಿದುತಾ, ಎಂದು ಹೇಳಿದಂತೆಯೂ ಪ್ರ. ಸಾಂ. ಸಂಧಿ ೧, ಪದ್ಯ ಗಳು ೮೧—೮೩ರಲ್ಲಿದೆ.

ಯನ್ನೂ, ಪಾರ್ವತಿಯ ಶಪಥವನ್ನೂ, ಭೂಮಿಯಲ್ಲಿ ಮಾಯೆಯ ಜನನ ವಾಗಿರುವುದನ್ನೂ ತಿಳಿಸಿ ಅಲ್ಲಮಪ್ರಭು ನಾಮಸ್ಮರಣವು ಮಾಯಾ ಮೋಹಗಳನ್ನಡಗಿಸುವುದೆಂದು ಉಪದೇಶಮಾಡಿ ತೆರಳುವನು.[29]

ಮಾಯಾದೇವಿ ದಿನದಿನಕ್ಕೆ ಪ್ರವರ್ಧಮಾನಳಾಗಿ, ಸಕಲ ಕಲಾ ಸಂಪನ್ನೆಯಾಗಿ ರೂಪ ಯೌವನ ಶೋಭಾ ಭೂಷಿತಳಾಗಿ ಬೆಳಗುತ್ತಿರಲು ಆಕೆಗೆ ತಕ್ಕ ಪತಿ ಯಾರೆಂದು ಮಮಕಾರನು ಆಲೋಚಿಸುತ್ತಿದ್ದನು. ಆಗ ಕುಲಗುರುವಾದ ಅಹಂಕಾರಾಚಾರ್ಯನು ಬಂದು ಆಕೆಗೆ ಪರಶಿವನೇ ಪತಿಯಲ್ಲದೆ ಮಾನವರಾರೂ ಅಲ್ಲ ಎಂದು ತಿಳಿಸುವನು; ಅನಂತರ ಈಶ್ವರನನ್ನು ಒಲಿಸಿಕೊಳ್ಳುವ ಮಂತ್ರೋಪದೇಶವನ್ನು ಮಾಯಾದೇವಿಗೆ ಮಾಡಿ ಹೊರಟು ಹೋಗುವನು. ಮಾಯೆ ಬನವಸೆಯ ಮಧುಕೇಶ್ವರಾಲಯಕ್ಕೆ ಹೋಗಿ ನಿತ್ಯವೂ ಪೂಜೆಮಾಡುತ್ತಿರುವಳು. ಹೀಗೆ ಮಾಯೆ ಮಧುಕೇಶ್ವರನನ್ನು ಪೂಜಿಸುತ್ತಿರಲು ಅಲ್ಲಮಪ್ರಭು "ಸ್ವರೂಪನ ನಾಮವನು ಮಱೆಮಾಡಿ" ಹದಿನಾರು ಹದಿನೆಂಟು ವರ್ಷ ವಯಸ್ಸಿನ ವಿಟನ ರೂಪವನ್ನು ಧರಿಸಿ, "ಬೆನ್ನೊಳು ಮೆಱೆವ ಮದ್ದಳೆ ಸಹಿತ" ಮಧುಕೇಶ್ವರಾಲಯದ ಮುಂದೆ ಸುಳಿದನು. ಹೊರಗಡೆ ನಿಂತು ಎಲ್ಲರಿಗೂ ಆಶ್ಚರ್ಯವುಂಟಾಗುವಂತೆ ಮದ್ದಳೆ ಯನ್ನು ಬಾರಿಸುತ್ತಿರಲು ಲಾಸ್ಯಸೇವಾಸಕ್ತಳಾಗಿ ರಂಗಮಂಟಪದಲ್ಲಿದ್ದ ಮಾಯಾದೇವಿ "ಕಾರಮುಗಿಲಿನ ಗರ್ಜನೆಯ ಕಿವಿಯಾರೆ ಕೇಳಿದ ನೋಗೆಯಂತಿರೆ ಹಾರವಿಸುತ" ಆ ಅಲ್ಲಮನನ್ನು ಒಳಕ್ಕೆ ಕರೆಯಿಸಿದಳು. ಆತನನ್ನು ನೋಡಿದ ಕೂಡಲೆ "ಚಿತ್ತಜನಳವಿಯಲಿ ಬೆಂಬಿದ್ದು ಮೌನದ ಳಿರ್ದಳಾ ಮಾಯೆ." ಆಕೆಯ ಸ್ಥಿತಿಯನ್ನು ಕಂಡ ಸಖಿಯರು ಅಲ್ಲಮನನ್ನು ಸುತ್ತಿಕೊಂಡು "ಆವ ದೇಶದ ಪುರುಷನೈ, ನಿನಗಾವ ಹೆಸರೈ, ನೀನು ನೆಲೆಗೊಂಡಾವ ಠಾವಿನಲಿಪ್ಪೆಯೈ" ಎಂದು ಸಂಭಾವಿಸುತ ವಿನಯದಿಂದ

---

29. ಪ್ರಭುದೇವರ ಪುರಾಣದಲ್ಲಿ ಕಥೆ ನಿರೂಪಿತವಾಗಿರುವ ಕ್ರಮಕ್ಕೂ, ಪ್ರಭು ಲಿಂಗಲೀಲೆಯಲ್ಲಿ ನಿರೂಪಿತವಾಗಿರುವ ಕ್ರಮಕ್ಕೂ ಅಲ್ಲಲ್ಲಿ ವ್ಯತ್ಯಾಸಗಳಿವೆ. ಮುಖ್ಯ ವಾದುವನ್ನು ಕೆಲವು ಕಡೆ ತೋರಿಸಲಾಗುವುದು. ಉದಾಹರಣೆಗೆ ದುರ್ವಾಸ ಮಹರ್ಷಿಯನ್ನು ಕುರಿತು ಋಷಿಗಳು ಹಿಂದೆ ಮುನಿಗಳಿಗೆ ಕಾಮಬಾಧೆಯಾಗಿತ್ತೆ? ಎಂದು ಕೇಳಿದಂತೆಯೂ, ದುರ್ವಾಸ ಮಹರ್ಷಿ ದಕ್ಷಿಣಾಮೂರ್ತಿ ಲೀಲೆಯ ಕಥೆಯನ್ನು ಹೇಳಿದಂತೆಯೂ ಪ್ರ. ಪು. ಸಂಧಿ ೪ರಲ್ಲಿ ಹೇಳಿದೆ.

ಕೇಳಿದರು. ಅಲ್ಲಮನು ನಸುನಗುತ "ದೇಶವೆಮ್ಮದು ಹೇಳುವಡೆ ಪರದೇಶ, ಬಿರುದಿನ ಬಿಂಕಕಾರರ ವಾಸಿಗರಸಲ್ಲೆನಿಸುವಲ್ಲಮನೆಂಬ ಪೆಸರೆನಗೆ; ಲೇಸು ಮಾಡುವ ಠಾವುಗಳಲಭಿಲಾಷೆಯಿಲ್ಲದೆ ಹೊದ್ದುವೆವು, ಸುಖವಾಸಿಗಳು ನಾವು" ಎಂದು ಉತ್ತರಕೊಟ್ಟನು. ಸಖಿಯರು ಸಂತೋಷಪಟ್ಟು "ಒಳ್ಳಿತಾಯಿತು ಕಾರ್ಯ, ನೀನಿನ್ನಲ್ಲಿಗಲ್ಲಿಗೆ ಹೋಹ ಬುದ್ಧಿಯ ಸಲ್ಲವಿಡು; ಸುಖದಿಂದಲೆಮ್ಮೊಡತಿಯ ಸಮೀಪದಲಿ ಬಲ್ಲ ವಿದ್ಯಾವಸ್ತುಗಳೊಳೆಮ್ಮೆಲ್ಲ ರೋಪಾದಿಯಲಿ ಮನಬಂದಲ್ಲಿ ನೀನಿಹುದು" ಎಂದು ಹೇಳಿದರು. ಬಳಿಕ ಮಾಯಾದೇವಿ ಅಲ್ಲಮನನ್ನು ಕರೆದುಕೊಂಡು ಬಂದು ತಂದೆಗೆ ತೋರಿಸಿ ಆತನ ಅನುಮತಿಯಿಂದ ನಾಟ್ಯಾಚಾರ್ಯನನ್ನಾಗಿ ನಿಯಮಿಸಿಕೊಂಡಳು.

ಅಲ್ಲಮನಿಗೆ ಅಂತಃಪುರದ ಒಂದು ಕಡೆಯಲ್ಲಿಯೆ ಬಿಡಾರವಾಯಿತು. ಅಲ್ಲಮನು ಬಂದಾಗಲೆಲ್ಲ "ಭರತವಿದ್ಯಾದ್ಯಖಿಳ ಕಳೆಗಳ ಪರಿಚರಿಯ ನೆವದಿಂದ ಮಾಯಾ ತರುಣಿ ಮನದೊಳು ಸೊಗಸಿ ಮಾತಾಡಿಸುವಳಲ್ಲ ಮನ". ಮಾಯೆ ವಿರಹದಿಂದ ದಿನ ದಿನಕ್ಕೆ ಕೃಶಳಾಗುತ್ತಿರುವುದನ್ನೂ ಅಲ್ಲಮನ ವಿಚಾರದಲ್ಲಿ ತೋರಿಸುತ್ತಿರುವ ಕಾತರವನ್ನೂ ಸಖಿಯರು ನೋಡಿ "ಒಡತಿ ನಿನ್ನಯ ಬಗೆಯ ಭಾವವ ನಾಚದೆಮ್ಮೊಡನೆ ನುಡಿದೆಯಾಡಡೆ" ಅಲ್ಲಮನನ್ನು ತಂದು ಸೇರಿಸುವ ಉಪಾಯಮಾಡುತ್ತೇವೆ ಎಂದು ಹೇಳಿದರು. ಆದರೆ ಮಾಯಾದೇವಿ "ಕನ್ಯಾಭಾವ ಭಂಗಿಯ ಮನದ ನಾಚಿಕೆಯೊಂದು, ನೆಟ್ಟನೆ ಜನಪತಿಯ ಮಗಳೆಂಬ ಹೆಕ್ಕಳ ಹೆಮ್ಮೆ ತಾನೆರಡು, ತನಗೆ ಸಮಸಂಪ್ರಾಪ್ತನಲ್ಲದ ಮನುಜಗಳು ಪಿದೆನೆಂಬ ಮಱವೆಯ ಘನತೆ ಮೂಱು" ಈ ಕಾರಣಗಳಿಂದ ನಾಚಿ ಮೌನವಾಗಿರಲು ಸಖಿಯರು ತಮ್ಮಲ್ಲಿಯೆ ಆಲೋಚಿಸಿ ನಿಶ್ಚಯಾಂಶವನ್ನು ತಿಳಿದುಕೊಂಡರು.[30] ಬಳಿಕ ಮಧುಮಾಸ[31] ಎಂಬ ಸಖಿ ಅಲ್ಲಮನ ಬಳಿಗೆ ಬಂದು ಮಾಯಾದೇವಿ ಆತನ ನೆಪದಿಂದ ವಿರಹ ಸಂತಪ್ತಳಾಗಿರುವುದನ್ನು ತಿಳಿಸಿ ಆ ರಾತ್ರಿ

---

30. ಈ ಸಂದರ್ಭದಲ್ಲಿ ಸಕಳೆ ಎಂಬ ಸಖಿ ಕುಂತಿ ಕರ್ಣನನ್ನು ಪಡೆದ ಕಥೆಯನ್ನೂ, ದ್ರೌಪದಿಯ ವೃತ್ತಾಂತವನ್ನೂ, ದೇವೇಂದ್ರ ಅಹಲ್ಯೆಯರ ಪ್ರಣಯವನ್ನೂ ವರ್ಣಿಸಿ ಪ್ರೋತ್ಸಾಹಿಸಿದಂತೆ ಪ್ರ. ಪು. ಸಂಧಿ ೫, ಪದ್ಯಗಳು ೪೦–೪೫ರಲ್ಲಿದೆ. 31. ಸಕಳೆ ಬಂದಂತೆ ಪ್ರ. ಪು. ದಲ್ಲಿದೆ.

ಮಾಯೆಯನ್ನು ಸಂಧಿಸುವ ಏರ್ಪಾಡು ಮಾಡುವಳು. ಆ ರಾತ್ರಿ ಅಲ್ಲಮನೂ ಮಾಯೆಯೂ ಸೇರುವರು. ಆದರೆ ನಿರ್ಲಿಪ್ತನಾದ ಅಲ್ಲಮನು ತನಗೆ ವಶನಾಗದೆ ನಿರ್ದೇಹಿಯಾಗಿರುವುದನ್ನು ಕಂಡು ಮಾಯೆ ಶೋಕಾಶ್ಚರ್ಯಭರಿತಳಾಗುವಳು. ಮಾರನೆಯ ದಿನ ಸಖಿಯರು ಬಂದು ನೋಡುವಾಗ ಮಾಯೆಯೊಬ್ಬಳೇ ಇರುವಳು. ಈ ವರ್ತಮಾನ ಮೋಹಿನೀದೇವಿಗೆ ತಿಳಿದು ಆಕೆ ಅಂತಃಪುರಕ್ಕೆ ಬಂದು ಮಗಳ ಅವಿವೇಕಕ್ಕೂ ದುರ್ನೀತಿಗೂ ಬಹಳವಾಗಿ ನಿಂದಿಸುವಳು. ಕಡೆಗೆ ಅಲ್ಲಿದ್ದ ಸಖಿಯರಲ್ಲಿ ಸಕಳೆಯನ್ನು ಕುರಿತು "ಸಕಳೆ! ಬುದ್ಧಿಯ ಬಲ್ಲೆ, ನೀನೇತಕೆ ವಿಚಾರಿಸದಾದೆ" ಎಂದು ಆಕ್ಷೇಪಿಸಲು ಆ ಸಕಳೆ ಚಾರ್ವಾಕವಾದವನ್ನು ತಲೆ ಮೆಟ್ಟುವಂತೆ "ಮನುಜದೇಹವಪೂರ್ವವದಱೊಳು ಜನಪತಿಯ ಸುತೆಯಹುದಪೂರ್ವತೆ, ಇನಿತಱೊಳು ಪಟುವಾಗಿ ಸಕಲ ಸುಖಂಗಳನು ತಿಳಿದು ಅನುಭವಿಸುವದಪೂರ್ವ, ಅದಱಿಂ ಮನಸು ಬಂದಂತಿರಲಿ, ಮಾಯಾಂಗನೆಗದೇತಕೆ ಕಾಹು ಕಟ್ಟಳೆ?" ಎಂದು ಉತ್ತರ ಕೊಟ್ಟಳು. ಮೋಹಿನೀದೇವಿ ಮಗಳ ಮೇಲಿನ ವ್ಯಾಮೋಹದಿಂದಲೂ ಸಕಳೆಯ ಜಾಣ್ಮೆಯಿಂದಲೂ ಸೋತು ಸಮ್ಮತಿಸಿ "ಅರಸನಱಿಯದ ತೆಱದಲಿದನಾಚರಿಸುವುದು" ಎಂದು ಎಚ್ಚರಿಕೆ ಕೊಟ್ಟು ಹೊರಟುಹೋದಳು. ಬಂದ ಅಪಾಯದಿಂದ ಪಾರಾದೆವೆಂದು ಸಖಿಯರು ಸಂತೋಷಿಸಿ ಮಾಯೆಗೆ ಬುದ್ಧಿ ಹೇಳುವರು. ಅನಂತರ ಸಕಳೆ ಅಲ್ಲಮನ ಬಳಿಗೆ ಬಂದು, ಇನ್ನು ನೀನು ಇಲ್ಲಿರಬೇಡ, ಬೇರೆ ಕಡೆಗೆ ಹೊರಟು ಹೋಗು—ಎಂದು ಹೇಳಿದಳು. ಶಿವತತ್ವಪರವಾಗಿದ್ದ ಅಲ್ಲಮನ ಉತ್ತರವನ್ನು ಸಕಳೆ ಅರ್ಥಮಾಡಿಕೊಳ್ಳದೆ—ಒಳ್ಳೆಯದು, ಈಗೇನು, ಋಣಸಂಬಂಧವಿದ್ದರೆ ಮಾಯೆ ನಿನಗೆ ಪುನಃ ದೊರೆಯುವಳು—ಎಂದು ಹೇಳಿ ಹೊರಟು ಬರುವಳು.

ಮಾಯಾದೇವಿ ಅಲ್ಲಮನ ವಿರಹತಾಪದಿಂದ ಬೆಂಡಾಗಿ ಕಾಲವನ್ನು ಕಳೆಯುತ್ತಿರಲು[32] ಕೈಲಾಸದಲ್ಲಿ ಪಾರ್ವತಿ ವಿಮಲೆ ಎಂಬವಳನ್ನು

32. ಕೈಲಾಸದಲ್ಲಿ ಈಶ್ವರನು, ಭೂಮಿಗೆ ಹೋದ ನಿನ್ನ ಮಾಯೆ ಏನುಮಾಡಿದಳು? ಎಂದು ಹಾಸ್ಯಮಾಡಿ ಕೇಳಿದಹಾಗೂ ಆಗ ವಿಮಲೆಯನ್ನು ಪಾರ್ವತಿ ಭೂಮಿಗೆ ಕಳುಹಿಸಿದಹಾಗೂ ಪ್ರ. ಸಾಂ. ಸಂಧಿ ೫, ಪದ್ಯಗಳು ೧೩–೧೬ರಲ್ಲಿದೆ.

ಕರೆದು—ನೀನು ಹೋಗಿ ಮಾಯೆಯನ್ನು ಎಚ್ಚರಿಸು, ತಾನು ಭೂಮಿಗೆ ಹೋದ ಕಾರ್ಯವನ್ನು ಮರೆತಿರುವಳು ಎಂದು ಹೇಳಿದಳು. ವಿಮಲೆ ಅದರಂತೆ ಬನವಸೆಗೆ ಬಂದು ಮಾಯೆಗೆ ಕಾಣಿಸಿಕೊಂಡಳು; ಮಾಯೆಗೆ ಹಿಂದಿನ ವೃತ್ತಾಂತವನ್ನೂ, ಅಲ್ಲಮನು ಯಾರೆಂಬುದನ್ನೂ ತಿಳಿಸಿದಳು.[33] ಅದಕ್ಕೆ ಮಾಯಾದೇವಿ "ಅಲ್ಲಮಪ್ರಭುವೆಂದೆನಿಸಿಕೊಂಬವನು ತಾ ಪ್ರತ್ಯಕ್ಷ ಪರಬೊಮ್ಮ ಎಂದು ಹೇಳುವರೆಲ್ಲರು, ಇವನೇ ನಂದ ಮದ್ದಳೆಯಲ್ಲಮನು, ಬಿಡು, ಹೊಂದದೌ, ನೀ ಹೇಳುವುದು ಹುಸಿ" ಎಂದು ವಿಮಳೆಗೆನ್ನಲು ಆಕೆ ಮತ್ತೆ ಬುದ್ಧಿಯನ್ನು ಹೇಳಿ "ವಿಷಯದ ವಿಕಳತನವನು ಬಿಟ್ಟು ನಲೆ ಸಾತ್ವಿಕದ ಬುದ್ಧಿಯಲೀಕ್ಷಿಸು" ಅಲ್ಲಮನ ನಿಜಸ್ವರೂಪ ಗೊತ್ತಾಗುತ್ತದೆ ಎಂದಳು. ಹಾಗಾದರೆ ಮಧುಕೇಶ್ವರಾಲಯಕ್ಕೆ ಹೋಗೋಣ ನಡೆ, ಅಲ್ಲಮನು ಅಲ್ಲಿಗೆ ಬರುವನು, ದೇವನಹುದೋ ಅಲ್ಲವೋ ನೀನು ಸೂಚಿಸು, ಆಮೇಲೆ ನನ್ನ ಕೆಲಸವನ್ನು ನಾನು ನೆರವೇರಿಸುತ್ತೇನೆ ಎಂದು ಮಾಯೆ ಹೇಳಿ ವಿಮಳೆಯನ್ನು ಕರೆದುಕೊಂಡು ದೇವಸ್ಥಾನಕ್ಕೆ ಬಂದಳು. ವಿಮಳೆ ಕಣ್ಣುಸನ್ನೆಯಿಂದ ದೇವನಹುದೆಂದು ಸೂಚಿಸಲು ಮಾಯೆ ಅದನ್ನು ಗ್ರಹಿಸಿದಳು. ಕೂಡಲೆ ಆಕೆಯ ಲಾಸ್ಯಗೀಸ್ಯಗಳೆಲ್ಲ ಕೊನೆಗಂಡು "ನಟ ನಾಟಕನ ಸಿಕ್ಕಿಸುವ ಬಗೆಯಲಿ ಮಾಟಮಕರಿಸಿ ಕಾಣಲಾಯಿತು." ಆಗ ಅಲ್ಲಮನು ಆಕೆಯ ರೀತಿಯನ್ನು ನೋಡಿ "ನಡಮಲ ನಸ್ವರೂಪವ ಕಾಕರಿಗೆ ಕಾಣಿಸುವುದನುಚಿತ

---

33. (a) ವಿಮಳೆ ಅಲ್ಲಮನ ವಿಚಾರವನ್ನು ತಿಳಿಸುತಿದ್ದಾಗ ಮಮಕಾರನು ಹೊಂಚು ಕೇಳಿ ಮಗಳ ಮೇಲೆ ಕೋಪಗೊಂಡಂತೆಯೂ, ಅವನನ್ನು ವಿಮಳೆ ಸಮಾಧಾನಪಡಿಸಿದಂತೆಯೂ ಪ್ರ. ದೇ. ಕೋ. ಪದಗಳು ೧೭೮–೧೮೨ರಲ್ಲಿದೆ. (b) ಅಲ್ಲಮನ ತಾಯಿತಂದೆಗಳಾದ ಸುಜ್ಞಾನಿ ನಿರಹಂಕಾರರು ಕಾಲ್ಪನಿಕ ವ್ಯಕ್ತಿಗಳೆಂದು ಹೇಳಬೇಕು. ಈ ಸುಜ್ಞಾನಿ ನಿರಹಂಕಾರರು ಸದ್ಬ್ರಹ್ಮಣೋತ್ತಮ ದಂಪತಿಗಳೆಂದು ಶಿ. ಚಿಂ. ಸಂಧಿ ೨೯ ಪದ್ಯ ೪೧ರಲ್ಲಿದೆ. ಅವರು "ಸಂತೋಷದಿಂದೆ ರಾಜ್ಯಾದಿ ವೈಭವದೊಳುಂ ಸಂತತಂ ಸುಖಸಂಕಥಾವಿನೋದ" ದಲ್ಲಿದ್ದರೆಂದು ಪ್ರ. ಪು. ಸಂಧಿ ೩, ಪದ್ಯ ೪೫ರಲ್ಲಿದೆ. ಮರಿ ರಾಚಪಟ್ಟೇಶನ ಪ್ರ. ನ. ತಾ. ೪ನೆಯ ಪದದಲ್ಲಿ ಅಲ್ಲಮನು ದೊರೆಯೆಂದು ಹೇಳಿದೆ. ಹರಿಹರನ ಪ್ರ. ದೇ. ರಗಳೆಯಲ್ಲಾದರೋ ಸುಜ್ಞಾನಿ ನಿರಹಂಕಾರ ಎಂಬ ಹೆಸರುಗಳೇ ಇಲ್ಲ. "ನಾಗವಾಸಾಧಿಪತಿಯಪ್ಪ ನಲ್ಲಲಿತ ನಾಯಕಗೆ" (ನೃತ್ಯಶಾಲೆಯ ಯಜಮಾನ) ಅಲ್ಲಮ ಮಗನಾಗಿ ಹುಟ್ಟಿದನೆಂದು ಹೇಳಿದೆ.

ವೆನುತ" ಮದ್ದಳೆಯನ್ನು ಜಿಸಾಡಿ ನಗುತ್ತ ಅಲ್ಲಿಂದ ತೆರಳಿದನು. ಮಾಯಾದೇವಿ ಶೋಕಸಂತಪ್ತಳಾಗಿ ದೈನ್ಯದಿಂದ ವಿಮಳೆಯ ಮುಖವನ್ನು ನೋಡಿದಳು. ಆಗ ವಿಮಲೆ "ಬಾಲೆ? ಹಂಬಲಿಸಿದಡೆ ಫಲವೇನು? ಏಳು ತಡೆದಿರದಲ್ಲಮನನೀರೇಳು ಲೋಕದಲರಸಿ ನೋಡುವೆವು" ಎಂದು ಸಮಾಧಾನಗೊಳಿಸಿ ಮಾಯೆಯನ್ನು ಜೊತೆಯಲ್ಲಿ ಕರೆದುಕೊಂಡು ಹೊರಟಳು. ರಾಜಕುಮಾರಿ ಒಬ್ಬ ಮದ್ದಳೆಯವನ ಹಿಂದೆ ಹುಚ್ಚು ಹಿಡಿದು ಹೊರಟುಹೋದಳೆಂದು ಊರಿನವರೆಲ್ಲ ಆಡುತ್ತ ಹಿಂದಿರುಗಿದರು. ಈ ವರ್ತಮಾನ ಮಮಕಾರ ಮೋಹಿನೀದೇವಿಯರಿಗೆ ತಿಳಿಯಿತು. ಅವರು ತಮ್ಮ ಮಗಳ ಅವಿವೇಕಕ್ಕೆ ದುಃಖಪಟ್ಟು ಆಕೆಯನ್ನು ಹುಡುಕಿಕೊಂಡು ಹೊರಟರು.

ಮಾಯೆ ವಿಮಲೆ ಮತ್ತು ಸಖಿಯರು ಅರಣ್ಯವನ್ನು ಪ್ರವೇಶಿಸಿ ಕಲ್ಲುಮುಳ್ಳುಗಳ ದಾರಿಯನ್ನು ನಡೆದು, ಬಿಸಿಲು ಸುಂಟುರುಗಾಳಿ ಗಳಿಗೆ ಸಿಕ್ಕಿ ಬಳಲಿ ಬೆಂಡಾಗಿ ಬರುತ್ತಿದ್ದರು. ಮಾಯೆಯನ್ನು ಕಂಡ ತಪಸ್ವಿಗಳು ತಮ್ಮ ಕಂತೆ ಕಚ್ಚುಟ ವಿಭೂತಿಯ ಬುಟ್ಟಿಗಳನ್ನು ಆತುರದಿಂದ ಎತ್ತಿಕೊಂಡು "ಎದ್ದೋಡಿದರು ಹುಲಿಗಂಡ ಹುಲ್ಲೆಗಳಂತೆ ದೆಸೆದೆಸೆಗೆ." ಅಲ್ಲಮನು ಋಷಿಗಳ ಸ್ಥಿತಿಗೂ ಮಾಯೆಯ ಕಷ್ಟಕ್ಕೂ ಮರುಗಿದವನಾಗಿ ಕಾಣಿಸಿಕೊಂಡನು. ಆಗ ಮಾಯೆಯ ಕೆಳದಿಯರು ಆತನನ್ನು ಮುತ್ತಿ ಕೊಂಡು "ಲೇಸು ಮಾಡಿದೆಯಯ್ಯ, ಮಾಯೆಯನೀಸುದಿನ ಮನವೊಲಿಸಿ ಕಡೆಯಲಿ ಘಾಸಿಮಾಡುವುದುಚಿತವೇ ನಿನಗೆ?" ಎಂದು ಕೇಳಿದರು. ಆಗ ಅಲ್ಲಮನು "ಆರು ಮೊದಲಲಿ ಬಯಸಹೇಳಿದರು? ಆರು ಕಾಣುತ ಕರೆಸಹೇಳಿದರು? ಆರು ತನ್ನನು ಬಳಿಕ ಉದಾಸಿನ ಮಾಡಹೇಳಿದರು? ನಾರಿಯರಿಗಿದು ಸಹಜ ಸಂಚಲ ಕಾರಣಿಕತನ; ತನ್ನ ತಾನೇ ದೂರಿಸಿ ದಡಾನೇನ ಮಾಡುವೆ?" ಎಂದು ಉತ್ತರಕೊಟ್ಟನು. ಹೀಗೆ ಅಲ್ಲಮನಿಗೂ ಸಖಿಯರಿಗೂ ಮಾತುಗಳಾಗುತ್ತ ತನ್ನದೇನೂ ತಪ್ಪಿಲ್ಲವೆಂದು ಹೇಳು ತ್ತಿರಲು ಮಾಯೆ ಕೋಪ ದುಃಖಗಳಿಂದಲೂ ಪ್ರೇಮದ ಭರವಸೆಯಿಂದಲೂ "ಅಹುದೈ ಧೂರ್ತ! ನೀ ಗತಿಯೆಂದು ನಂಬಿದಡೊಳ್ಳಿತಾಯಿತು, ಬಳಿಕ ಮತ್ತೇನು? ಸಂದ ಸಟೆ ಕುತ್ಸಿತ ಕುಮಂತ್ರದ ಬಂದಿಕಾರನು ಚಾರು

ಚಪಳಿಗನೆಂದು ನಾಮುನ್ನ ಜೀಯೆ" ಎಂದಳು. ಅದಕ್ಕೆ ಅಲ್ಲಮನು ಈ ಕೆಟ್ಟ ಗುಣಗಳೆಲ್ಲವೂ ನನ್ನಲ್ಲಿರುವುವೋ? ನಿನ್ನಲ್ಲಿರುವುವೋ ಎನ್ನುವುದನ್ನು ಹರಿಬ್ರಹ್ಮಾದಿಗಳನ್ನೂ ಸಿದ್ಧಸಾಧಕರನ್ನೂ ಕೇಳೋಣ ಎಂದನು. ಮಾಯೆ "ಹರಿಯನೆದೆಯನು ಮೆಟ್ಟಿದೆನು, ಶಂಕರನನರ್ಧಾಂಗದೊಳು ನೆಟ್ಟನೆ ಹರಿನುಟಿಗೆಯಾಡಿದೆನು, ಬ್ರಹ್ಮನ ಬಾಯ ಮುದ್ರಿಸಿದೆ, ಸುರನರೋರಗರೆಂಬ ಮುಜುವೆಯ ಮರುಳು ತಂಡವನೆನ್ನ ತೊತ್ತಿರ ಶರಣುವೊಗಿಸಿದೆ ಏನ ಕೇಳುವೆ? ಜಿನುಗುಮತಿಗಳ, ಸಿದ್ಧಸಾಧಕ ಮುನಿಗಳೆಂಬವದಿರುಗಳನು ನಾ ಮುನಿದು ಕಚ್ಚಟ ಕಂಥೆ ಬತ್ತಲೆ ಜೋಳು ಜಡೆ ಲೋಚು, ಅನಶನವ್ರತ ನಾರು ಬೇರೆಂಬನಿತರಲಿ ದಂಡಿಸುವೆ ನಾ, ಕಾನನದ ಮರುಳರನು ಏನ ಕೇಳುವೆ" ಎಂದು ತನ್ನ ಪ್ರತಾಪವನ್ನು ಕೊಚ್ಚಿಕೊಂಡಳು. "ಹರಿಹರ ಬ್ರಹ್ಮಾದಿಗಳನೆಲ್ಲರನು ನಿನ್ನಾಧೀನವೃತ್ತಿಯಲಿರಿಸಿ ಏಗೆ ಜಿಕೋಡಾಡಿ ಕಾಡಿದೆನೆಂದು ನೀ ನುಡಿದೆ. ಮರುಳೆ! ನಿನ್ನದಾರು ನಾನಾ ಪರಿಯಲಾಡಿಸುವವರು? ನೀನಿದ ಪರಿಕಿಸದೆ ಗರ್ವದಲಿ ನುಡಿವರೆ?" ಎಂದು ಅಲ್ಲಮನು ಕೇಳಲು, "ಆರನಾರಾಡಿಸುವರೆಂಬುದನಾರು ಬಲ್ಲರು, ಸಾಕು, ಬಜಿಯ ವಿಚಾರ ಪಂತಿರಲಿ. ಎನ್ನೊಡನೆ ಬಜಿಮಾತನಾಡಿದಡೆ ಸಾರಲಜಿವವೆ ನಮಗೆ ನಮ್ಮ ಮನೋರಥಂಗಳು? ನಿನ್ನ ಧೂರ್ತ ವಿಕಾರವೆಲ್ಲವ ಬಿಟ್ಟು ಕೃಪೆಮಾಡು" ಎಂದು ಬೇಡಿದಳು. ನಿನ್ನ ಕೋರಿಕೆ ಸಾಧ್ಯವಲ್ಲ ಹಿಂದಿರುಗು, ಎಂದು ಅಲ್ಲಮನು ಮಾಯೆಯನ್ನು ತಿರಸ್ಕರಿಸಲು, ವಿಮಳೆ ತಾನಾದರೂ ತನ್ನ ಚಮತ್ಕಾರದಿಂದ ಅಲ್ಲಮನನ್ನು ಮಾಯೆಗೆ ಅಧೀನಪಡಿಸಬೇಕೆಂದು ಪ್ರಯತ್ನಿಸಿದಳು. ಆಕೆ ಹೇಳಿದುದಕ್ಕೆಲ್ಲ[34] ಅಲ್ಲಮನು ಪ್ರತ್ಯುತ್ತರಕೊಟ್ಟು "ಕಡಲ ನೀರುಗಳೆಲ್ಲವಮೃತದ ಮಡುಗಳಾದಡೆಯಹವು, ಸುರಗಿರಿ ಕುಡಿಸರಿದು ಹಬ್ಬಿದಡೆ ಹಬ್ಬುವುದವನಿಮಂಡಲವ, ಗಿಡುಗಳೆಲ್ಲವು ಕಲ್ಪತರುವಾದಡೆಯಹವು ಎತ್ತಾನು ಕಾಲಕೆ, ಮಡದಿ ಮಾಯೆಗೆ ಪರಮ ತತ್ವಜ್ಞಾನವಿಲ್ಲ" ಎಂದು ಖಂಡಿತವಾಗಿ ಹೇಳಿ ಅದೃಶ್ಯನಾದನು.

---

34. ಈ ಸಂದರ್ಭದಲ್ಲಿ ವಿಮಳೆ ಅಲ್ಲಮನಿಗೆ ಪುಷ್ಪಿಣಿ ಮೋಹಿನಿ ನಾಚಿಮುಂತಾದವರನ್ನು ಈಶ್ವರನು ಒಲಿಯಲಿಲ್ಲವೆ? ಎಂಬದಾಗಿ ಕಥೆಗಳನ್ನೂ, ಮತ್ಸ್ಯಗಂಧಿ ಪರಾಶರರ ವೃತ್ತಾಂತವನ್ನೂ ಹೇಳಿದಂತೆ ಪ್ರ. ಪು. ದಲ್ಲಿದೆ.

ತಮ್ಮ ಪ್ರಯತ್ನವು ವಿಫಲವಾಯಿತೆಂದು ಮಾಯೆಯೂ ವಿಮಲೆಯೂ ಚಿಂತಿಸುತ್ತಿರಲು ಮಮಕಾರ ಮೋಹಿನೀದೇವಿಯರು ಅಲ್ಲಿಗೆ ಬಂದರು. ಆಗ ಮಾಯೆಯ ಜನ್ಮಕಾರಣವನ್ನು ವಿಮಲೆ ಅವರಿಗೆ ತಿಳಿಸಿ, ಸಮಾಧಾನಮಾಡಿ ಮಾಯೆಯನ್ನು ಕರೆದುಕೊಂಡು ಕೈಲಾಸಕ್ಕೆ ಹೊರಟು ಹೋದಳು.

ಪಾರ್ವತಿ ತನ್ನ ಪೈಜಿ ವ್ಯರ್ಥವಾದುದಕ್ಕಾಗಿ ವ್ಯಥೆಪಡುತ್ತಿರಲು ಶಿವನು,—ಹೀಗಾಗುವುದೆಂದು ಮೊದಲೇ ನಾನು ನಿನಗೆ ಹೇಳಿದೆ, ನೀನು ಕೇಳಲಿಲ್ಲ. ಈಗ ಮೀರಿಹೋದುದೇನೂ ಇಲ್ಲ. ನಿನ್ನ ಸಾತ್ವಿಕಾಂಶವನ್ನು ಭೂಮಿಗೆ ಕಳುಹಿಸು. ಅಲ್ಲಮನ ಅನುಗ್ರಹ ದೊರೆತು ಶಿವತತ್ತ್ವೋಪದೇಶವಾಗುವುದು—ಎಂದು ಹೇಳಿದನು. ಆಗ ಪಾರ್ವತಿ ಸಂತೋಷಪಟ್ಟು ತನ್ನ ಸತ್ವಗುಣ ಸ್ವರೂಪವನ್ನು ಭೂಮಿಗೆ ಕಳುಹಿಸಿದಳು. ಇದೇ ಕಾಲದಲ್ಲಿಯೆ ಈಶ್ವರನ ಆಜ್ಞಾನುಸಾರ ಬಸವಾದಿಗಳ ಅವತಾರವೂ ಭೂಮಿಯಲ್ಲಾಗುವುದು.[35]

ಉಡುತಡಿಯಲ್ಲಿ ನಿರ್ಮಳ ಮತ್ತು ಸುಮತಿಯರಿಗೆ ಪಾರ್ವತಿಯ ಸಾತ್ವಿಕಾಂಶವು ಮಹದೇವಿಯಕ್ಕನಾಗಿ ಜನಿಸುವುದು. ಆಕೆ ಶಿವಭಕ್ತಿಯೇ ರೂಪುಗೊಂಡಂತೆ ಬೆಳೆಯುತ್ತ ಬಂದಳು. ಯೌವನವು ಪ್ರಾಪ್ತವಾಯಿತು. ಒಂದು ದಿನ ಆ ಊರ ದೊರೆಯಾದ ಕೌಶಿಕನು ವೈಹಾಳಿಗೆ ಹೋಗಿ ಹಿಂದಿರುಗುತ್ತ ಸಹಜ ಸೌಂದರ್ಯವತಿಯಾದ ಮಹಾದೇವಿಯನ್ನು ಆಕೆಯ ಮನೆಯ ಬಾಗಿಲ ಮುಂದೆ ನೋಡಿ "ಕಾಮಾತುರದಿ ಮಿಗೆ ಕಂಗೆಟ್ಟು ಕಳವಳಿಸಿದನು ನಿಮಿಷದಲಿ." ಆಕೆ ಯಾರೆನ್ನುವುದನ್ನು ವಿಚಾರಿಸಿ ತಿಳಿದು ಆಕೆಯನ್ನು ವರಿಸಬೇಕೆಂಬ ಸಂಕಲ್ಪದಿಂದ ಅರಮನೆಯನ್ನು ಸೇರಿದನು. "ಎಳೆದು ತರಿಸಿದಡವಳ ಮನಸಿಗೆ ಮುಳಿಸು, ಮೇಲಪಕೀರ್ತಿ, ಕೆಲಬರ ಕಳುಹಿ ತಿಳುಹುವೆನು" ಎನ್ನುತ ಹೆಗ್ಗಡಿತಿಯರನ್ನು[36] ಅಲ್ಲಿಗೆ ಅಟ್ಟಿದನು.

---

35. ಬಸವಣ್ಣನವರು ಮಹದೇವಿಯಕ್ಕ ಮುಂತಾದವರ ಜನ್ಮ ಕಾರಣಗಳು ವೀರಶೈವ ಗ್ರಂಥಗಳಲ್ಲಿ ಒಂದೇ ರೀತಿಯಾಗಿಲ್ಲ. ಇವುಗಳನ್ನು ಪರಿಶಿಷ್ಟ I (iii) ರಲ್ಲಿ ನೋಡುವುದು. 36. ಮಂತ್ರಿಗಳನ್ನು ಕಳುಹಿಸಿದಂತೆ ಮ. ದೇ. ಪು. ಮತ್ತು ಪ್ರ. ಪು. ಗಳಲ್ಲಿ ಹೇಳಿದೆ. ಮ. ದೇ. ರಗಳೆಯಲ್ಲಿ ಈ ಸಂದರ್ಭ ಬೇರೆ ರೀತಿಯಲ್ಲಿದೆ. ಮೊದಲು

ಅವರು ಬಂದು ಕೇಳಲು ನಿರ್ಮಳನು "ನೃಪಕುಲದವಗೆ ಕೊಡೆವು" ಎಂದನು. ಆಗ ಹೆಗ್ಗಡಿತಿಯರು "ಅರಸಗಿದಿರೇ ನೀವು, ಸುಮ್ಮನೆ ಸರಸ ದಿಂದಲಿ ಕೊಡುವುದೊಳ್ಳಿತು, ವಿರಸವಾದರೆ ನೀವು ಮಾಡುವುದೇನು ಭೂಪತಿಯು? ಮರುಳುತನಗಳು ಬೇಡ" ಎಂದು ಮುಂತಾಗಿ ನಯಭಯ ಗಳಿಂದ ಹೇಳಿದರೂ ಒಪ್ಪದೆ—ನಮ್ಮ ಮಗಳನ್ನೇ ಕೇಳಿ. ಆಕೆ ಒಪ್ಪಿದರೆ ಕೊಡೋಣವಂತೆ—ಎಂದು ನಿರ್ಮಳನು ಹೇಳಿದನು. ಹೆಗ್ಗಡಿತಿಯರು ಮಹಾದೇವಿಯನ್ನು ಕೇಳಿದರು. ಆಗ ಆಕೆ ಒಂದು ಉಪಾಯವನ್ನು ಆಲೋಚನೆಮಾಡಿ ದೊರೆಯನ್ನ ಮನೆಗೆ ಕರೆಸಿಕೊಂಡಳು. ದೊರೆ ಸಂತೋಷ ದಿಂದ ಬಂದು "ಲಲನೆ ಕೇಳೌ, ನಿನ್ನ ಬಯಕೆಯ ಸಲಿಸುವೆನು ಮೊದಲಲ್ಲಿ ಬಳಿಕಾನೊಲಿಸಿಕೊಂಬೆನು" ಎಂದು ನಾನಾ ಪ್ರಮಾಣಗಳನ್ನಿಟ್ಟು ಹೇಳಿದನು. ಆಕೆ—ಸರಿ ಆಗಲಿ ಎಂದು ಹೇಳಿ ಅವನ ಅಂತಃಪುರವನ್ನು ಸೇರಿದಳು.[37] ಆ ದಿವಸ ರಾತ್ರಿ ದೊರೆಯಾದ ಕೌಶಿಕನು ಪ್ರಣಯವಾಕ್ಯಗಳನ್ನು ಆಡ ಲಾರಂಭಿಸಲು ಮಹದೇವಿಯಕ್ಕನು—ನನ್ನ ಮನದಿಷ್ಟವನ್ನು ನೆರವೇರಿಸು ವುದಾಗಿ ಮಾತುಕೊಟ್ಟಿರುವೆಯಲ್ಲ, ನೀನು ಶಿವಭಕ್ತನಾಗಬೇಕು, ನೀನು ಭವಿಯಾಗಿರ್ದಡೆ ಒಲ್ಲೆನು—ಎಂದು ಹೇಳಿದಳು. ದೊರೆಯ ಸುಮ್ಮಾನ ವೆಲ್ಲ ದುಮ್ಮಾನಕ್ಕೆ ತಿರುಗಿತು. "ನಮಗೆ ಶಿವಭಕ್ತಿಯನು ಮಾಡುವ

---

ಮಂತ್ರಿಗಳು ವಸಂತಕನನ್ನು ಕಳುಹಿಸುವರು. ವಸಂತಕನು ಬಂದು ದೊರೆಯ ವಿರಹಾವಸ್ಥೆ ಯನ್ನು ವರ್ಣಿಸಿ ಅವನು ಬಹು ಕೋಪಿ, ಅತಿ ನಿಷ್ಠುರನು ಎಂದು ಹೇಳಲು ಮಹ ದೇವಿಯಕ್ಕನ ತಂದೆತಾಯಿಗಳು ಹೆದರಿ ದೊರೆಯನ್ನು ಮದುವೆಯಾಗು ಎಂದು ಹೇಳು ವರು. ಆಕೆ ಸಮ್ಮತಿಸದೆ ಕೋಪಗೊಳ್ಳುವಳು. ಆಮೇಲೆ ಮಂತ್ರಿಗಳು ಬಂದು ದೊರೆ ನಿಮ್ಮನ್ನು ಕೊಲ್ಲುವಂತೆ ಆಜ್ಞೆಮಾಡಿದ್ದಾನೆ, ಬದುಕಿರಬೇಕಾದರೆ ಮಗಳನ್ನು ದೊರೆಗೆ ಕೊಡಿ–ಎಂದು ಹೇಳುವರು. ತಂದೆತಾಯಿಗಳು ನಡುಗಿ "ಸೊಪ್ಪಾದ ಮುಖದಲ್ಲಿ ಕಣ್ಣೀರ್ಗಳಂ ತಳೆದು । ಎಲೆ ಮಗಳೆ, ಮಗಳೆ ನಿನ್ನಯ ದೂಸಱಿಂದೆಮಗೆ । ನೆಲಸಿತ್ತು ದುರ್ಮರಣವೇನೆಂಬೆ ವೃದ್ಧರಿಗೆ । ಹೊಸತು ನಿನ್ನಯ ಭಕ್ತಿತಾನೆಮಗೆ ಸಂಕಟಂ । ವಸುಧೆ ಯೊಳು ಭವಿಯೊಳಗೆ ಬಾಳರೇನುತ್ಕಟಂ" ಎಂದು ಅತ್ತು ಕಾರಿಕಾಲಮ್ಮೆ ಹೇರೂರ ಹೆಂಗೂಸು ಮುಂತಾದವರ ಕಥೆಗಳನ್ನು ಉದಾಹರಣೆಗಾಗಿ ಹೇಳುವರು. ಮ. ದೇ. ರ. ಸ್ಥಲ ೩ ಮ. ದೇ. ಪು. ದಲ್ಲಿ ಸ್ವಲ್ಪ ವ್ಯತ್ಯಾಸಗಳಿವೆ. 37. ಮಹದೇವಿಯಕ್ಕ ಮತ್ತು ಕೌಶಿಕ ಇವರಿಗೆ ವಿವಾಹವಾಯಿತೇ? ಎಂಬದನ್ನು ಚಾಮರಸನು ಹೇಳಿಲ್ಲ. ಈ ವಿಚಾರದಲ್ಲಿ ಗ್ರಂಥಗಳಲ್ಲಿ ಏಕಾಭಿಪ್ರಾಯವಿಲ್ಲ. ಪರಿಶಿಷ್ಟ I (iv) ನೋಡಿ.

ನಮುಯುವಳವಡದು" ಎಂದನು. "ನಮಗೆ ನಿಮ್ಮಯ ಸಂಗವಳವಡದು" ಎಂದು ಮಹದೇವಿಯಕ್ಕನು ಉತ್ತರಕೊಟ್ಟು ದೊರೆ ಕೊಟ್ಟಿದ್ದ ವಸ್ತ್ರ ಭೂಷಣಾದ್ಯಲಂಕಾರಗಳನ್ನು ತೆಗೆದಿಟ್ಟು ವಿರಕ್ತಳಾಗಿ ನಿರ್ವಾಣಳಾಗಿ ಹೊರಟುಬಂದಳು. ದೊರೆ ಆಕೆಯ ವರ್ತನೆಗೆ ಆಶ್ಚರ್ಯಪಟ್ಟು ಏನು ಮಾಡಲೂ ತೋರದೆ, ಹೋದರೆ ಹೋಗಲಿ ಎಂದು ಬಿಟ್ಟುಕೊಟ್ಟನು. ನಿರ್ಮಳ ಮತ್ತು ಸುಮತಿ ಆಕೆಯನ್ನು ಇದಿರುಗೊಂಡು—ಇಷ್ಟು ಸಣ್ಣ ವಯಸ್ಸಿಗೆ ಇದೇನು ವಿರಕ್ತಿಯಮ್ಮ! ಇದೇನು ವೇಷ! ಬೇಡ—ಎಂದು ಎಷ್ಟೋ ಬಗೆಯಲ್ಲಿ ಹೇಳಿದರು. ಆದರೆ ಆಕೆ ಒಪ್ಪದೆ "ಶಿವಗರ್ಪಿಸಿದ ತನುವಿಂದು ಮೊದಲಾಗಿ, ಎನ್ನ ಹಂಬಲನಿಂದು ಕಳೆವುದು ನೀವು" ಎಂದು ಹೇಳಿ ಗುರು ದೇವನನ್ನು ಹುಡುಕಲು ಹೊರಟುಹೋದಳು.

ಇತ್ತ "ಲಿಂಗ ನಿಜವನು ಬಯಸಿ ಭಕ್ತಗಣಂಗಳಿರುತಿರಲು" ಅಲ್ಲಮ ಪ್ರಭು ಅವರನ್ನು ಅನುಗ್ರಹಿಸಬೇಕೆಂದು "ಕಾರಣ ಕಾಯದಲಿ ಸುಳಿದ." ಹೀಗೆ ಬರುತಿರಲು ದಾರಿಯಲ್ಲಿ "ಕಟ್ಟಿದಿರಿನಲಿ ಚೆಲುವಾಗಿ ತಳಿತ ಕೆಂದಾವರೆಯ ನೈದಿಲುಗೊಳನ ನಾನಾ ಪರಿಯ ಹೂಗಿಡುಗಳ ಲತಾ ಮಂಟಪದ ತೋಟವ ಕಂಡನಲ್ಲಮನು." ಅದರ ಯಜಮಾನನಾದ ಗೊಗ್ಗಯ್ಯನೆಂಬ ಭಕ್ತನು ಗುರು ಲಿಂಗ ಜಂಗಮ ಸೇವೆಗಾಗಿ ಕಾಯಕಮಾಡಿ ಮುಕ್ತಿಯನ್ನು ಗಳಿಸಬಹುದೆಂದು ತಿಳಿದಿದ್ದನು. ಅಲ್ಲಮಪ್ರಭು ಅಂತಹ ಸೇವೆಯೇ ಸಾಲದೆಂದೂ, ಆದರಿಂದ ಪ್ರಾಣಲಿಂಗ ಜ್ಞಾನವನ್ನುಂಟು ಮಾಡಿಕೊಳ್ಳಬೇಕೆಂದೂ ಬೋಧಿಸಿ, ಸಮಾಧಿಸ್ಥನಾಗಿದ್ದ [38]ಅನಿಮಿಷಯ್ಯ ನೆಂಬ ಶಿವಯೋಗಿಯ ದೃಷ್ಟಾಂತವನ್ನು ತೋರಿಸಿದನು. ಆಗ ಅನಿಮಿಷಯ್ಯನ ಕೈಯಲ್ಲಿದ್ದ ಲಿಂಗವು ಅಲ್ಲಮನ ಕೈಸೇರಿತು. ಆ ಲಿಂಗದೊಡನೆ ಆ ಶಿವ ಯೋಗಿಯ ಪ್ರಾಣಕಳೆಯೂ ಬಂದು ಸೇರಿತು. ಅವುಗಳನ್ನೆಲ್ಲ ನೋಡು ತ್ತಿದ್ದ ಗೊಗ್ಗಯ್ಯನು ಅಲ್ಲಮನನ್ನು ಮಹಾಪುರುಷನೆಂದು ಗ್ರಹಿಸಿ ಆತ ನಿಂದ ಉಪದೇಶವನ್ನು ಕೈಕೊಂಡನು.

---

38. ಅನಿಮಿಷಯ್ಯನು ಚಾಳುಕ್ಯಾನ್ವಯದ ತ್ರೈಲೋಕ್ಯ ಚೂಡೇಶ ಮತ್ತು ಮಹಲ್ಲೇಖೆಗೆ ಜನಿಸಿದ ಮಗನೆಂದು ಸಿಂ. ಪು. ಮತ್ತು ಚೆ. ಬ. ಪು. ಗಳಲ್ಲಿ ಹೇಳಿದೆ.

ಅಲ್ಲಮನು ಅಲ್ಲಿಂದ ಹೊರಟು ದಾರಿಯಲ್ಲಿ ಮುಕ್ತಾಯಕ್ಕನೆಂಬ ಶಿವಭಕ್ತೆಗೆ ಕಾಣಿಸಿಕೊಂಡನು. ಆಕೆ ತನ್ನ [39]ಸೋದರನಾದ ಅಜಗಣ್ಣನು ಲಿಂಗೈಕ್ಯನಾದುದಕ್ಕೆ ದುಃಖಿಸುತ್ತಿದ್ದಳು. ಅಲ್ಲಮನನ್ನು ಕಂಡು ಮುಕ್ತಾಯಕ್ಕ ಎದ್ದು "ಸಲೆ ಸತ್ಕರಿಸಿ ವಂದಿಸಿ ತನ್ನ ಚಿಂತೆಯ ಪರಿಹರಿಸುವಂತಪ್ಪನೊಬ್ಬ ಮಹಾತ್ಮನು ನೀನೆನಗೆ ದೊರಕಿದೆಯೆಲಾ, ಎನ್ನ ಪುಣ್ಯಕೆ ಸರಿಯುದಾರು" ಎಂದು ಭಕ್ತಿಯಿಂದ ನುಡಿದಳು.[40] ಅಲ್ಲಮನು ಮನಕರಗಿದವನಾಗಿ "ತಾಯೆ! ಭಕ್ತರಿಗುಂಟೆ ಚಿಂತೆಗಳಾಯಸಂಗಳು ....ಬಱಿದೆಗೆ ಹಲವ ಹಂಬಲಿಸಿ ಬಾಯಬಿಡಲಹುದೇ ವೃಥಾ ನಿಃಕಾಯದಜಗಣ್ಣಂಗೆ, ಮರುಳೇ ಮಾಯೆ ಮೋಹವಿದೇತಕೌ ಮುಕ್ತಾಯಿ!" ಎಂದು ಸಂತೈಸಿ—ಅಜಗಣ್ಣನು ಗುಹೇಶ್ವರ ಲಿಂಗದ ಶರಣನು. ಮೊದಲು ಇದ್ದು ಆಮೇಲೆ ಹೋದವನಲ್ಲ. ಆತನು ನಿತ್ಯನು—ಎಂದು ತಿಳಿವನ್ನು ನೀಡಿದನು. ಕಡೆಯಲ್ಲಿ ಮುಕ್ತಾಯಕ್ಕ "ದೇವ! ನಿಮ್ಮವರುಗಳ ಪರಿಯನು ನೀವೆ ಬಲ್ಲಿರಿ, ಹಾವಿನಡಿಯನು ಹಾವುಗಳು ನೆಱೆ ಬಲ್ಲುವಲ್ಲದೆ ನಮಗೆ ಗೋಚರವೆ?" ಎಂದು ಹೇಳಿ ಮುಂದೆ ನನಗೆ ಗತಿಯೇನು?—ಎಂದು ಕೇಳಿದಳು. "ಅಕ್ಕ ಕೇಳೌ, ನಿನ್ನ ಹೆಸರಿಗೆ ತಕ್ಕ ಬಯಕೆಯ ನೀನು ಬಯಸಿದೆ, ಮಿಕ್ಕ ಭವಭಾರಿಗಳು ಬಲ್ಲರೆ ಲಿಂಗಮಾರ್ಗವನು?" ಎಂದು ಅಲ್ಲಮನು ಆಕೆಯನ್ನು ಹೊಗಳಿ ಆಕೆಗೆ ವೀರಶೈವೋಪದೇಶವನ್ನು ಮಾಡಿದನು.

ಮುಂದೆ ಅಲ್ಲಮಪ್ರಭು ಸೊನ್ನಲಾಪುರಕ್ಕೆ ಪ್ರಯಾಣ ಮಾಡಿ, ಸಿದ್ಧರಾಮನು ಕಟ್ಟಿಸುತ್ತಿದ್ದ ದೇವಾಲಯ ಮತ್ತು ಕೆರೆಗಳನ್ನು ನೋಡಿದನು.

---

39. ಮುಕ್ತಾಯಕ್ಕ ಅಜಗಣ್ಣನ ತಂಗಿಯೋ ಅಕ್ಕನೋ ನಿಷ್ಕರ್ಷೆಯಾಗಿ ತಿಳಿದಿಲ್ಲ. ಚಾಮರಸನು ಬರೆದಿರುವಂತೆಯೇ ತಮಿಳು ಪ್ರಭುಲಿಂಗಲೀಲೆಯಲ್ಲಿಯೂ ಇದೆ. "ಒಡನೆ ಹುಟ್ಟಿದವನು" ಎಂದು ಹೇಳಿದೆ. ತೆಲುಗು ಮತ್ತು ಸಂಸ್ಕೃತ ಪ್ರಭುಲಿಂಗಲೀಲೆಗಳಲ್ಲಿ ಅಜಗಣ್ಣನು ಮುಕ್ತಾಯಕ್ಕನ ತಮ್ಮನೆಂದು ಹೇಳಿದೆ. ಶ್ರೀಯುತ ಸಿದ್ಧರಾಮಪ್ಪ ಪಾವಟೆ ಅವರು ಅಜಗಣ್ಣನು ಮುಕ್ತಾಯಕ್ಕನ ಅಣ್ಣನೆಂದು ಹೇಳಿದ್ದಾರೆ. (ಜಯಕರ್ನಾಟಕ, ವರ್ಷ 3, ಸಂ. 11, ಪುಟ 778.) ಅವರು ಶೂನ್ಯಸಂಪಾದನೆಯಲ್ಲಿ ಮುಕ್ತಾಯಕ್ಕನು ಹೇಳುವ "ಅಜಗಣ್ಣನ ಬೆನ್ನಬಳಿಯವಳು ನಾನಯ್ಯ" ಶೂ. ಸಂ. (ಮು.) ಪುಟ 24 ಎಂಬುದನ್ನು ಮೇಲೆ ಕಂಡಂತೆ ಅರ್ಥಮಾಡಿರಬಹುದು.

40. ಅಜಗಣ್ಣ ಮುಕ್ತಾಯಕ್ಕರ ವೃತ್ತಾಂತವನ್ನು ಪರಿಶಿಷ್ಟ I(v) ರಲ್ಲಿ ನೋಡಿ.

ಯೋಗಿವರ್ಯನಾದ ಸಿದ್ಧರಾಮನಿಗೂ ನಿಷ್ಕಾಮ ಬುದ್ಧಿ ಜನಿಸಲಿಲ್ಲವಲ್ಲಾ ಎಂದು ಪ್ರಭು ವ್ಯಥೆಗೊಂಡು ಕೆರೆಯ ಕಾಮಗಾರಿಯಲ್ಲಿದ್ದ ಗುಡ್ಡರನ್ನು ಕೆಣಕಿ, ಅವರ ಗುರುವಾದ ಸಿದ್ಧರಾಮನನ್ನು ಅಲ್ಲಗಳೆದನು. ಅವರು ಕಲ್ಲುಗುಂಡುಗಳಿಂದ ಅಲ್ಲಮನನ್ನು ಹೊಡೆಯಲು ಯತ್ನಿಸಿ ಕೃತಾರ್ಥರಾಗದೆ ಸಿದ್ಧರಾಮನ ಬಳಿಗೆ ಬಂದು ದೂರು ಹೇಳಿದರು. ತನ್ನನ್ನು ನಿಂದಿಸಿದ ದುರಾತ್ಮನನ್ನು ಭಸ್ಮಮಾಡುವುದಾಗಿ ಸಿದ್ಧರಾಮನು ಕೋಪೋದ್ರೇಕದಿಂದ ಎದ್ದುಬರಲು ಅಲ್ಲಮನು ನಗುತ್ತ "ಲೇಸು ಲೇಸೈ! ಸಿದ್ಧರಾಮನ ವಾಸಿ ಸಂಸಾರಿಗಳಿಗಿಂದಲಿ ಸಾಸಿರಕೆ ವೆಗ್ಗಳಿಸಿತಲಾ! ಸುಡು ಸುಡು ಯತಿತ್ವವನು. ಈನು ಕೋಪಾಟೋಪ ರೋಷಾವೇಶವೇತಕೆ ಯೋಗಿಯಾದ ನಿರಾಸೆವಂತಂಗೆ?" ಎಂದನು. "ಸಾಕು ಸಾಕು, ಮಹೇಂದ್ರ ಜಾಲವ ನೀಕಲಿತು ಬಂದೆಮ್ಮ ಮುಂದಿಯ ಕಾಕುತನದಲಿ ಕಾಡಿದಾ ವೊಗ್ಗಿನ್ನು ನಮ್ಮೊಡನೆ ನೂಕಲಜಿಯದು ನಿನಗೆ" ಎಂದು ಸಿದ್ಧರಾಮನು ಉದ್ರೇಕದಿಂದ ಹೇಳಿದನು.

ಅಲ್ಲಮ.—"ಭಾಪುರೆ! ಮಝು! ಪೂತು! ನೀನಹುದು! ಈ ಪರಿಯಲಿರಬೇಕು ಮನದಾಳಾಪದಂಗವಣೆಗಳು ಮಿಗೆ ಮಾಯಾ ಪ್ರಪಂಚಿನಲಿ. ಕೋಪ ನಿಮ್ಮಯ ಸಂಪ್ರದಾಯ ಕಳಾಪದಲಿ ಶಾಶ್ವತವಲಾ! ನಿರ್ಲೇಪಗೀ ಪರಿಯುಚಿತವೇ ರಾಮಯ್ಯ?"

ಸಿದ್ಧರಾಮ.—"ಕೆಣಕದಿರು ನೀ, ಸಂಪ್ರದಾಯಗಳೆಣಿಕೆ ನಿನಗೇಕೆ....ಎನ್ನ ಜಜಿಂದರೆ ಹಣೆಯ ಕಣ್ಣಿನ ಕಿಡಿಯ ಕೆದಱುವೆನು."

ಅಲ್ಲಮ.—"ಚಾಗು ಚಾಗುರೆ! ನೊಸಲಕಣ್ಣಿನ ಜೇಗೆಯಲಿ ಮುನ್ನೆನಿತ ಕೊಂದೆಯೊ! ಯೋಗಿಯಹುದೈ ನೀನು ಹಿಂಸಾ ಧರ್ಮ ಕರ್ಮದಲಿ! ರಾಗದಿಂದುರಿದೇಳುತಿಹ ಭವರೋಗಿ, ನಿನ್ನೊಳು ಮಾತನಾಡಲಿಕಾಗದೆಮಗೆ."

ಈ ಮಾತುಗಳನ್ನು ಕೇಳಿ ಸಿದ್ಧರಾಮನು ಕೋಪದಿಂದ ನೊಸಲ ಕಣ್ಣನ್ನು ತೆಗೆಯಲು ಊರೆಲ್ಲ ಸುಟ್ಟುಹೋಗುತ್ತಿದ್ದುದಲ್ಲದೆ ಅಲ್ಲಮನಿಗೆ ಯಾವುದೊಂದು ಬಾಧೆಯೂ ಆಗಲಿಲ್ಲ. ಸಿದ್ಧರಾಮನು ಜಟ್ಟ ಉರಿಯನ್ನು ಅಲ್ಲಮನು ತನ್ನ ಅಂಗಾಲಲ್ಲಿ ಅಡಗಿಸಿಕೊಂಡನು. ಇವುಗಳನ್ನೆಲ್ಲ ನೋಡಿ ಸಿದ್ಧರಾಮನಿಗೆ ಜ್ಞಾನೋದಯವಾಯಿತು. ಬಂದಿರುವವನು ತನ್ನ ಆರಾಧ್ಯ

ದೇವನೇ ಇರಬೇಕೆಂದು ತಿಳಿದು ಪಶ್ಚಾತ್ತಾಪ ವಹ್ನಿಯಲ್ಲಿ ಬೆಂದುಹೋಗಿ ಅಲ್ಲಮನ ಚರಣದ ಮೇಲೆ ಬಿದ್ದು ಅಪರಾಧ ಕ್ಷಮಾಪಣೆಯನ್ನು ಬೇಡಿದನು. ಸರ್ವ ಜೀವದಯಾಪ್ರದಾಯಕನಾದ ಅಲ್ಲಮನು "ಮನದೊಳಗೆ ನಸು ನಗುತಲೀ ಮೂರ್ಖನ ಗುಣಂಗಳನೇನಮಾಡುವೆ" ಎನ್ನುತ "ತನುಜ! ಸಾಕೇಳೇಳು, ಖಾತಿಯು ನೆನಹು ನಮ್ಮೊಳಗಿಲ್ಲ" ಎಂದು ಎತ್ತಿ ಸಮಾಧಾನ ಪಡಿಸಿದನು. ಬಳಿಕ ಸಿದ್ಧರಾಮನು—ದೇವ! ನೀನು ಹೀಗೆ ಬಡಜಂಗಮ ವೇಷದಿಂದ ಬಂದರೆ ನಮಗೆ ಹೇಗೆ ತಿಳಿಯಬೇಕು. ಮೋಸ ಹೋದೆವು— ಎಂದು ಹೇಳಲು ಅಲ್ಲಮನು ಹಿರಿಯರು ಕಿರಿಯರು ಎಂಬ ಭೇದ ಭಾವವಿಲ್ಲದೆ ಸರ್ವಸಮತಾಭಾವವಿರಬೇಕೆಂದು ತಿಳುಹಿ, ಖ್ಯಾತಿ ಪೂಜಾಲಾಭದಿಚ್ಛೆಗಳಿಂದ ಪ್ರಯೋಜನವಿಲ್ಲೆಂದು ಬುದ್ಧಿ ಹೇಳಿದನು. ಕಡೆಯಲ್ಲಿ ಸಿದ್ಧರಾಮನನ್ನು "ಶಬುದಾಗಮಂಗಳ ಶಿಕ್ಷೆ ನಿನಗಿನ್ನೇಗುವುವು ಸಂಸ್ಕಾರಿ ನೀನು" ಎಂದು ಹೊಗಳಿ "ಕಾಯಕರಣದ ಸಂದು ಸಂಬಂಧವನು ಸೂಚಿಸಿ, ಜೀವಪರಮರನೊಂದುಮಾಡುವ ಶಕ್ತಿಭಕ್ತಿಯ ಹೊಂದಿಕೆಯನುಪದೇಶ ಮಾಡಿದನು."

ತರುವಾಯ ಅಲ್ಲಮನು ಸಿದ್ಧರಾಮನನ್ನು ಕರೆದುಕೊಂಡು ಕಲ್ಯಾಣ ಪಟ್ಟಣಕ್ಕೆ ಹೊರಟನು.[41] ಈಶ್ವರನ ಸಗುಣ ಮತ್ತು ನಿರ್ಗುಣ ಮೂರ್ತಿಗಳಂತೆ ಸಿದ್ಧರಾಮ ಮತ್ತು ಅಲ್ಲಮರು ಬಾಗಿಲು ಮುಂದೆ ನಿಂತಿರುವುದನ್ನು ನೋಡಿ ಹಡಪದ ಅಪ್ಪಣ್ಣನು ಬಸವೇಶ್ವರನಿಗೆ ಸಮಾಚಾರ ಮುಟ್ಟಿಸಿದನು. ಇಷ್ಟಲಿಂಗ ಪೂಜಾಸಕ್ತನಾಗಿದ್ದ ಬಸವೇಶ್ವರನು ಎದ್ದು ಹೋಗಲಾರದೆ— ಒಳಕ್ಕೆ ಕರೆದುಕೊಂಡು ಬಾ ಎಂದು ಹೇಳಿದನು. ಅಪ್ಪಣ್ಣನು ಬಂದು ಕರೆದನು. ಅಲ್ಲಮನು ಒಳಕ್ಕೆ ಹೋಗಲಿಲ್ಲ. ಬಂದಿರುವವನು ಅಲ್ಲಮ ಪ್ರಭುವೆಂದು ಮಡಿವಳ ಮಾಚಯ್ಯ ಮತ್ತು ಚೆನ್ನಬಸವರು ಎಚ್ಚರಿಸಲು ಬಸವೇಶ್ವರನು "ಚಿಂತಾಶರನಿಧಿಯಲ್ಲಿ ಮುಳುಗಿ" ಶಿವಗಣ ಸಹಿತ ಎದ್ದು

41. ಇದು ಸಿದ್ಧರಾಮ ಪುರಾಣದಲ್ಲಿಲ್ಲ. ಅಲ್ಲಮನು ಬಂದು ಉಪದೇಶಮಾಡಿದ ಮೇಲೆ ಕೆರೆಯ ಮಧ್ಯದಲ್ಲಿ ಸಮಾಧಿ ಹೊಂದಿದಂತೆ ರಾಘವಾಂಕನು ಬರೆದಿದ್ದಾನೆ. ಬಸವ ಪುರಾಣದಲ್ಲಿ ಅಲ್ಲಮನು ಕಲ್ಯಾಣಕ್ಕೆ ಬಂದ ಪ್ರಸ್ತಾವವಿದೆ. ಆದರೆ ಜೊತೆಯಲ್ಲಿ ಸಿದ್ಧರಾಮನನ್ನು ಕರೆತಂದಂತೆ ಹೇಳಿಲ್ಲ. ಚೆನ್ನಬಸವ ಪುರಾಣದಲ್ಲಿ ಜೊತೆಯಲ್ಲಿ ಕರೆತಂದಂತೆಯೂ ಚೆನ್ನಬಸವನಿಂದ ದೀಕ್ಷೆ ಕೊಡಿಸಿದಂತೆಯೂ ಹೇಳಿದೆ.

ಬಂದು ಅಲ್ಲಮನ ಚರಣದಲ್ಲಿ ಬಿದ್ದನು. "ನಾನು ಮಱವೆಯ ಮರುಳ
ಸಂತತ ನೀನೆಯಱಿವಿನ ತಿರುಳು, ತಿಳಿವಡೆ ನಾನು ರಂಜಕನು, ಅಱೀ
ರಱಿಯಲು ನೀ ನಿರಂಜನನು. ನಾನು ಭಾವಿಸೆ ಪಶು, ವಿಚಾರಿಸೆ ನೀನ-
ಪಶುಪತಿ. ಎನ್ನ ತಪ್ಪನು ನೀನೆ ತಿದ್ದುವುದು" ಎಂದು ಮುಂತಾಗಿ
ಬಸವೇಶ್ವರನು ಬೇಡಿದನು.[42] ಚೆನ್ನಬಸವ ಮಡಿವಳಯ್ಯ ಮತ್ತು ಶಿವ
ಭಕ್ತರು ಅವನ ಪರವಾಗಿ ಮಾತನಾಡುತ್ತಿರಲು ಅಲ್ಲಮನು ನಗುತ್ತ
"ನೋಡಿದ್ಯೆ ರಾಮಯ್ಯ! ಭಕ್ತರು ಮಾಡುವುದು ತಾನೊಂದು,
ಮಿಗೆ ಮಾತಾಡುವುದು ಬೇಱೊಂದು; ಜಂಗಮವೊಲಿದು ನಡೆತರಲು
ಪಾಡನೇ ಪರುಠವಿಸಿ ನುಡಿವ ಸಘಾಡಿಕೆಯನೊಡ್ಡೈಸಿ, ತಮ್ಮಯ ಖೋಡಿ
ಗಳ ತಾವಱಿಯರು" ಎಂದು ಹೇಳಿದನು. ಆದರೆ ಸಿದ್ಧರಾಮನು ಭಕ್ತ
ರನ್ನು ಸಲಹಬೇಕೆಂದು ಬಂದಮೇಲೆ ಅವರ ಹೆಚ್ಚು ಕಡಮೆಗಳನ್ನೇಕೆ
ಎಣಿಸಬೇಕು? ಕ್ಷಮಿಸು ಎಂದು ತಾನೂ ಪ್ರಾರ್ಥಿಸಿದನು. ಆಗ
ಬಸವ ಚೆನ್ನಬಸವಾದಿಗಳಿಗೆ ಹೆಚ್ಚು ಧೈರ್ಯ ಬಂದು "ಮುನ್ನ ನಿರು
ಪಾಧಿಯಲಿ ಕರುಣಿಸಿ, ನಿನ್ನ ಲೀಲೆಯಲೊಲಿದು ನೀ ಬಂದಿನ್ನುಪಾಧಿಯ
ನಱಿಸುವುದು ಮರಿಯಾದೆಯಲ್ಲ" ಎಂದು ಕುಯುಕ್ತಿಯನ್ನಾಡಲು
ಅಲ್ಲಮನು ನಕ್ಕು "ನಡವಳಿಗಳೇನಾದಡಾಗಲಿ, ನುಡಿವಳಿಯಲತಿ ಜಾಣ
ರಾದಿರಿ" ಎಂದು ಹೇಳಿ—ಒಳಕ್ಕೆ ನಡೆಯಿರಿ "ಶಿವಲಿಂಗ ಭಕ್ತಿಯ ಬೆಡಗ
ನೇಕಾಂತದಲಿ ನಿಮಗೊಡಬಡಿಸಿ ಹೇಳುವೆನು" ಎಂದು ಒಳಕ್ಕೆ ಕರೆದು
ಕೊಂಡು ನಡೆದನು.

ಬಸವೇಶ್ವರನ ಮಹಮನೆಯಲ್ಲಿ ಹನ್ನೆರಡು ವರ್ಷಗಳಿಂದ ಗುಪ್ತ ಭಕ್ತಿ
ಯನ್ನಾಚರಿಸುತ್ತಿದ್ದ ಮರುಳಶಂಕರದೇವನ ಮಾಹಾತ್ಮ್ಯೆಯನ್ನು ಅಲ್ಲಮನು
ಹೊಗಳಿ ಆತನಿಗೆ ಐಕ್ಯಪದವಿಯನ್ನು ಕೊಟ್ಟನು. ಬಳಿಕ ಬಸವೇಶ್ವರಾದಿ

---

42. ಲಿಂಗರಹಿತನಾದ ಸಿದ್ಧರಾಮನೊಡನೆ ಬಂದು ನಿಂತದ್ದರಿಂದ ಲಿಂಗರಹಿತನನ್ನು ನೋಡುವುದು ಹೇಗೆಂದು ಸ್ವಲ್ಪ ತಡಮಾಡಿದೆ ಎಂದು ಬಸವೇಶ್ವರನು ಹೇಳಿದಂತೆಯೂ, ಹಾಗಾದರೆ ಸಿದ್ಧರಾಮನಿಗೆ ಲಿಂಗಧಾರಣ ಮಾಡಿಸಿರೆಂದು ಹೇಳಿ ಚೆನ್ನಬಸವನಿಂದ ದೀಕ್ಷೆ ಕೊಡಿಸಿದಂತೆಯೂ, ಪ್ರ. ದೇ ನ. ತಾ. ಪುಟ 11, ಪದ 17ರಲ್ಲಿ ಇದೆ. . ಅ. ದೇ. ರಗಳೆಯಲ್ಲಿ ಸಿದ್ಧರಾಮನಿಗೆ ಸೊನ್ನಲಾಪುರದಲ್ಲಿಯೇ ಅಮುಗಿದೇವಯ್ಯನು ಲಿಂಗಧಾರಣ ಮಾಡಿಸಿದಂತೆ ಹೇಳಿದೆ. ಕೆಲವು ವಚನಗಳಲ್ಲಿ ಚೆನ್ನಬಸವನಿಂದ ಲಿಂಗಧಾರಣವಾದಂತೆ ಹೇಳಿವೆ.

ಗಳಿಗೆ ಇಷ್ಟಲಿಂಗಮಾರ್ಗಾಚರಣೆಯನ್ನು ಸರಸವಾಗಿ ಬೋಧಿಸಿ ಅದು ಪ್ರಾಣಲಿಂಗದ ಸಿಧಿಯಸಜೀವ ಅಂಜನವೆಂದು ತಿಳಿಯಹೇಳಿದನು. ಹೀಗೆ ಅಲ್ಲಮನು ಶಿವಾನುಭವ ಮಂಟಪದಲ್ಲಿ ಬೋಧೆಮಾಡುತ್ತಿದ್ದಾಗ [43]ಮಹ ದೇವಿಯಕ್ಕನು ಆ ಸಭೆಗೆ ಬಂದು ಅಲ್ಲಮನ ಪಾದಗಳಿಗೆ ನಮಸ್ಕರಿಸಿ ಸ್ತೋತ್ರಮಾಡುತ್ತ ನಿಂತುಕೊಂಡಳು. ಆ ಅಲ್ಪವಯಸ್ಸಿಗೆ ಅಷ್ಟೊಂದು ವಿರಕ್ತಿ ಬಂದಿರುವುದನ್ನು ಬಸವ ಚೆನ್ನಬಸವಾದಿಗಳು ನೋಡಿ ಆಕೆಯನ್ನು ಸ್ತೋತ್ರಮಾಡಿದರು. ಆಕೆ ಶರೀರಾಭಿಮಾನವನ್ನು ಸಂಪೂರ್ಣವಾಗಿ ತ್ಯಜಿಸಿರುವುದನ್ನೂ ಜ್ಞಾನದ ಖನಿಯಾಗಿರುವುದನ್ನೂ ಅಲ್ಲಮನು ತಿಳಿದು ಆಕೆಗೆ ಐಕ್ಯವನ್ನು ಉಪದೇಶಿಸಿ ಶ್ರೀಗಿರಿಯ ಕದಳೀವನಕ್ಕೆ ಹೋಗೆಂದು ಹೇಳಿದನು. ಮಹದೇವಿಯಕ್ಕನು ಶಿವಶರಣರಿಗೆಲ್ಲ ಶರಣಾರ್ಥಿಯನ್ನು ಹೇಳಿ ಹೊರಟುಹೋದಳು.

ಅಲ್ಲಮನು ಪ್ರಾಣಲಿಂಗಾಚರಣೆಯನ್ನು ಬಸವೇಶ್ವರಾದಿಗಳಿಗೆ ಉಪದೇಶಿಸಿ ಬಾಹ್ಯ ಪೂಜಾಡಂಬರಗಳಿಂದ ಈಶ್ವರನು ತುಷ್ಟನಾಗುವುದಿಲ್ಲ ವೆಂದು ಹೇಳಿದನು. ಬಳಿಕ ಪ್ರಾಣಲಿಂಗೋಪಾಸನೆಗೆ ಸಾಧನೆಯನ್ನು ಮಾಡುತ್ತಿರಿ, ನಾನು ಪುನಃ ಬಂದು "ಮೇಲಣ ನೆನಹಿನುಪದೇಶವನು ಮಾಡುವೆನು" ಎಂದು ಹೇಳಿ ಎಲ್ಲರಿಗೂ ಹರಸಿ ಅವರನ್ನು ಬಿಟ್ಟು ಹೊರಟನು.

ಅಲ್ಲಮನು ದೇಶಾಂತರಗಳನ್ನು ತಿರುಗುತ್ತ ಭಕ್ತಜನರನ್ನು ಉದ್ಧಾರ ಮಾಡುತ್ತ ಶ್ರೀಪರ್ವತಕ್ಕೆ ಹೋದನು. ಅಲ್ಲಿ ಗೋರಕ್ಷನೆಂಬ ಸಿದ್ಧನು ತನ್ನ ವಿದ್ಯೆಯ ಸಿದ್ಧಿಯಿಂದ ವಜ್ರದೇಹಿಯಾಗಿ ಅದೇ ಮುಕ್ತಿಯೆಂದು ತಿಳಿದಿರಲು "ಈ ತನು ತಾನೆ ಕಾಲನ ನಿಳಯ, ನೀನಿದ ನಂಬಿ ನುಡಿದಡೆ ಪ್ರಳಯ ನಿನ್ನನು ಜಡುವುದೇ ಗೋರಕ್ಷ?" ಎಂದು ಜಜಿಾದನು. ಆಗ ಗೋರಕ್ಷನು—ಇಗೋ ಹಿಡಿ, ಈ ಕತ್ತಿಯಿಂದ ನನ್ನನ್ನು ಹೊಡೆದು ನೋಡು. ಒಂದು ರೋಮ ಕತ್ತರಿಸಿದರೂ ನಾನು ಸಿದ್ಧನಲ್ಲ—ಎಂದು

---

43. ಮಹದೇವಿಯಕ್ಕನಿಗೆ ೧೨ ವರ್ಷ ವಯಸ್ಸು ಮಾತ್ರ ಆಗಿತ್ತೆಂದು ವಚನಗಳಲ್ಲಿ ಹೇಳಿದೆ (ಶೂ. ಸಂ. ಪುಟ ೩೩೬, ಮುದ್ರಿತ ಪುಸ್ತಕ). ಆಕೆಯ ಕಥೆ, ಮ. ದೇ. ರಗಳೆ, ಮ. ದೇ. ಪುರಾಣ, ಶೂ. ಸಂ.ಗಳಲ್ಲಿ ಬರುವುದಾದರೂ ವ್ಯತ್ಯಾಸಗಳು ಕೆಲವಿವೆ. ಅವುಗಳನ್ನು ಇಲ್ಲಿ ತಿಳಿಸಿಲ್ಲ.

ಹೇಳಿ ಕೈಗೆ ಕತ್ತಿಯನ್ನು ಕೊಟ್ಟನು. ಅದರಂತೆ ಅಲ್ಲಮನು ಬಲವಾಗಿ ಹೊಡೆಯಲು ಖಣಿಖಟಿಲೆಂದು ವಜ್ರದಮೇಲೆ ಬಿದ್ದಂತೆ ಸದ್ದಾಯಿತೇ ಹೊರತು ಸಿದ್ಧನಿಗೆ ಎಳ್ಳಷ್ಟೂ ಬಾಧೆಯಾಗಲಿಲ್ಲ. ಆಗ ಸಿದ್ಧನು ನಗುತ್ತ—ರೋಗರುಜಿನಾದಿಗಳಿಂದಲೂ ದುರ್ಮರಣಾದಿಗಳಿಂದಲೂ ಬಾಧೆಯಿಲ್ಲದಂತೆ ಶರೀರವನ್ನು ಹೀಗೆ ಬಲಪಡಿಸಿಕೊಂಡಿರುವುದು ಮೋಕ್ಷವಲ್ಲದಿದ್ದರೆ ಮತ್ತಾವುದು ಮೋಕ್ಷ ?—ಎಂದು ಕೇಳಿದನು. ಅಲ್ಲಮನು ಕತ್ತಿಯನ್ನು ಗೋರಕ್ಷನ ಕೈಗೆ ಕೊಟ್ಟು ನನ್ನನ್ನು ಹೊಡೆದು ನೋಡು ತಿಳಿಯುವುದು—ಎಂದನು. ಗೋರಕ್ಷನು ಅಲ್ಲಮನನ್ನು ಹೊಡೆಯಲು ಬಯಲನ್ನು ಹೊಡೆದಂತೆ ಆಯಿತಲ್ಲದೆ ಸದ್ದು ಕೂಡ ಆಗಲಿಲ್ಲ. ಗೋರಕ್ಷನು ಆಶ್ಚರ್ಯಪಟ್ಟು—ಹೀಗೆ ನಿರ್ದೇಹಿಯಾಗುವ ಮಾರ್ಗವನ್ನು ನನಗೆ ತಿಳಿಸೆಂದು ಬೇಡಿಕೊಳ್ಳಲು "ಬಿಸಿಯ ಹದನನು ತಿಳಿದು ಲೋಹವ ಬೆಸುವವೊಲು ಪರಿಪಾಕಭಾವದ ಹಸನನರಿದು" ಅಲ್ಲಮಪ್ರಭು ಆತನಿಗೆ ವೀರಶೈವೋಪದೇಶವನ್ನು ಮಾಡಿದನು.[44]

ಅಲ್ಲಮನು ಗೋರಕ್ಷನನ್ನು ಬಿಟ್ಟು ಅರಣ್ಯದಲ್ಲಿ ಸಂಚರಿಸುತ್ತ ಒಬ್ಬ ಕಿರಾತನು ಬೇಟೆಯಾಡುತ್ತಿದ್ದುದನ್ನು ನೋಡಿ ಜೀವಹಿಂಸೆಮಾಡುವುದು ಪಾಪವೆಂದು ತಿಳಿಸಿ ಸನ್ಮಾರ್ಗಕ್ಕೆ ತಿರುಗಿಸಿದನು. ಕಾಡಿನಲ್ಲಿ ಜಪತಪಾದಿಗಳನ್ನು ಮಾಡಿಕೊಂಡು ಕಾಷ್ಠವ್ಯಸನಗಳನ್ನು ಕಟ್ಟಿಕೊಂಡು ಕಾಲ ಕಳೆಯುತ್ತಿದ್ದ ಋಷಿಗಳನ್ನು ನೋಡಿ "ಯಾಗಕೆ ಆತ್ಮಯಾಗವ ನನುರತಿಗೆ ನಿಜರತಿಯ ದೇವಾರ್ಚನೆಗೆ ಹೃದಯವನುಪನಯನಕಾ ನಿಜ ನಿರೀಕ್ಷಣೆಯ ಇನಿತು ಬಾಹ್ಯದ ಕರ್ಮ ಭಕ್ತಿಗಳಿನಿತನಂತರ್ಮಾರ್ಗದಲಿ ಸೂಚನೆಯ ಮಾಡಿದನು." ಹೀಗೆ ಪ್ರಭು ದೇಶಪರ್ಯಟನಮಾಡಿ ಭಕ್ತಾದಿಗಳನ್ನು ಉದ್ಧರಿಸಿ ಕಲ್ಯಾಣಪಟ್ಟಣದ ಕಡೆಗೆ ತಿರುಗಿದನು.

---

44. ಗೋರಕ್ಷನಿಗೆ ರೇವಣಸಿದ್ಧನಿಂದ ಮೊದಲೇ ದೀಕ್ಷೆಯಾಗಿತ್ತೆಂದು ಅ. ಪ್ಯೋ. ಪುಟ ೧೦೫ರಲ್ಲಿ ಹೇಳಿದೆ. ಆ ಗೋರಕ್ಷನು ಕೊಲ್ಲಾಪುರದವನೆಂದೂ ಶ್ರೀಪರ್ವತದವನಲ್ಲವೆಂದೂ ನಮಗೆ ತೋರುವುದು. ಪ್ರ. ಪು. ದಲ್ಲಿ "ಪ್ರೇಮದಿಂದೆ ಯಾರಾದೊಡಂ ಕುಟಿಲ ಸಿದ್ಧರ ಭಂಜಿಸಿದ ಕಥೆಯಂ। ವ್ಯಮೋಹದಿಂ ಬೆಸಸೆನಲು" ಅಲ್ಲಮಪ್ರಭು ಶ್ರೀಪರ್ವತದ ಗೋರಕ್ಷನಿಗೆ ಕೊಲ್ಲಾಪುರದ ಗೋರಕ್ಷ ಮತ್ತು ರೇವಣಸಿದ್ಧರ ಕಥೆಯನ್ನು ಹೇಳಿದಂತೆ, ಸಂಧಿ ೭, ಪದ್ಯಗಳು ೧೨೮–೧೪೬ರಲ್ಲಿದೆ.

ಈ ಹೊತ್ತಿಗೆ ಬಸವೇಶ್ವರನು ಕಲ್ಯಾಣಪಟ್ಟಣದಲ್ಲಿ [45]ಶೂನ್ಯ ಸಿಂಹಾಸನವನ್ನು ರಚಿಸಿ ಅಲ್ಲಮಪ್ರಭುವನ್ನು ಹಾರೈಸುತ್ತಿರಲು, ಪ್ರಭು ತಾನು ವೇಷಾಂತರದಿಂದ ಹೋಗಿ ಪರೀಕ್ಷಿಸಬೇಕೆಂದು ನಿಶ್ಚಯಿಸಿ ಹುಣ್ಣುಗಳೆದ್ದು ಕೀವು ರಕ್ತ ಸುರಿಯುತ್ತಿರುವ ದೇಹವನ್ನು ಧರಿಸಿ ಕಲ್ಯಾಣದಲ್ಲಿ ಕಾಣಿಸಿಕೊಂಡನು. ಈ ವಿಕೃತ ವೇಷದಲ್ಲಿದ್ದ ಅಲ್ಲಮನನ್ನು ಬಸವೇಶ್ವರನು ಗುರುತಿಸಿ ಮರ್ಯಾದೆಯಿಂದ ತನ್ನ ಅರಮನೆಗೆ ಕರೆದು ಕೊಂಡುಹೋಗಿ ಶೂನ್ಯಸಿಂಹಾಸನದಲ್ಲಿ ಕುಳ್ಳಿರಿಸಿದನು. ಶರಣರೆಲ್ಲರು ಸ್ತೋತ್ರ ಮಾಡುತ್ತಿದ್ದರು. ಸ್ತ್ರೀಯರು ಆರತಿಗಳನ್ನೆತ್ತುತ್ತಿದ್ದರು. ಬಸವೇಶ್ವರನು ಭಕ್ತಿಪಾರವಶ್ಯದಿಂದ ನಿಬ್ಬೆರಗಾಗಿ ನೋಡುತ್ತಿದ್ದನು. ಆಗ ಆರೋಗಣೆಗೆ ಸಮಯವಾಯಿತು. ಎಂದಿನಂತೆ ಬಸವೇಶ್ವರನ ಮನೆಗೆ ಬರುವ ಜಂಗಮರು ಆರೋಗಣೆಗೆ ಬಂದರು. ಭಕ್ತಿಪಾರವಶ್ಯದಿಂದ ನಿಂತಿದ್ದ ಬಸವೇಶ್ವರನು ಬಂದ ಜಂಗಮರನ್ನು ಮಾತನಾಡಿಸಲಿಲ್ಲ. ಆಗ ಅವರೆಲ್ಲ ಕುಪಿತರಾಗಿ ಎದ್ದುಹೋದರು. ಆ ಬಳಿಕ ಬಸವೇಶ್ವರನಿಗೆ ಆ ನಮಹಾಚಾರ ತಿಳಿಯಿತು. ಆತನು ನಡೆದ ಅಚಾತುರ್ಯಕ್ಕೆ ವ್ಯಥೆಪಡುತ್ತಿರಲು ಅಲ್ಲಮನು "ನಾವು ಬಡ ಜಂಗಮವು ಬಂದಡೆ ನೀವು ನಮ್ಮನು ತೃಪ್ತಿ ಪಡಿಸದೆ ಆವ ಕಾರಣ ನೀನು ಚಿಂತಿಸುತಿರ್ದೆ ಬಸವಣ್ಣ?" ಎಂದು ಕೇಳಿದನು.[46] ಆಗ ಬಸವೇಶ್ವರನು ತನ್ನ ದುಃಖವನ್ನು ಹೇಳಲು, ಮೊದಲು ನನ್ನ ಹಸಿವನ್ನು ನೀಗಿಸು, ನಿನ್ನ "ಲಕ್ಷದ ಮೇಲೆ ತೊಂಭತ್ತಾರು ಸಾವಿರ ಜಂಗಮವು ಸಂತುಷ್ಟಿಪಡುವಂತೆ ತೋಱುವೆನು" ಎಂದು ಪ್ರಭು ಉತ್ತರ ಕೊಟ್ಟನು. ಮಾಡುವೆ ನೀಡುವೆ ಎಂಬ ಅಹಂಭಾವದಿಂದ ಮೆರೆಯುತ್ತಿದ್ದ ಬಸವೇಶ್ವರನು ಪ್ರಭುವಿನ ಆರೋಗಣೆಗೆ ಪದಾರ್ಥಗಳನ್ನು ತಂದು ಬಡಿಸ ಹೇಳಿದನು. ಅಲ್ಲಮನು ಊಟಮಾಡುತ್ತಿರಲು ಒಳಗಿದ್ದ ಪದಾರ್ಥಗಳೆಲ್ಲ ಮುಗಿದುಹೋದವು. ಕಣಜಗಳಿಂದ ಹೊಸ ಹೊಸದಾಗಿ ದವಸ ಧಾನ್ಯ ಗಳನ್ನು ತೆಗೆಯಿಸಿ ಅಡಿಗೆಮಾಡಿ ಹಾಕಿದರೂ ಅಲ್ಲಮನ ಹಸಿವು ಅಡಗಲಿಲ್ಲ.

---

45. ಹರಿತವಾದ ಕತ್ತಿಯ ಅಲಗುಗಳಿಂದ ಈ ಶೂನ್ಯಸಿಂಹಾಸನವನ್ನು ರಚಿಸಿದಂತೆ, ಪ್ರ. ಪು. ಸಂಧಿ 9, ಪದ್ಯ 8ರಲ್ಲಿದೆ. ಶೂನ್ಯಸಿಂಹಾಸನ ರಚನೆ, ಪ್ರಭು ಅದರಲ್ಲಿ ಕುಳಿತಿದ್ದು ಈ ಪ್ರಸ್ತಾವಗಳು ಬ. ಪು. ಮತ್ತು ಚೆ. ಬ. ಪು. ಗಳಲ್ಲಿಲ್ಲ. 46. ಪ್ರಭುವಿನ ಆರೋಗಣೆ ಬ. ಪು. ದಲ್ಲಿ ಮೊದಲೆ ಬರುತ್ತದೆ (ಸಂಧಿ 8, ಪದ್ಯಗಳು 13—16).

ಊರಲ್ಲಿದ್ದ ಭಕ್ತರ ಮನೆಗಳ ಅಡಿಗೆಗಳನ್ನೆಲ್ಲ ತಂದು ಬಡಿಸಿದರೂ ಅಲ್ಲಮನ ಹಸಿವು ಅಡಗಲಿಲ್ಲ. ಆಕಾಶವೇ ಬಾಯ್ದೆರೆದು ಕುಳಿತಂತೆ ಅಲ್ಲಮನು ಕುಳಿತಿದ್ದನು. ಆಗ ಬಸವೇಶ್ವರನ ಎದೆ ನಡುಗಿತು. ತನ್ನ ಭಾಷೆಗೆ ಲೋಪಬಂದಿತಲ್ಲಾ ಇನ್ನೇನು ಮಾಡಲಿ ಎಂದು ಚಿಂತಿಸುತ್ತಿರಲು ಚೆನ್ನಬಸವನು ನಿನ್ನನ್ನೇ ಓಗರವಾಗಿ ಸಮರ್ಪಿಸು ಎಂದನು. ಅಲ್ಲಮನು ನಗುತ್ತ "ಹಸಿದು ಬಂದವನಲ್ಲ, ಅರ್ಥದ ದೆಸೆಗೆ ಬಂದವನಲ್ಲ, ಕಾಮದ ಮಸೆಗೆ ಮನದಲಿ ನೊಂದು ಬಂದವನಲ್ಲ; ನಾ ನಿನ್ನ ಹಸರಿಸಿದ ದಾಸೋಹ ತನವನು ನಸಿನೆಮಾಡಲು ಬಂದೆನಲ್ಲದೆ ಅಶನದಾಸೆಗಳೆನ್ನಲುಂಟೆ ಬಸವ?" "ಕನ್ನಡಿಯ ಪ್ರತಿಬಿಂಬಕೆ ಇನ್ನೊಂದಸ್ಯ ಚೆಲುವಿಕೆಯಾಗಬಲ್ಲುದೆ? ನಿನ್ನ ಮನದೊಳು ಮಾಟಕೂಟದ ಬುದ್ಧಿ ಮಮಕರಿಸಿ, ನನ್ನ ಹಸು ಹುರಿದುಂಡು ದಲ್ಲದೆ ನಿನ್ನ ಮನದಲಿ ಮಾಟವಿಲ್ಲದಡೆನ್ನ ತನುವಿಗೆ ಊಟವಿಲ್ಲೈ ಬಸವ" ಎಂದು ಮುಂಕಾಗಿ ತಿಳಿಯಹೇಳಿ ಕೈತೊಳೆದು ತಾಂಬೂಲವನ್ನು ಸ್ವೀಕರಿಸಿದನು. ಬಳಿಕ—ಹೋಗು, ನಿನ್ನ ಜಂಗಮರನ್ನು ಊಟಕ್ಕೆ ಕರೆದು ತಾ—ಎಂದು ಬಸವೇಶ್ವರನಿಗೆ ಹೇಳಿದನು. ಬಸವೇಶ್ವರನು ಜಂಗಮರೆಡೆಗೆ ಬಂದು ಕರೆಯಲು ಅವರು ತಮ್ಮ ತುಂಬಿದ ಹೊಟ್ಟೆಗಳನ್ನೂ ಮೇಲೇಳು ತ್ತಿರುವ ತೇಗುಗಳನ್ನೂ ತೋರಿಸುತ್ತ ಎಂದಿಗಿಂತ ಹೆಚ್ಚಾಗಿ ಈ ದಿನ ನಮಗೆ ಊಟವಾಗಿದೆ. ನಿನ್ನ ಭಕ್ತಿಯ ಮಹಿಮೆಯೋ, ನಿನ್ನ ಗುರುವಿನ ಮಹಿಮೆಯೋ ನಮಗೆ ತಿಳಿಯದು ಎಂದು ಬಸವೇಶ್ವರನನ್ನೂ ಅಲ್ಲಮ ನನ್ನೂ ಹೊಗಳಿದರು. ಬಸವೇಶ್ವರನು ಆಶ್ಚರ್ಯ ಸಂತೋಷಗಳಿಂದ ಹಿಂದಿರುಗಿ "ಬಸುಜಿ ಹೆಂಗಸಿನೂಟ ಹೊಟ್ಟೆಯ ಶಿಶುವ ದಣಿಸುವವೊಲು, ಜಗಂಗಳ ಬಸುಜಿತೊಳಡಗಿಸಿಕೊಂಡು ನೀ ದಣಿಯುಣಲು ಜಂಗಮಕೆ ಹಸಿವ ದೆಲ್ಲಿಯದು? ಎಲ್ಲರಿಗೆ ಸಂತಸವು, ಸಂತುಷ್ಟತೆಯಲಿದ್ದರು, ಹೊಸತಿ ದಾದುದು ಲೋಕದೊಳು ಗುರುರಾಯ" ಎಂದನು. ಅದಕ್ಕೆ ಅಲ್ಲಮನು "ನಿನ್ನ ಭಾವನೆಯಿದ್ದ ಪರಿಯಲಿ ನಿನ್ನ ಜಂಗಮ ತುಷ್ಟರಾದಡೆ ನನ್ನ ನೇತಕೆ ಜಟ್ಟಿಮಾಡಿದೆ ಬಜೀದೆ ಬಯಲಿಂಗೆ? ನಿನ್ನ ಕತದಿಂದಾದೆನಲ್ಲದೆ ಮುನ್ನ ನಾನೆಂದೆಂಬ ವಾಸನೆಯೆನ್ನಲುಂಟೆ ದಿಟ ವಿಚಾರಿಸೆ ಬಸವ?" ಎಂದು ಉತ್ತರಕೊಟ್ಟನು. ಆಗ ಬಸವೇಶ್ವರನು ಲಿಂಗ ಸಂತುಷ್ಟವಾದರೆ ಜಂಗಮ ಸಂತುಷ್ಟವಾಗುವುದೆಂಬುದನ್ನೂ, ಜಂಗಮ ಸಂತುಷ್ಟವಾದರೆ

ಸಚರಾಚರವೆಲ್ಲ ಸಂತುಷ್ಟವಾಗುವುದೆಂಬದನ್ನೂ ಅಲ್ಲಮನ ಮಹಿಮೆಯಿಂದ ತಿಳಿದಂತೆ ಹೇಳಿದನು.[47] ಬಳಿಕ ಅಲ್ಲಮಪ್ರಭು ಬಸವಣ್ಣ ಮುಂತಾದವರಿಗೆ ಮುಂದಿನ ಜ್ಞಾನೋಪದೇಶಮಾಡಿ ಬಸವಣ್ಣನಿಂದ ಲೋಕದ ಉದ್ಧಾರವಾಯಿತೆಂದೂ, ಬಸವಣ್ಣನಿಂದ ಗುರು ಲಿಂಗ ಜಂಗಮವಾಯಿತೆಂದೂ ಹೊಗಳಿ ಪರಮಪದವಿಯನ್ನು ಅನುಗ್ರಹಿಸಿ, ಎಲ್ಲರನ್ನೂ ಆಶೀರ್ವದಿಸಿ ಅಲ್ಲಿಂದ ತೆರಳಿದನು.[48] ಬಸವ ಚೆನ್ನಬಸವಾದಿಗಳು ಅಚಲಪದವಿಯನ್ನು ಪಡೆದು ಹರುಷದಲಿದ್ದರು.

ಹೀಗೆ ಭೂಮಿಯಲ್ಲಾದುದನೆಲ್ಲ ಪಾರ್ವತಿ ಈಶ್ವರನಿಂದ ತಿಳಿದು ಸಂತೋಷಪಟ್ಟು, "ದೇವ! ನೀನೆಂದಂತೆ ಘನ ಮಹಿಮಾವಲಂಬನು ತಪ್ಪದೈ ಪ್ರಭುದೇವ" ಎಂದು ಹೇಳಿದಳು. ಅಲ್ಲಮಪ್ರಭು ನಿತ್ಯನಾಗಿರುವ ನೆಂಬ ಧ್ವನಿಯನ್ನು "ಸಂತಸದಲಿರುತಿರ್ದನೆಲ್ಲರ ಹೃದಯಕಮಲದಲಿ" ಎಂದು ಸೂಚಿಸಿ, "......ಸಮಸ್ತ ಜಾತಿಯ ಜಾಲವನು ಸರ್ವರನು ಕರುಣಿಸಿ ಪಾಲಿಸುತಲಿರುತಿರ್ದನೆಮ್ಮಯ ಗುರುಗುಹೇಶ್ವರನು", "......ಸಚರಾಚರರಿಗನುದಿನ ಕರುಣದಿಂದಲಿ ವರದನಾಗಲಿ ಗುರು ಗುಹೇಶ್ವರ ಲಿಂಗ ಲೀಲೆಯಲಿ" ಎಂಬದಾಗಿಯೂ ಚಾಮರಸನು ಮಂಗಳ ವನ್ನು ಹೇಳಿ ಪ್ರಭುಲಿಂಗಲೀಲೆಯನ್ನು ಉಪಸಂಹಾರ ಮಾಡಿದ್ದಾನೆ.

**VI. ಅಲ್ಲಮನ ಚರಿತ್ರೆಯಲ್ಲಿ ನಡೆದಿರುವ ಮಾರ್ಪಾಟು.**— ಪ್ರಭುಲಿಂಗಲೀಲೆಯ ಮೊದಲ ಭಾಗದಲ್ಲಿ ಮಾಯಾವಿಲಾಸವೂ ಅದರ ಅಪಜಯವೂ ವರ್ಣಿತವಾಗಿದೆಯಷ್ಟೆ. ಇದು ಪ್ರಭುಲಿಂಗಲೀಲೆಯಲ್ಲಿ

---

47. ನಾಗಲಾಂಬೆ ಅಲ್ಲಮನ ಬಳಿಗೆ ಬಂದು ಕೈಲಾಸದಲ್ಲಿ ಮಹಾಕಾಳ ಮುಂತಾದವರು ಆತನನ್ನು ಸ್ತೋತ್ರಮಾಡಿದಾಗ, ತಾನು ಕೋಪಗೊಂಡದ್ದನ್ನು ಹೇಳಿ "ಗರಳಧರನಾಜ್ಞೆಯಿಂ ವೃಷಭ ಸಹ ನಿಮ್ಮ ಕಂಡು ಧನ್ಯಳಾದೆನಿನ್ನು" ಎಂದು ಧನ್ಯವಾದ ಗಳನರ್ಪಿಸಿ, "ನಾನು ಅವಿಶ್ವಾಸಿ, ನನಗೆ ಕೃಪೆಯಾಗು, ದುರ್ಗುಣಗಳುಂ ಬಾರದಂತೆ ನಡೆಸಯ್ಯ" ಎಂದು ಕೈಮುಗಿದಂತೆಯೂ ಪ್ರ. ಪು. ಸಂಧಿ ೯, ಪದ್ಯ ೮೩–೮೬ರಲ್ಲಿದೆ (ನಾಗಲಾಂಬೆ ಪಾರ್ವತಿಯ ಅವತಾರ). 48. ಅಲ್ಲಮಪ್ರಭು ಲಿಂಗೈಕ್ಯನಾದ ಸಮಾಚಾರ ವನ್ನು ಚಾಮರಸನು ಹೇಳಿಲ್ಲ. ಆತನು ಬಯಲಾದ ಸ್ಥಳ ಶ್ರೀಪರ್ವತವೆಂದೂ ತೇರದಾಳ ವೆಂದೂ ಬಳ್ಳಿಗಾವೆಯೆಂದೂ ತಾಳಗುಂದವೆಂದೂ ಭಿನ್ನಾಭಿಪ್ರಾಯಗಳಿವೆ. ಪರಿಶಿಷ್ಟ I (vi) ನೋಡಿ.

ಬರುವುದಕ್ಕೆ ಪ್ರಬಲವಾದ ಕಾರಣವಿರುವಂತೆ ತೋರುತ್ತದೆ. ಪ್ರಭುವಿನ ಚರಿತ್ರೆಯನ್ನು ಮೊದಲು ಬರೆದವನು ಈಗ ನಮಗೆ ತಿಳಿದಮಟ್ಟಿಗೆ ಹರೀಶ್ವರನು. ಹರೀಶ್ವರನು ಬರೆದಿರುವ ಕಥೆಯಲ್ಲಿ ನಿರ್ಮಾಯನು ಕಾಮ ವಶನಾಗಿದ್ದಾನೆ.[49] ಈಶ್ವರನ ಆಸ್ಥಾನಕ್ಕೆ ಬರುವ ದಾರಿಯಲ್ಲಿ ಸುರಕಾಂತೆ ಯೊರ್ವಳನ್ನು ನೋಡಿ ಮನವಳುಕಲು, ಈಶ್ವರನು ಅದನ್ನು ತಿಳಿದು ನೀವಿಬ್ಬರೂ ಭೂಮಿಗೆ ಹೋಗಿ "ಕಾಮಂಗೆ ವಶವಾಗಿ ಸಕಲ ಸುಖಮಂ ಮುಟ್ಟಿ" ಆಮೇಲೆ ಬರುವುದೆಂದು ಹೇಳಲು, ಬಲಿಪುರದಲ್ಲಿ (ಬಳ್ಳಿಗಾವೆ) ಅವರಿಬ್ಬರೂ ಜನಿಸುವರು. ಆಕೆ ಕಾಮಲತೆಯಾಗಿ ಹುಟ್ಟುವಳು. ಆತನು ಅಲ್ಲಮನಾಗಿ ಹುಟ್ಟುವನು. ಆ ಊರಿನ ಗೊಗ್ಗೇಶ್ವರಾಲಯಕ್ಕೆ ಹೋಗಿದ್ದಾಗ ಕಾಮಲತೆಯೂ ಅಲ್ಲಮನೂ ಪರಸ್ಪರ ಸಂಧಿಸಿ ಮೂರ್ಛೆ ಹೋಗುವರು. ಅನಂತರ ಅವರಿಬ್ಬರನ್ನೂ ಕಾಮಲತೆಯ ಮನೆಗೆ ಕೊಂಡೊಯ್ಯಲು ಮೂರ್ಛೆಯಿಂದೆದ್ದು "ಹರುಷದ ಶರಧಿಯೊಳ್ಕೂಡಿ" ಹಲವು ವರ್ಷಗಳವರೆಗೆ ಸುಖವಾಗಿರುವರು. ಬಳಿಕ ಕಾಮಲತೆ ಜ್ವರಗ್ರಸ್ತೆ ಳಾಗಿ ಸತ್ತುಹೋಗುವಳು. ಆಕೆಯ ವಿರಹದಿಂದ ನೊಂದು ಬೆಂದು ಕಡೆಗೆ ಅಲ್ಲಮನು ವೈರಾಗ್ಯವನ್ನು ಪಡೆಯುವನು.

ಕಾಮಲತೆಗೆ ಸಂಬಂಧಪಟ್ಟ ಮೇಲಿನ ಕಥಾ ಭಾಗವು ವೀರಶೈವರಲ್ಲಿ ಹಲವರಿಗೆ ರುಚಿಸಿರುವಂತೆ ತೋರುವುದಿಲ್ಲ. ಪ್ರಭುದೇವರ ಟೀಕಿನ ವಚನ ಗಳಲ್ಲಿ "ಪ್ರಭುದೇವರ ಪಿಂಡ ಸಂಭವವಾದ ಗದ್ಯ" ಎಂಬ ಭಾಗವು ಪಿಂಡ ಸ್ಥಲಕ್ಕೆ ಮೊದಲು ಬರುತ್ತದೆ.[50] ಈ ಗದ್ಯದಲ್ಲಿ ಕಾಮಲತೆಯ ವೃತ್ತಾಂತವು ಹರೀಶ್ವರನ ಪ್ರಭುದೇವರ ರಗಳೆಯ ಸರಣಿಯನ್ನೇ ಅನುಸರಿಸಿದೆ. ಆದರೆ ಈ ಗದ್ಯ ಭಾಗವು ಕೆಲವು ಓಲೆಯ ಪ್ರತಿಗಳಲ್ಲಿ ದೊರೆಯುವುದಿಲ್ಲ.

ಎರಡನೆಯದಾಗಿ ಅಲ್ಲಮಪ್ರಭುವಿನ ಚರಿತ್ರೆ "ಶೂನ್ಯ ಸಂಪಾದನೆ" ಎಂಬ ಗ್ರಂಥದಲ್ಲಿ ದೊರೆಯುತ್ತದೆ. ಈ ಶೂನ್ಯ ಸಂಪಾದನೆ ಎನ್ನುವುದು ನಮಗೆ ತಿಳಿದಮಟ್ಟಿಗೆ ಐದು ಸಂಕಲನ ಗ್ರಂಥಗಳಿರುವಂತೆ ತೋರುತ್ತದೆ. ಇವುಗಳಲ್ಲಿ ಮೊದಲನೆಯದು ಶಿವಗಣಪ್ರಸಾದಿ ಮಹದೇವಯ್ಯ

---

49. ಪರಿಶಿಷ್ಟ II ನೋಡಿ. ಪ್ರ. ದೇ. ರ. 50. ಪ್ರ. ದೇ. ವ. ಪುಟ ೨–೩.

ಬರೆದದ್ದು;[51] ಎರಡನೆಯದು ಕೆಂಚವೀರಣ್ಣೊಡೆಯ ಬರೆದದ್ದು;[52] ಮೂರನೆಯದು ಕೆಂಚವೀರಣ್ಣೊಡೆಯ, ಕಲ್ಲೇಶ್ವರದೇವ ಮುಂತಾದ ಶರಣರು ಸೇರಿ ಬರೆದದ್ದು;[53] ನಾಲ್ಕನೆಯದು ಗುಮ್ಮಳಾಪುರದ ಸಿದ್ಧಲಿಂಗ ಯತಿ ಬರೆದದ್ದು;[54] ಐದನೆಯದು ಗೂಳೂರು ಸಿದ್ಧವೀರಣಾರ್ಯ ಬರೆದದ್ದು;[55] ಇವುಗಳಲ್ಲಿ ಎರಡನೆಯ ಗ್ರಂಥ ನಮಗೆ ಉಪಲಬ್ಧವಾಗಿಲ್ಲ. ಮೊದಲನೆಯ ಮತ್ತು ಮೂರನೆಯ ಶೂನ್ಯ ಸಂಪಾದನೆಗಳಲ್ಲಿ ಕಾಮಲತಾ ವೃತ್ತಾಂತವು ಪ್ರಭುದೇವರ ರಗಳೆಯ ಕಥಾಸರಣಿಯನ್ನೇ ಅನುಸರಿಸಿ, ಅದಕ್ಕೂ ವಿಸ್ತಾರವಾಗಿ ವರ್ಣಿತವಾಗಿದೆ. ಆದರೆ ಮೂರನೆಯ ಮತ್ತು ಐದನೆಯ ಗ್ರಂಥಗಳಲ್ಲಿ ಈ ಕಾಮಲತಾ ವೃತ್ತಾಂತವನ್ನು ಬಿಟ್ಟಿರುವುದಲ್ಲದೆ,[56] ಬಸವ ಚೆನ್ನಬಸವ ಅಲ್ಲಮರ ಜನನ ವೃತ್ತಾಂತವನ್ನು ಹೇಳುವಾಗ "ಇಂತೀ ಗುರು ಲಿಂಗ ಜಂಗಮ ಮೂರು ಆ ನಿಷ್ಕಲ ಪರಶಿವಲಿಂಗ ತಾನೆ. ಆ ಪರಶಿವಲಿಂಗವು ಜಗದ್ಧಿತಾರ್ಥವಾಗಿ ಮೂರಾಗಿ ಅವತರಿಸಿದರೆ ಇದೇನು ಕಾರಣ ಮರ್ತ್ಯಕ್ಕೆ ಬಂದರೆಂದು ಸಂಕಲ್ಪಿಸಿ ಶಾಪದಿಂದ ಬಂದರೆಂದು ಆವನಾನೊಬ್ಬ ನುಡಿವುತಿದ್ದಾನು. ಅವನು ಇಪ್ಪತ್ತೆಂಟು ಕೋಟಿ ನರಕದಲ್ಲಿ ರವಿ ಶಶಿವುಳ್ಳನ್ನಬರ ನರಕವನನುಭವಿಸುತ್ತಿರ್ಪನು" ಎಂದು ಎಚ್ಚರಕೊಟ್ಟಿದ್ದಾರೆ.[57]

---

51. ಧಾರ್ವಾಡದ ಶ್ರೀಮಾನ್ ಬಿ. ಎಂ. ಪುರಾಣೀಕರಲ್ಲಿ ಒಂದು ಪ್ರತಿಯಿದೆ. 52. ಇದು ನಮ್ಮ ಕಣ್ಣಿಗೆ ಇನ್ನೂ ಬಿದ್ದಿಲ್ಲ. 53. ಇದು ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿದೆ, K. A. 105. 54. ಇದು ಮೈಸೂರು ವಿಶ್ವವಿದ್ಯಾನಿಲಯದಲ್ಲಿರುವ ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್, ಎಂ.ಎ. ಅವರಲ್ಲಿರುವುದು. ಮತ್ತು ಶಿವಯೋಗ ಮಂದಿರ ಬಾದಾಮಿ–ಇವರ ಪುಸ್ತಕಭಂಡಾರದಲ್ಲಿರುವುದು. 55. ರಾವ್ ಸಾಹೇಬ್ ಪಿ. ಜಿ. ಹಳಕಟ್ಟಿಯವರು ಮುದ್ರಿಸಿರುವರು. 56. ಮುಂದೆ ಹೇಳಿರುವ ಮುಖ್ಯವಾದ ವಚನವನ್ನೂ ಬಿಟ್ಟಿದ್ದಾರೆ; "ಅವಳ ನೋಟವೆಸ್ಸ ಮರ್ತ್ಯಕ್ಕೆ ತಂದುದಯ್ಯಾ, ಅವಳ ಕೂಟದ ಸವಿಯ ವಗಡಿಸಿ ಕಾಡಿತ್ತಯ್ಯಾ, ಅವಳ ಬೇಟದ ಬೆರಹುರದಲ್ಲಿ ತ್ರಿಪುರ ಹಾಳಾದುದ ಕಂಡೆನು. ಉರಿಯ ಮೇಲೆ ಉರಿಯೆರಗಿದಡೆ ತಂಪು ಮಾಡಿತ್ತ ಕಂಡೆನು. ಕರಿಯ ಬೇಡನ ಕಸ್ತೂರಿಯ ಮೃಗ ನುಂಗಿದರೆ ಹಿರಿಯ ಹೆಂಡತಿ ಪೋಲೆಗಳೆದುದ ಕಂಡೆನು. ಕಾರಿರುಳ ಕೋಟೆಯ ಕರಿಯ ಕಾಳಗವ ಗೆಲಿದು ಹೂಳಿರ್ದ ನಿಧಾನವ ಕಂಡೆನು ಕಾಣಾ ಗುಹೇಶ್ವರಾ." 57 ಶೂ. ಸಂ. (ಮು.) ಪುಟ ೨, ಡಿ. ಎಲ್. ನ. ರವರ ಪ್ರತಿ, ಹಾಳೆ ೨.

ಮೂರನೆಯದಾಗಿ ಪ್ರೌಢರಾಯನ ಕಾವ್ಯದಲ್ಲಿ ಪ್ರಭುಲಿಂಗ ಲೀಲೆಯ ರಚನೆಗೆ ಕಾರಣವನ್ನು ವಿವರಿಸಿದೆಯಷ್ಟೆ.[58] ಮುಕುಂದ ಪೆದ್ದಿ ಮುಂತಾದವರು ಭಾರತವನ್ನು ಮೆರೆವಣಿಗೆ ಮಾಡಿಸಿದ ಮೇಲೆ ಜಕ್ಕಣಾರ್ಯ ಮುಂತಾದವರು "ನೂರೊಂದುಸ್ಥಲ" (ಏಕೋತ್ತರಸ್ಥಲ) ಎಂಬ ಗ್ರಂಥಕ್ಕೆ ಮೆರೆವಣಿಗೆ ಮಾಡಿಸಿದರು. ಮಾರನೆಯ ದಿನ ಮುಕುಂದ ಪೆದ್ದಿ ಜಕ್ಕಣಾರ್ಯನನ್ನು ಕುರಿತು ನಿನ್ನೆಯ ರಾತ್ರಿ ಆದ ಮೆರೆವಣಿಗೆ "ಸತ್ತವರ ಪೊಸಗೆಯೋ ಹೆತ್ತ ಸೌರಂಭವೊ" ಎಂದು ಹಾಸ್ಯಮಾಡಿದನು. ಅದಕ್ಕೆ ಜಕ್ಕಣಾರ್ಯನು—ನಿಮ್ಮ ಭಾರತದ ಕಥೆ ಸತ್ತವರ ಕಥೆ, ನಮ್ಮ ಶರಣರ ಉತ್ಸವದಲ್ಲಿ "ಮುಕ್ತಿಯೆಂಬುವ ಶಿಶುವನ್ನು ಭಕ್ತ್ಯಂಗನೆಯು ಪೆತ್ತಳು" ಎಂದು ಉತ್ತರಕೊಟ್ಟನು. ಬಳಿಕ ಮುಕುಂದ ಪೆದ್ದಿ ಶರಣರ ವಚನಗಳ ವಿಚಾರದಲ್ಲಿ ಕುಚೋದ್ಯಮಾಡಿ ಆಸ್ಥಾನದಲ್ಲಿದ್ದ ಮಾಳದೇವಿ ಸೀತಾದೇವಿ ಎಂಬ ಮೇಳದ ಹೆಣ್ಣುಗಳಿಂದ ವಚನವನ್ನು ಹೇಳಿಸಿ ಅವರು ಹೇಳಿದ [59] "ಕೋಣನ ಕೊಂಬಿನ ಮೇಲೆ ಏಳುನೂರು ಬಗರಿಗೆ......" ಎಂಬ ಪ್ರಭುವಿನ ವಚನಕ್ಕೆ ತಾನು ವ್ಯಾಖ್ಯಾನ ಮಾಡುತ್ತ "ಬನವಸಿಯ ಪುರವ ನಾಳ್ವ ಮಮಕಾರರಾಯನೋಲಗದಿ ಮದ್ದಳೆಯ ಅಲ್ಲಮನೆಂಬವಂ ಕಾಮಲತೆಯೆಂಬ ನೃತ್ಯದಾ ರಮಣಿಗವ ನೋಲಿರಲ್ಕವಳಳಿಯೆ ಭ್ರಾಂತಿಯಲಿ ಪೇಳ್ದೊಗಟು ಪದ್ಯ" ಎಂದು ಹೇಳಿದನು. ಜಕ್ಕಣಾರ್ಯನು ಶಿವ ಶಿವಾ! ಎಂದು ಕಿವಿಗಳನ್ನು ಮುಚ್ಚಿಕೊಂಡನು. ಕಿವಿಗಳನ್ನೇಕೆ ಮುಚ್ಚಿಕೊಂಡೆ ಎಂದು ಪ್ರೌಢದೇವರಾಯನು ಕೇಳಲು—ನಿರ್ಮಾಯನಿಗೆ ಮಾಯಾ ಮೋಹಗಳೆಂಬ ಅಬದ್ಧವನ್ನು ಕೇಳಬೇಕಾಯಿತಲ್ಲಾ ಎಂದು ಮುಚ್ಚಿದೆನು—ಎಂದು ಉತ್ತರಕೊಟ್ಟನು. ಆಮೇಲೆ ಆ ವಚನಕ್ಕೆ ಜಕ್ಕಣಾರ್ಯನು ಹದಿನೆಂಟು ಮತದವರು ತಲೆದೂಗುವಂತೆ ವ್ಯಾಖ್ಯಾನ ಮಾಡಿದನು.

---

58. ಪ್ರೌ. ಕಾ. ಸಂಧಿ ೧, ಪದ್ಯಗಳು ೩೯–೫೧. 59. "ಕೋಣನ ಕೋಡಿನ ತುದಿಯಲ್ಲಿ ಏಳುನೂರೆಪ್ಪತ್ತು ಸೇದಿಯ ಬಾವಿ, ಬಾವಿಯೊಳಗೊಂದು ಬಗರಿಗೆ, ಬಗರಿಗೆ ಯೊಳಗೊಬ್ಬ ಸೂಳೆ ನೋಡಯ್ಯ. ಆ ಸೂಳೆಯ ಕೊರಳಲ್ಲಿ ಏಳುನೂರೆಪ್ಪತ್ತಾನೆನೇರಿತ್ತ ಕಂಡೆ ಗುಹೇಶ್ವರಾ" ಎಂದು ಸಂಪೂರ್ಣ ವಚನ. ಇದಕ್ಕೆ ಸರಿಯಾದ ಟೀಕೆ ಪ್ರ. ದೇ. ವ. ಪುಟ 29ರಲ್ಲಿದೆ.

ಈ ವಚನದ ಅರ್ಥ ಹೇಗಾದರೂ ಇರಲಿ, ಕಾಮಲತೆಯ ವೃತ್ತಾಂತವನ್ನು ತಿರಸ್ಕರಿಸುವ ಪ್ರಯತ್ನವನ್ನು ಇಲ್ಲಿ ಕಾಣಬಹುದಾಗಿದೆ.

ನಾಲ್ಕನೆಯದಾಗಿ "[60]ಭೈರವೇಶ್ವರ ಕಾವ್ಯ ಕಥಾಸೂತ್ರ ರತ್ನಾಕರ ದಲ್ಲಿ ಮೇಲಿನ ವಿಚಾರವನ್ನೇ ಲಂಬಿಸಿ ಇನ್ನೂ ಹೆಚ್ಚು ವಿಷಯಗಳನ್ನು ಶಾಂತಲಿಂಗ ದೇಶಿಕನು ತಿಳಿಸಿದ್ದಾನೆ. ಮುಕುಂದ ಪೆದ್ದಿ ವಚನಕ್ಕೆ ವ್ಯಾಖ್ಯಾನ ಮಾಡಿದಮೇಲೆ ಜಕ್ಕಣಾರ್ಯನು ಕಿವಿಗಳನ್ನು ಮುಚ್ಚಿಕೊಂಡ ನಷ್ಟೆ. ಆಗ ಮುಕುಂದ ಪೆದ್ದಿ ತಾನು ಕಲ್ಪಿಸಿ ಏನನ್ನೂ ಹೇಳಲಿಲ್ಲವೆಂಬ ಅಭಿಪ್ರಾಯಕ್ಕೆ "ನಾನೆಂದಡೆ ದ್ರೋಹವೆಂದಿರಿ. ನಿಮ್ಮ ಹಂಪೆಯ ಹರಿಯಣ್ಣ ಪಂಡಿತರ ರಗಳೆಯ ಪದ್ಯದಲ್ಲಿ ಉಂಟಾಗಿದೆ" ಎಂದು ಉತ್ತರ ಕೊಟ್ಟನು. ಆಗ ಜಕ್ಕಣಾರ್ಯನು "ಶಿಲೆಯ ಕಂಥೆಯ ತೊಟ್ಟ ರುದ್ರಾದಿ ಗಳಿಗೆಯೂ, ಶೈವಮತದ ಕವಿಗಳಿಗೆಯೂ, [61]ಹರಿಯಜೇಂದ್ರಾದಿ ಮನು ಮುನಿಗಳಿಗೆಯೂ ವೀರಶೈವ ಪ್ರಮಥರ ಮಹತ್ವ ತಿಳಿಯದು" ಎಂದು ಹೇಳಿದನು. ಆ ಮಾತಿಗೆ ವೃಂದಾಚಾರ್ಯನು, "ನಮ್ಮ ಭಾರತವಂ ಸತ್ತವರ ಕಥೆಯೆಂದಿರಿ, ಹಂಪೆಯ ಹರೀಶ್ವರನ ಪದ್ಯವು ಅಬದ್ಧವೆಂದಿರಿ, ಸತ್ತವರಲ್ಲದೆ ನಿತ್ಯರಾದವರ ಕಥೆಯನು ವೀರಶೈವರು ಮಾಡಿದ ನಿಮ್ಮ ಗಣಂಗಳ ಕಥೆಯನು ತಂದರೆ" ದೊರೆ ಕೊಡುವ ಪಾರಿತೋಷಕವನ್ನು ಪಡೆಯಬಹುದು ಎಂದು ಉತ್ತರ ಹೇಳಿದನು. ಮೇಲೆ ವಿವರಿಸಿರುವ ಗ್ರಂಥಾಧಾರಗಳಿಂದ ವೀರಶೈವ ಕವಿಗಳಿಗೆ ಕಾಮಲತೆಯ ವೃತ್ತಾಂತವು ತಿಳಿದಿತ್ತೆನ್ನುವುದೂ, ಆ ವೃತ್ತಾಂತ ವನ್ನು ತಿರಸ್ಕರಿಸುವ ಪ್ರಯತ್ನಗಳು ನಡೆದಿವೆಯೆನ್ನುವುದೂ, ಈ ಪ್ರಯತ್ನ ಗಳಲ್ಲಿ ಚಾಮರಸನ ಪ್ರಭುಲಿಂಗಲೀಲೆ ಮುಖ್ಯ ಭಾಗವನ್ನು ವಹಿಸಿದೆ ಯೆನ್ನುವುದೂ ಸ್ಪಷ್ಟವಾಗುತ್ತವೆ.

---

60. ಮ್ಯೆ. ಓ. ಲೈ. B. 101, ಸಂಪುಟ ೧, ಪುಟಗಳು ೭೯–೮೦. 61. ಹರೀಶ್ವರನು (ಹರಿಹರ ಕವಿ) ಮೊದಲು ಶೈವನಾಗಿದ್ದು ಆಮೇಲೆ ವೀರಶೈವವನ್ನು ಅವಲಂಬಿಸಿರಬಹು ದೆಂದು ಕೆಲವು ಪ್ರಮಾಣಗಳಿಂದ ಸಿದ್ಧವಾಗುತ್ತದೆ. ವೀ. ಮ. ಪು. ಕಾಂಡ ೮, ಸಂಧಿ ೮, ಪದ್ಯ ೩೪ರಲ್ಲಿ ಇದಕ್ಕೆ ಸೂಚನೆಯಿರುವಂತೆಯೂ ತೋರುತ್ತದೆ. (ಈ ಪದ್ಯದಲ್ಲಿ "ಕ್ಷೀಣ ಹಂಪೆಯ" ಎಂದು ಹೇಳಿರುವುದರಿಂದ ಕೆಲವು ಸಮಸ್ಯೆಗಳು ಎದುರಿಗೆ ನಿಲ್ಲುವಂತೆ ಕಾಣುವುದು.) "ಕ್ಷೀಣ ಹಂಪೆಯ ಹರೀಶನೆ ಶೈವವುಳಿದು ಕ। ಟ್ಯಾಣಿ ವರ ವೀರಶೈವವ ನುದ್ಧರಿಸಿದ. . . ."

ಚಾಮರಸನ ಸಮಕಾಲಿಕನಾದ ಲಕ್ಕಣ್ಣ ದಂಡೇಶನು ಕೂಡ ನಿರ್ಮಾಯನು ಮಾಯಾಧೀನನಾಗಲಿಲ್ಲವೆಂಬ ಪಂಥವನ್ನೇ ಸಾಧಿಸಲು ಪ್ರಯತ್ನಪಟ್ಟಿದ್ದಾನೆ. [62]ಶಿವತತ್ವ ಚಿಂತಾಮಣಿಯಲ್ಲಿ ನಿರ್ಮಾಯನ ಕಥಾ ಭಾಗವು ಹೀಗಿದೆ:—ಕೈಲಾಸದಲ್ಲಿ ಈಶ್ವರನು ನಂದೀಶ್ವರನನ್ನು ಕುರಿತು "ನಿನಗೆ ಆನು ಸರಿಯೆ ಪರಮ ಸ್ವತಂತ್ರ" ಎಂದು ಮುಂತಾಗಿ ಹೊಗಳಲು, ನಿರ್ಮಾಯನು ಆಕ್ಷೇಪಿಸುತ್ತ "ನಿನಗಧಿಕರಿಲ್ಲೆಂಬ ಬಿರುದೆಂದು ಪೋದುದು" ಎಂದು ಈಶ್ವರನನ್ನು ಕೇಳಿದನು. ಆಗ ಪಾರ್ವತಿ ಬಾಯಿ ಹಾಕಿ ತನ್ನ ಪತಿ ಹೇಳಿದುದು ಸರಿಯೆಂಬುದನ್ನು ತೋರಿಸುವುದಕ್ಕಾಗಿ "ಅನುಪಮಾತರ್ಕ್ಯ ಮಹಿಮಂಗೆ ತಾನಾಧಾರವೆನಿಪ ವೃಷಭನ ಮಹತ್ವಕ್ಕೆ ಸರಿದೊರೆಯೆ" ಎಂದು ಪೋಟಿಮಾಡಿದಳು. ಬಳಿಕ "ನಿನಗೆ ನಿರ್ಮಾಯನೆಂದೆಂಬ ಬಿರುದೇಕೆ, ಬಲ್ಲಿದತನದ ಮಾತನಾಡಬೇಡ, ಸಲ್ಲದ ಬಿರುದ ತೊಡರಿಕೊಂಡರಿಯದವರೊಡನೆ ನುಡಿವ ಮಾತಿಲ್ಲಿ ಬೇಡ, ಎಲ್ಲರ ಗುಣಂಗಳಂ ಬಲ್ಲೆ, ತೋಱಿಂದರಿಲ್ಲಿಯೆ ತೋಱೆ ಮಾಯೆಯ ಕಾಲ ತೊಡರೆನಿಸದಿರೆನು" ಎಂದು ಪಾರ್ವತಿ "ಘುಲ್ಲಿಸಲು", ನಿರ್ಮಾಯನು "ತರಣಿ ತೇಜಂಗೆಟ್ಟಡಂ ಚಂದ್ರನತ್ಯುಷ್ಣಕರನಾದಡಂ" ಎಂದು ಮುಂತಾಗಿ ಶಪಥಮಾಡಿ "ಎನ್ನ ಮನವು ತಿರುಗದೆಂದು ಮಾಯೆಗೊಳಗಾಗಿ, ಎನ್ನ ಸುಸ್ಥಿರತರ ಮನೋಲಯ ಸಮಾಧಿ ನಿಷ್ಠೆಯೊಳು ನಿಂದಿರುತಿಪ್ಪುದು" ಎಂದು ಹೇಳಿದನು. ಆಗ ಪಾರ್ವತಿ ಮಾಯಾಸ್ವರೂಪವನ್ನು ನೆನೆದು ಆ ಕ್ಷಣದಲ್ಲಿ ಮುಂದೆ ನಿಲ್ಲಲು ಈಶ್ವರನ ಸಭೆಯಲ್ಲಿ ಮೋಹನದ ಜೊಮ್ಮು ಮುಸುಕಿತು. ಆಗ ನಿರ್ಮಾಯನು "ಈಶತ್ವವನೆಯ್ದಿ ನೋಡುತಿರೆ....ಪರಶಿವಂ ನಿರ್ಮಾಯನಿಂಗಿತಕೆ ಸನುನಗುತ ಕರದ ಮಾಯಾವಿಲಾಸದ ನೋಟ ನಿನಗಾಯ್ತು ಧರೆಯೊಳವತರಿಸಿ ಮಾಯೆಯ ಗೆಲಿದು ಭಕ್ತರಿಗೆ ತತ್ವೋಪದೇಶವಿತ್ತು" ವೀರಶೈವವನ್ನು ಉದ್ಧರಿಸಿ ಬಾ, ಸುಜ್ಞಾನಿ ನಿರಹಂಕಾರರು ತಪಸ್ಸು ಮಾಡುತ್ತ ನಿನ್ನನ್ನು ನಿರೀಕ್ಷಿಸುತ್ತಿದ್ದಾರೆ—ಎಂದು ಹೇಳಿದನು.

ಪಾರ್ವತಿಗೂ ನಿರ್ಮಾಯನಿಗೂ ಆಗುವ ವಾಗ್ವಾದ, ಅವರಿಬ್ಬರಿಗೂ ಒಂದು ರೀತಿಯಲ್ಲಿ ನಡೆಯುವ ಪಂಥ, ಆಮೇಲೆ ನಿರ್ಮಾಯನು ಅಲ್ಲಮ

---

62. ಶಿ. ಚಿಂ. ಸಂಧಿ ೨೯, ಪದ್ಯಗಳು ೩೪—೪೧.

ನಾಗಿ ಭೂಮಿಯಲ್ಲಿ ಅವತರಿಸುವುದು—ಇವುಗಳೆಲ್ಲಕ್ಕೂ ಭೃಂಗೀಶ್ವರನ ಪರವಾದ ಕಥೆಗಳು ಸಹಾಯಮಾಡಿದಂತೆ ತೋರುತ್ತದೆ. ಕಡೆಗೆ ಭೃಂಗಿಯ ಕಥೆ ನಿರ್ಮಾಯನ ಕಥೆಯಲ್ಲಿ ಸೇರಿಹೋಗಿ, ಕಾಮಲತೆಯ ವೃತ್ತಾಂತವನ್ನು ಅಬದ್ಧವೆನ್ನುವುದಕ್ಕೆ ಸಾಮಗ್ರಿಯನ್ನು ಒದಗಿಸಿರಬಹುದು.

ಶಿವತತ್ವ ಚಿಂತಾಮಣಿಯಲ್ಲಿ ಗುಡ್ಡವ್ವೆಯ ಚರಿತ್ರೆ[63] ಹೇಳಿದೆ. ಕೈಲಾಸದಲ್ಲಿ ಭೃಂಗೀಶ್ವರನು ಶಿವನ ವಾಮಭಾಗವನ್ನು ಬಿಟ್ಟು "ಬಲವರಲು", "ಗಿರಿಜೆ ಮುಳಿದೆದ್ದೆಲೆಲೆ ಭೃಂಗಿ ಪರಿಹಾಸವೆಯೆನ್ನೊಡನೆ, ನೀನಮ್ಮ ಹಂಗಿಗನಲ್ಲೈ" ಎಂದಳು. ಆಗ ಭೃಂಗಿ ತಾನು ಪ್ರಕೃತಿಬದ್ಧನಲ್ಲವೆಂದು ತೋರಿಸುವುದಕ್ಕೆ—"ರಸ ರುಧಿರ ಮಾಂಸಗಳೆಂಬ ಕೊಗ್ಗಿಸರಿನಲ್ಲಿ ಸಿಕ್ಕಿಬಿದ್ದು ಕಾಮಾಧೀನನಾಗಿರುವ, ಮಾಯೆಯ ಕಾಲ ತೊಡರಪ್ಪ ಜೀವನೆಂದು ತಿಳಿದೆಯಾ? ನಿನ್ನ ಅಂಶವನ್ನು ತೆಗೆದುಕೋ" ಎಂದು ಹೇಳಿ ಅವುಗಳನ್ನು ಬಿಸುಟು ಕೇವಲ ಜ್ಯೋತಿಯಾಗಿ ನಿಂತನು. ಬಳಿಕ ಈಶ್ವರನು ಭೃಂಗಿಯನ್ನು ವಹಿಸಿಕೊಂಡು ಮಾತನಾಡಿ ಪಾರ್ವತಿಯನ್ನು ಭೂಮಿಯಲ್ಲಿ ಅವತರಿಸು ಎಂದು ಹೇಳಿದನು. ಆಕೆ ಗುಡ್ಡವ್ವೆಯಾಗಿ ಅವತರಿಸಿದಳು.

ಈ ಭೃಂಗೀಶನ ಕಥೆ ಸ್ವಲ್ಪ ಮಾರ್ಪಟ್ಟು ಇನ್ನೊಂದು ರೀತಿಯೂ ಇದೆ. ಒಂದು ದಿನ ಭೃಂಗೀಶನು ಸಭೆಗೆ ಬಂದು ಒಂದೇ ಕೈಯನ್ನೆತ್ತಿ ನಮಸ್ಕಾರ ಮಾಡಿದನು.[64] ಆಗ ಪಾರ್ವತಿ ಕುಪಿತಳಾಗಿ—ಎರಡು ಕೈಗಳನ್ನು ಜೋಡಿಸಿ ಏಕೆ ನಮಸ್ಕಾರಮಾಡಲಿಲ್ಲ?—ಎಂದು ಕೇಳಿದಳು. ಪರಮೇಶ್ವರನ ಎಡಭಾಗವು ಪ್ರಕೃತಿರೂಪಾದ ಪರಮೇಶ್ವರಿಯಾಗಿರುವುದರಿಂದ ಅದು ವಂದನಾರ್ಹವಲ್ಲವೆಂದೂ, ಅದಕ್ಕಾಗಿ ಆ ಭಾಗಕ್ಕೆ ನಮಸ್ಕಾರ ಮಾಡುವುದಿಲ್ಲವೆಂದೂ ಭೃಂಗಿ ಉತ್ತರಕೊಟ್ಟನು. ಆಕೆ—

---

63. ಶಿ. ಚಿಂ. ಸಂಧಿ ೩೫, ಪದ್ಯಗಳು ೧—೩ (ಈ ವರದಾನಿ ಗುಡ್ಡವ್ವೆಯ ಚರಿತ್ರೆಯನ್ನು ಪ್ರತ್ಯೇಕವಾಗಿ "ಶಿವಾನುಭವ"ದಲ್ಲಿ ಮುದ್ರಿಸಿದ್ದಾರೆ). 64. ಭೃಂಗೀಶನ ಪರವಾಗಿ ಕೆಲವು ವೀರಶೈವ ಗ್ರಂಥಗಳಲ್ಲಿ ಬರುವ ಸ್ತೋತ್ರ ಪದ್ಯಗಳಲ್ಲಿಯೂ, ಪಾ. ಸೋ. ಪು. ಸಂಧಿ ೪, ಪದ್ಯ ೧೨೨; ಸಂಧಿ ೯, ಪದ್ಯ ೧೩೫; ಕೈವಲ್ಯ ಪದ್ಧತಿ, ನೀತಿಕ್ರಿಯಾಚರ್ಯಸ್ಥಳ ೧೧ನೆಯ ಹಾಡು ಇವುಗಳಲ್ಲಿಯೂ ದೊರೆಯುತ್ತದೆ.

ಹರಿಹರ ಬ್ರಹ್ಮಾದಿಗಳೂ ಪ್ರಕೃತಿಯ ಅಧೀನರಲ್ಲವೆ? ಸಾಕ್ಷಾತ್ ಪರಮೇಶ್ವರನ ಅರ್ಧ ಭಾಗವೇ ತಾನಾಗಿರುವಾಗ ತನಗೆ ಶ್ರೇಷ್ಠತೆಯಿಲ್ಲವೆ? ಪಂಚಭೂತಮಯವಾದ ದೇಹವಿಲ್ಲದಿದ್ದರೆ ನಿಲ್ಲುವುದು ತಾನೇ ಹೇಗೆ? ಎಂದು ತನ್ನ ಹೆಚ್ಚಳಿಕೆಯನ್ನು ಆಡಿದಳು. ಆಗ ಭೃಂಗಿ ಮಜ್ಜೆಮಾಂಸ ಯುತವಾದ ದೇಹವನ್ನು ತತ್‍ಕ್ಷಣ ಬಿಸುಡಲು ಈಶ್ವರನು ಅವನು ನಿಲ್ಲುವುದಕ್ಕೆ ಮೂರನೆಯ ಕಾಲನ್ನು ಕೊಟ್ಟನು.

[65]ಕರ್ನಲ್ ಮೆಕೆನ್ಸಿಯವರು ಭೈರವಾಂಕನ ಕಥಾಗರ್ಭಸೂತ್ರ ರತ್ನಾಕರದಿಂದ ಸಂಗ್ರಹಿಸಿದುದೆಂದು ಹೇಳುವ ಪ್ರಭುಲಿಂಗಲೀಲೆಯ ಕಥಾ ಸಾರಾಂಶದಲ್ಲಿ ಮೊದಲು ಹಾಗೆ ನಮಸ್ಕಾರ ಮಾಡಿದವನು ಚಂಡೇಶನೆಂದು ಹೇಳಿದೆ. ಕಡೆಗೆ ಆ ಚಂಡೇಶನು ಭೃಂಗಿಯೆಂಬ ನಾಮಾಂತರವನ್ನು ಪಡೆದಿದ್ದಾನೆ. ಪಾರ್ವತಿ—ಈ ಭೃಂಗಿಯನ್ನು ಭೂಲೋಕಕ್ಕೆ ಕಳುಹಿಸು. ಇವನ ಸಾಮರ್ಥ್ಯವನ್ನು ಪರೀಕ್ಷಿಸುತ್ತೇನೆ—ಎಂದು ಈಶ್ವರನಿಗೆ ಹೇಳಿದಳು. ಅದರಂತೆ ಭೃಂಗಿ ಅಲ್ಲಮಪ್ರಭುವಾಗಿ ಭೂಮಿಯಲ್ಲಿ ಹುಟ್ಟಿದನು.

ಮೇಲೆ ಹೇಳಿರುವ ಈ ಕಥೆಗಳನ್ನೆಲ್ಲ ವಿಮರ್ಶಿಸಿದರೆ ಅಲ್ಲಮ ಪ್ರಭುವಿನ ಚರಿತ್ರೆಯನ್ನು ಲಕ್ಕಣ್ಣ ದಂಡೇಶ, ಚಾಮರಸ, ಅದೃಶ್ಯಕವಿ ಮುಂತಾದವರು ಒಂದು ರೀತಿ ತಿದ್ದುವುದಕ್ಕೆ ಪ್ರಯತ್ನಪಟ್ಟಹಾಗೆ ತೋರುತ್ತದೆ. ಇನ್ನು ಕೆಲವರು ಅಲ್ಲಮಪ್ರಭು ಪ್ರಾರಂಭದಲ್ಲಿ ಕಾಮ ವಶನಾಗಿದ್ದರೂ ವೈರಾಗ್ಯಪರನಾದ ಮೇಲೆ ಆತನ ಜೀವನದ ಮಹತ್ವವು ಅನುಪಮವಾಗಿರುವುದೆಂದೂ, ಕಾಮಲತೆಯ ವೃತ್ತಾಂತದಿಂದ ಪ್ರಭುವಿನ ಉನ್ನತ ಸ್ಥಾನಕ್ಕೆ ಕುಂದಕ ಬರುವುದಿಲ್ಲವೆಂದೂ ಗ್ರಹಿಸಿ ಹರೀಶ್ವರನ ಪ್ರಭುದೇವರ ರಗಳೆಯ ಕಥಾಸರಣಿಯನ್ನು ಅನುಮೋದಿಸಿರುವ ಹಾಗೆ ತೋರುತ್ತದೆ.

---

65. ಮ. ಓ. ಲೈ. (vi. b. 3), ಪುಟಗಳು ೩೧೬—೩೧೭. ಶ್ರೀಮಾನ್ ಬಿಳಿಯಂಗಡಿಯವರು ಗ. ಪ್ರ. ಲೀ. ಪೀಠಿಕೆಯಲ್ಲಿ ಹೇಳಿರುವುದಕ್ಕೂ ಇಲ್ಲಿ ಹೇಳಿರು ವುದಕ್ಕೂ ಅಲ್ಪ ಸ್ವಲ್ಪ ವ್ಯತ್ಯಾಸಗಳಿವೆ. (ಆದರೆ ನಾವು ನೋಡಿದ ಭೈರವೇಶ್ವರ ಕಾವ್ಯ ಕಥಾ ಸೂತ್ರ ರತ್ನಾಕರದಲ್ಲಿ, ಮೈ. ಓ. ಲೈ. B. 101—ಈ ಕಥೆ ಇಲ್ಲ. ಇನ್ನು ಬೇರೆ ಯಾವ ಗ್ರಂಥದಲ್ಲಿದೆಯೋ ತಿಳಿದಿಲ್ಲ.)

**VII. ಚಾಮರಸನ ಕವಿತೆಯ ವಿಮರ್ಶೆ.**—ವೀರಶೈವ ಕವಿಗಳಲ್ಲಿ ಚಾಮರಸನು ಉನ್ನತ ಸ್ಥಾನವನ್ನು ಪಡೆದಿರುವನೆಂದು ಧಾರಾಳವಾಗಿ ಹೇಳಬಹುದು. ಪ್ರಭುಲಿಂಗಲೀಲೆಯನ್ನು ಬರೆದಿರುವ ರೀತಿ ಅಪೂರ್ವವಾಗಿಯೂ ಅನುಪಮವಾಗಿಯೂ ಇರುವುದೇ ಈ ಉನ್ನತ ಸ್ಥಾನ ದೊರೆಯುವುದಕ್ಕೆ ಮುಖ್ಯ ಕಾರಣವಾಗಿದೆ.

(i) ಕಥಾಗರ್ಭ–ಕಥೆಯ ಬೆಳೆವಣಿಗೆ; (ii) ಪಾತ್ರಗಳ ಗುಣಗ್ರಹಣ–ನಿರೂಪಣೆ; (iii) ಸನ್ನಿವೇಶಗಳು; (iv) ವರ್ಣನೆಗಳು ಮತ್ತು ಶೈಲಿ; ಎಂಬುದಾಗಿ ವಿಂಗಡಿಸಿಕೊಂಡು ಪ್ರಭುಲಿಂಗಲೀಲೆಯನ್ನು ನಾವು ವಿಮರ್ಶಿಸಬಹುದು.

(i) ಕಥಾಗರ್ಭ–ಕಥೆಯ ಬೆಳೆವಣಿಗೆ.—ಪ್ರಭುಲಿಂಗಲೀಲೆಯಲ್ಲಿ ಮಹಾಕಾವ್ಯಕ್ಕೆ ಅಂಗಗಳೆನಿಸುವ ಜಲಕ್ರೀಡೆ ಚಂದ್ರಿಕಾ ವಿಹಾರಾದಿಗಳ, ವಸಂತಾದಿ ಷಡೃತುಗಳ, ಅಸಂಬದ್ಧ ವರ್ಣನೆಗಳಾವುವೂ ಇಲ್ಲ.[66] ಮಹಾತ್ಮರ ಜೀವನ ಚರಿತ್ರೆಯನ್ನು ಕಾವ್ಯರೂಪದಲ್ಲಿ ಹೇಗೆ ಬರೆಯಬೇಕೆಂಬುದಕ್ಕೆ ಪ್ರಭುಲಿಂಗಲೀಲೆ ಉತ್ತಮ ನಿದರ್ಶನವಾಗಿದೆ. ಎರಡನೆಯದಾಗಿ ಪ್ರಭುಲಿಂಗಲೀಲೆ ವೀರಶೈವ ಪುರಾಣವಾಗಿ ಪರಿಗಣಿತವಾದರೂ ಸಾಮಾನ್ಯವಾಗಿ ಬಸವ ಚೆನ್ನಬಸವ ಪುರಾಣಾದಿಗಳಲ್ಲಿ ಬರುವಂತೆ ಪುರಾತನರ ಮತ್ತು ಇತರ ಶಿವಶರಣರ ಉಪಕಥೆಗಳನ್ನು ಹೇರಿ ಮೂಲಕಥೆಗಳನ್ನು ಮುಳುಗಿಸಿಲ್ಲ.[67] ಈ ಗ್ರಂಥದಲ್ಲಿ ಅಂತಹ ಉಪಕಥೆಗಳು ಇಲ್ಲವೆಂದೇ ಹೇಳಬೇಕು. ಅಲ್ಲಮನಿಗೆ ಯಾವ ಸಾಧಕರ ಸಾಕ್ಷಾತ್ಸಂಬಂಧವುಂಟಾಯಿತೋ ಅವರಲ್ಲಿ ಕೆಲವರ ಚರಿತ್ರೆಗಳು ಮಾತ್ರ ಬಹಳ ಸಂಕ್ಷೇಪವಾಗಿ ವರ್ಣಿತವಾಗಿವೆ. ಮೂರನೆಯದಾಗಿ ಪಾದೋದಕ ಪ್ರಸಾದ ರುದ್ರಾಕ್ಷ ಮುಂತಾದ ಅಷ್ಟಾವರಣಗಳ ಮಹತ್ವ ನಿರೂಪಣವು ಶಿವಶರಣರ ಚರಿತ್ರೆಗಳಲ್ಲಿ ಸಾಮಾನ್ಯವಾಗಿ ಬರುವುದುಂಟು. ಪ್ರಭುಲಿಂಗಲೀಲೆಯಲ್ಲಿ ಇಂತಹ ಪ್ರಸಂಗಗಳು ಯಾವವೂ

---

66. ಪ್ರ. ಪು. ದಲ್ಲಿ ಅಲ್ಲಮಪ್ರಭುವಿನ ವನ ಜಲಕೇಳೀ ವರ್ಣನೆಗಳೂ, ಚಂದ್ರಿಕಾ ವಿಹಾರ ವರ್ಣನೆಯೂ 4ನೆಯ ಸಂಧಿ ಪದ್ಯಗಳು 106-149 ರಲ್ಲಿವೆ. 67. ಪ್ರ. ಪು. ದಲ್ಲಿ ಅನೇಕ ಉಪಕಥೆಗಳು ಬರುತ್ತವೆ. ಕೆಲವು ಉದಾಹರಣೆಗಳನ್ನು ಅಲ್ಲಲ್ಲಿ ಅಡಿಟಿಪ್ಪಣಿಯಲ್ಲಿ ಕಾಣಿಸಿದೆ. [ಲೀಲೆಗೂ ಪುರಾಣಕ್ಕೂ ಲಕ್ಷಣ ವ್ಯತ್ಯಾಸಗಳುಂಟು.]

ಇಲ್ಲ. ಇಷ್ಟಲಿಂಗದ ವಿಚಾರವನ್ನೂ ಪ್ರಾಣಲಿಂಗದ ವಿಚಾರವನ್ನೂ ಅಲ್ಲಮನು ತಿಳಿಸುವುದಾದರೂ, ಸಂಸ್ಕೃತ ಶ್ಲೋಕಗಳ ವಾಕ್ಯಾರ್ಥಗಳ ಜಟಿಲ ಮಾರ್ಗವನ್ನು ಬಿಟ್ಟು ಸಂಭಾಷಣಾರೂಪದ ಸರಳ ಮಾರ್ಗದಲ್ಲಿ ಸರಸವಾಗಿ ತಿಳಿಸಿದ್ದಾನೆ. ಕವಿಗೆ ತನ್ನ ಕಥಾನಾಯಕನಾದ ಅಲ್ಲಮನ ಮಹತ್ವದ ಮೇಲೆ ದೃಷ್ಟಿಯಿರುವುದೇ ಈ ಬಾಹ್ಯ ವಿಷಯಗಳನ್ನು ತಳ್ಳಿ ಉಪಯುಕ್ತ ವಿಷಯಗಳಲ್ಲಿ ಮಾತ್ರ ಪ್ರಸ್ತಾಪಿಸುವುದಕ್ಕೆ ಮುಖ್ಯಕಾರಣ.

(ii) ಪಾತ್ರಗಳ ಗುಣಗ್ರಹಣ–ನಿರೂಪಣೆ.—ಚಾಮರಸನು ಆಯಾ ಪಾತ್ರಗಳ ಗುಣ ಶೀಲಗಳನ್ನು ಚೆನ್ನಾಗಿ ಗ್ರಹಿಸಿ ಕಾವ್ಯದಲ್ಲಿ ಸಮರ್ಪಕವಾಗಿ ನಿರೂಪಣೆಮಾಡಿದ್ದಾನೆ. ಅಲ್ಲಮನ ವಿಚಾರವು ಬಹಳ ತೊಡಕುಳ್ಳದ್ದು. ಪರಮಜ್ಞಾನಿಯೂ, ವೈರಾಗ್ಯಮೂರ್ತಿಯೂ ಶಾಂತಿಯುತನೂ ಆದ ಅಲ್ಲಮನು ಮೂಲಾಹಂಕಾರದಲ್ಲಿ ನಿಂತು ಬೇಕಾದಾಗ ನಿರ್ವಿಕಲ್ಪ ಸಮಾಧಿಯಲ್ಲಿ ಐಕ್ಯನಾಗುತ್ತ, ಬೇಕಾದಾಗ ಬಹಿರ್ಮುಖನಾಗಿ ಪ್ರಪಂಚದ ಕಡೆಗೆ ದಯಾದೃಷ್ಟಿಯನ್ನು ಬೀರುತ್ತ ಮನುಷ್ಯರ ಲೋಪದೋಷಗಳನ್ನೂ ಸಾಧಕರ ಕಷ್ಟಸಂಕಟಗಳನ್ನೂ ತಿಳಿದು ಯುಕ್ತವಾದ ಮಾರ್ಗದಲ್ಲಿ ತಿದ್ದಲು ಮುಂದುವರಿಯುತ್ತಿದ್ದನು. ಅಲ್ಲಮನು ನಿರ್ಲೇಪನಾದರೂ ನಿಷ್ಕರುಣಿಯಲ್ಲ. ಪ್ರಪಂಚದಲ್ಲಿ ಯಾವ ಮಹಾತ್ಮರ ಚರಿತ್ರೆಯನ್ನು ನೋಡಿದರೂ ಅವರ ವೈರಾಗ್ಯದ ಮಹಿಮೆಯಲ್ಲಿ ದಯಾರಸಭಂಡಾರವು ತುಂಬಿಯೇ ಇರುತ್ತದೆ. ಇದನ್ನು ಮುಕ್ತಾಯಕ್ಕನ ದುಃಖನಿವಾರಣೆಯಲ್ಲಿ ಚಾಮರಸನು ಬಹಳ ಚೆನ್ನಾಗಿ ಚಿತ್ರಿಸಿದ್ದಾನೆ. ಮುಕ್ತಾಯಕ್ಕ ಜ್ಞಾನಿಯೇ ಆಗಿದ್ದಳು. ಆದರೆ ಇನ್ನೂ ಸಾಧನೆಯಲ್ಲಿ ತೊಡಗಿದ್ದಳು. ಲೌಕಿಕ ಸಂಬಂಧಗಳಿಂದ ತಾನು ಮುಕ್ತಳಾಗಬಹುದೆಂದು ನಂಬಿದ್ದಳು. ಅಜಗಣ್ಣನ ವಿಯೋಗವು ಹಠಾತ್ತಾಗಿ ಎದುರು ನಿಂತು ಆಕೆಯ ಧೈರ್ಯ ಸ್ಥೈರ್ಯಗಳನ್ನು ಬುಡಮಟ್ಟ ಅಲ್ಲಾಡಿಸಿತು. ಸಹೋದರನ ಮರಣದಿಂದ ಆಕೆಯ ಕರುಳು ಬೆಂದುಹೋಯಿತು. ಆಕೆಯ ನಂಬಿಕೆಗಳ ಕಟ್ಟಡವು ಕುಸಿದುಬಿತ್ತು. ಈ ಸಹೋದರನ ಮರಣವೂ ವಿಯೋಗ ಸಂಕಟವೂ ಸತ್ಯವೆ? ಅಸತ್ಯವೆ? ಕ್ಷಣ ಕಾಲದಲ್ಲಿ ವೇದಾಂತವು ದೊಡ್ಡ ಬೂಟಾಟಿಕೆಯಾಗಿ, ಒಂದು ದೊಡ್ಡ ಮೋಸವಾಗಿ ಕಂಡುಬಂದಿತು. ಅಲ್ಲಮನು

ಸಕಾಲಕ್ಕೆ ಅಲ್ಲಿಗೆ ಬಂದು ಆಕೆಯ ಸಮಸ್ಯೆ ಸಂದೇಹಗಳಿಗೆ ಉತ್ತರಕೊಟ್ಟು ಸಂಬಿಕೆಯನ್ನು ದೃಢಪಡಿಸಿ ಸಾಧನೆಯ ಮಾರ್ಗವನ್ನು ಪುನಃ ಹತ್ತಿಸಿದನು.

ಅಲ್ಲಮನು ನಿಷ್ಕಪಟಿಗಳಾದ ಸಾಧಕರ ವಿಷಯದಲ್ಲಿ ಸಂಪೂರ್ಣ ವಿಶ್ವಾಸಿಯಾಗಿದ್ದುದರಿಂದ ಅವರ ತಪ್ಪುಗಳನ್ನು ತೋರಿಸಿಕೊಡುವುದರಲ್ಲಿ ಗಂಭೀರವೂ ಸರಸವೂ ಆದ ಮಾರ್ಗವನ್ನು ಹಿಡಿಯುತ್ತಿದ್ದನು. ಅಲ್ಲಮನು ಪರಮ ಶಾಂತಿಮೂರ್ತಿ. ಯಾರು ಯಾವ ಪ್ರಶ್ನೆಗಳನ್ನು ಕೇಳಿದರೂ ಯಾರು ಏನನ್ನು ಹೇಳಿದರೂ ಶಾಂತಿ ಚ್ಯುತನಾಗುತ್ತಿರಲಿಲ್ಲ. ಸ್ವೇಚೋಚ್ಛಾ ಭಾವಗಳಿಗೆ ಎಡೆಗುಡದಂತೆ ಸ್ವಾತಂತ್ರ್ಯವನ್ನು ಕೊಡುವುದೂ ಉಚಿತವಾಗಿ ಹೊಗಳುವುದೂ ಆತನ ಬೋಧನಮಾರ್ಗದ ಹೆಗ್ಗುರುತು. ಅಲ್ಲಮನು ಸಿದ್ಧರಾಮನನ್ನು ತಿದ್ದುವಾಗಲೂ, ಕಲ್ಯಾಣಪಟ್ಟಣದಲ್ಲಿ ಬಸವೇಶ್ವರನನ್ನು ಸಂಧಿಸಿ ಉಪದೇಶ ಮಾಡುವಾಗಲೂ, ಚಾಮರಸನು ಆ ಮಹಾತ್ಮನ ಸ್ವರೂಪವನ್ನು ಚೆನ್ನಾಗಿ ವ್ಯಕ್ತಗೊಳಿಸಿದ್ದಾನೆ.

ಅಲ್ಲಮನಲ್ಲಿ ಸಂಕುಚಿತ ದೃಷ್ಟಿಯಾಗಲಿ ವೀರಶೈವವೆಂಬ ಒಂದು ದುರಭಿಮಾನವಾಗಲಿ ಇರಲಿಲ್ಲ. "ಕಾಮನ ಸುಟ್ಟು ಹೋಮವನುರುಹಿ, ತ್ರಿಪುರಸಂಹಾರದ ಕೀಲನರಿಯಬಲ್ಲರೆ, ಯೋಗಿಯಾದಡೇನು? ಭೋಗಿಯಾದಡೇನು? ಶೈವನಾದಡೇನು? ಸನ್ಯಾಸಿಯಾದಡೇನು? ಅಶನವ ತೊರೆದಾತ, ವ್ಯಸನವ ಮರೆದಾತ, ಗುಹೇಶ್ವರಲಿಂಗದಲ್ಲಿ ಅವರ ಹಿರಿಯರೆಂಬೆನು"[68] ಎಂದು ಹೇಳಬಲ್ಲ ಅಲ್ಲಮನು "ಸಮಸ್ತ ಜಾತಿಯ ಜಾಲವನು ಸರ್ವವನು ಕರುಣಿಸಿ ಪಾಲಿಸುತಲಿರುತಿರ್ದನು" ಎಂಬದಾಗಿ ಸಹಜ ರೀತಿಯಲ್ಲಿ ಚಾಮರಸನು ಬರೆದಿದ್ದಾನೆ.

(iii) ಸನ್ನಿವೇಶಗಳು.—ಚಾಮರಸನು ಒಳ್ಳೆಯ ಕವಿಯೆಂಬುದಕ್ಕೆ ಪ್ರಭುಲಿಂಗಲೀಲೆಯ ಕಥಾ ಸರಣಿಯೂ, ಪಾತ್ರಗಳ ಗುಣ ಶೀಲಗಳನ್ನು ವ್ಯಕ್ತಗೊಳಿಸಿರುವುದೂ ಹೇಗೆ ನಿದರ್ಶನಗಳಾಗಿವೆಯೋ ಹಾಗೆಯೇ ಅವನು ಅಲ್ಲಲ್ಲಿ ತಂದಿರುವ ಸನ್ನಿವೇಶಗಳೂ ಸಮಯೋಚಿತವಾಗಿ ಮಾಡಿರುವ ವರ್ಣನೆಗಳೂ ನಿದರ್ಶನಗಳಾಗಿವೆ. ಪ್ರಭುಲಿಂಗಲೀಲೆ ಲಿಂಗಭಕ್ತರಿಗಾಗಿ

68. ಪ್ರ. ದೇ. ವ. ಪುಟ ೧೬೫.

ಲಿಂಗಮಾರ್ಗೋಪದೇಶಮಾಡುವ ಕಾವ್ಯ. ಆದುದರಿಂದ ಚಾಮರಸನ ಶಕ್ತಿಪ್ರಕಾಶಕ್ಕೆ ಹೆಚ್ಚು ಅವಕಾಶವಿಲ್ಲವೆಂದೇ ಹೇಳಬೇಕು. ಇಲ್ಲಿ ಬರುವ ಕಥಾ ಗರ್ಭದಲ್ಲಿ ಸಂಕೀರ್ಣ ಸನ್ನಿವೇಶಗಳಿಲ್ಲ; ಮಾನವ ಹೃದಯದಲ್ಲಿ ಆಧಿಪತ್ಯಮಾಡುವ ಕೋಪ, ಹಠ, ವೈರ ಮುಂತಾದ ಕ್ಷಾತ್ರರಸಗಳ ಪ್ರದರ್ಶನವಿಲ್ಲ; ವೀರಾಲಾಪಗಳಿಗೆ ಎಡೆಗುಡುವ ಯುದ್ಧಪ್ರಸಕ್ತಿಗಳಿಲ್ಲ. ಇಲ್ಲಿ ಬರುವುದು ವೈರಾಗ್ಯಮೂರ್ತಿಯ ಶಾಂತಿಜೀವನದ ಚಿತ್ರ; ಧ್ಯೇಯವು ಶಿವತತ್ವ ಸಾಧನೆ; ಆಲಾಪಗಳೆಲ್ಲ ತಪೋವನದಲ್ಲಿ ಅಥವಾ ಶಿವಾನುಭವ ಮಂಟಪದಲ್ಲಿ ನಡೆಯುವ ಲಿಂಗಾಂಗ ಸಾಮರಸ್ಯದ ಸಲ್ಲಾಪ. ಹೀಗಿದ್ದರೂ ಗ್ರಂಥವನ್ನೆಲ್ಲ ಶುಷ್ಕ ವೇದಾಂತೋಪದೇಶವನ್ನಾಗಿ ಮಾಡದೆ ಮನುಜ ಸಹಜವಾದ ಸ್ಥಾಯಿಭಾವ ರಸ ವಿಶೇಷಗಳು ಎಲ್ಲೆಲ್ಲಿ ತಲೆದೋರ ಬಹುದೋ, ಅಲ್ಲೆಲ್ಲ ಚಾಮರಸನು ಅವುಗಳನ್ನು ತಂದು ರಸಕಾವ್ಯ ವನ್ನಾಗಿ ಮಾಡಿದ್ದಾನೆ. ಈ ಸನ್ನಿವೇಶಗಳ ಸೃಷ್ಟಿಯಲ್ಲಿಯೂ ಉಚಿತ ವರ್ಣನೆಗಳಲ್ಲಿಯೂ ಕವಿಯ ಉದಾತ್ತ ಧ್ಯೇಯದ, ಗಂಭೀರ ಸ್ವಭಾವದ ಮಿತವಚನದ ಶುದ್ಧ ಚಾರಿತ್ರವು ಪ್ರತಿಬಿಂಬಿಸಿ ನಮಗೆ ಗೋಚರಿಸುತ್ತದೆ.

ಮೋಹಿನೀದೇವಿ ಗರ್ಭಿಣಿಯಾದುದನ್ನೂ, ಗರ್ಭಿಣಿಯಾದ ಮೋಹಿನೀ ದೇವಿಯನ್ನೂ ನೂರಾರು ಪದ್ಯಗಳಲ್ಲಿ ವರ್ಣಿಸಿ ತಮ್ಮ ಚಮತ್ಕಾರದಿಂದ ನಮ್ಮ ತಲೆಯನ್ನು ಚಿಟ್ಟುಹಿಡಿಸುವ ಕವಿಗಳು ಸಾಹಿತ್ಯದಲ್ಲಿ ಇದ್ದಾರೆ. ಆದರೆ ಅಲ್ಲಮನ ಚರಿತ್ರೆಯನ್ನು ಬರೆಯುವ ಸಂದರ್ಭದಲ್ಲಿ ಈ ವರ್ಣನೆಗಳು ಅನುಚಿತವೆಂದು ಚಾಮರಸನು ಒಂದೆರಡು ಪದ್ಯಗಳಲ್ಲಿಯೇ ಕೃತಕೃತ್ಯ ನಾಗಿದ್ದಾನೆ. ಮಾಯಾದೇವಿಯ ಸಖಿಯರು ಅಲ್ಲಮನೊಡನೆ ಸಂಭಾಷಣೆ ಮಾಡುವಾಗಲೂ ಅವರಿಬ್ಬರಿಗೆ ಸಮಾಗಮವನ್ನುಂಟುಮಾಡುವಾಗಲೂ ಚಾಮರಸನು ಬಹಳ ಗಾಂಭೀರ್ಯವನ್ನು ತೋರಿಸಿದ್ದಾನೆ. ತೆಲುಗು ಪ್ರಭುಲಿಂಗಲೀಲಾ ಕರ್ತರು ಮಾಯಾದೇವಿಯನ್ನು ಗಣಿಕೆಯಂತೆ ಚಿತ್ರಿಸಿ, ವಿಟನಿಗೆ ಆಕೆಯ ಪರಿಚಯಮಾಡಿಕೊಟ್ಟು ಮರುಳು ಮಾಡಿಸುವ ರೀತಿ ಯಲ್ಲಿ ಇಲ್ಲಿಯ ಸನ್ನಿವೇಶವನ್ನು ಬೆಳಸಿದ್ದಾರೆ.

ಮಾಯಾದೇವಿ ಮತ್ತು ಅಲ್ಲಮರು ಸೇರುವ ಸನ್ನಿವೇಶ ಕೇವಲ ಶೃಂಗಾರದ್ದು. ಕೈಲಾಸದಲ್ಲಿ ಪಾರ್ವತಿ ಮಾಡಿದ ಶಪಥಕ್ಕೆ ತಕ್ಕ

ಪ್ರತೀಕಾರವು ಶೃಂಗಾರ ಸನ್ನಿವೇಶದಿಂದಲೆ ನಡೆಯಬೇಕಾಗಿರುವುದರಿಂದ ಮಾಯಾವಿಲಾಸ ವಿಡಂಬನಕ್ಕೆ ಇದನ್ನು ತಂದುಕೊಳ್ಳಲೇ ಬೇಕಾಯಿತು. ಯಾವ ಮಾಯೆಯ ಜನನ ಕಾಲದಲ್ಲಿಯೆ ಸಿದ್ಧಸಾಧಕರ ಚಿತ್ತಗಳು ಚಂಚಲವಾಗಿ ಅವರು ವ್ಯಥಿತರಾದರೋ, ಯಾವ ಮಾಯೆ ಯೌವನದ ವಸಂತದಲ್ಲಿ ಸರ್ವಾಲಂಕಾರ ಭೂಷಿತಳಾಗಿ ಒಮ್ಮೆ ಸುಳಿದರೆ ಸಚರಾಚರವೆಲ್ಲ ಪಾದನಖ ಕಾಂತಿಗೆ ಶರಣು ಬೀಳುತ್ತಿದ್ದಿತೋ, ಯಾವ ಮಾಯೆ ಬ್ರಹ್ಮ ವಿಷ್ಣುಗಳನ್ನು ತೊತ್ತಳ ತುಳಿದು ರುದ್ರಗಣ ಪ್ರಮಥಗಣಂಗಳ ಮರುಳುಮಾಡಿ, ನೊಸಲ ಕಣ್ಣ ಪಂಚಮುಖದವರಿಗೆ ಅರ್ಧಾಂಗಿನಿಯಾಯಿತೋ, ಆ ಮಾಯೆ ಲಾಸ್ಯನಿರತಳಾಗಿ ಭಾವಭಂಗಿಗಳ ಚಮತ್ಕಾರ ವೈಖರಿಗಳ ಜಾಲವನ್ನು ಬೀಸಿದರೆ ಸೋಲದವರಾರು! ಅಂತಹ ಮಾಯೆಗೂ ಸೋಲದೆ ಮಾಯಾ ಕೋಳಾಹಳನಾಗಿರ್ದನೆಂದು ಅಲ್ಲಮನನ್ನು ತೋರಿಸಬೇಕಾಗಿದ್ದರೆ ಶೃಂಗಾರ ಸನ್ನಿವೇಶವು ಇದ್ದಲ್ಲದೆ ಆಗುತ್ತಿರಲಿಲ್ಲ. ಆದರೆ ಆ ಶೃಂಗಾರವು ನಾಯಕನಾಯಿಕೆಯರ ಸಮಾಗಮದಲ್ಲಿ ತೋರಿಬರುವ ಶೃಂಗಾರವಲ್ಲ ವೆಂದೂ ಯೋಗಿಶ್ರೇಷ್ಠನಾದ ನಿರ್ವಿಕಲ್ಪ ಸಮಾಧಿ ಸಾಧಕನಾದ ಅವತಾರ ಪುರುಷನ ಮಾಯಾ ತಿರಸ್ಕಾರದಲ್ಲಿ ತೋರಿಬರುವ ಶೃಂಗಾರವೆಂದೂ ಚಾಮರಸನು ಗ್ರಹಿಸಿ ಅದರಂತೆ ಈ ಸನ್ನಿವೇಶವನ್ನು ಚಿತ್ರಿಸಿದ್ದಾನೆ.

ಅಲ್ಲಮನು ಬಸವೇಶ್ವರನ ಮನೆಯ ಮುಂದೆ ನಿಂತಾಗ, ಬಸವೇಶ್ವರನು ತಿಳಿವಳಿಕೆ ತಂದುಕೊಂಡು ಶರಣಾಗತನಾಗಿ ಅಪರಾಧ ಕ್ಷಮಾಪಣೆಯನ್ನು ಬೇಡಿಕೊಂಡಾಗ, ಚಾಮರಸನು ಪ್ರಭುವಿನ ಮಹತ್ವಕ್ಕೂ ಗೌರವಕ್ಕೂ ಕುಂದಕ ಬಾರದಂತೆ ನೋಡಿಕೊಂಡಿದ್ದಾನೆ. ಬಸವೇಶ್ವರನ ಭಕ್ತಿ ಸಾಧನೆಯನ್ನೂ ನಿಷ್ಕಾಪಟ್ಯವನ್ನೂ ಚೆನ್ನಾಗಿ ತಿಳಿದು, ಇರುವ ಕೆಲವು ಕೊರತೆಗಳನ್ನು ಪರಿಹಾರಮಾಡಲು ವಾತ್ಸಲ್ಯದಿಂದ ಬಂದ ಗುರುದೇವನು ಯಾರ ಮನಸ್ಸನ್ನೂ ನೋಯಿಸದೆ ತಪ್ಪನ್ನು ತಿಳುಹಿಸಿಕೊಟ್ಟು, ಮುಂದೆ ಮಾಡಬೇಕಾದ ತತ್ವೋಪದೇಶಕ್ಕೆ ಹೇಗೆ ಪ್ರೇಮರಸದ ಪೀಠಿಕೆಯನ್ನು ಹಾಕಿಕೊಂಡು ವಿಷಮಯಸನ್ನಿವೇಶವನ್ನು ಅಮೃತಮಯವಾಗಿಮಾಡಿದ ನೆಂಬುದನ್ನು "ನಡೆವಳಿಗಳೇನಾದಡಾಗಲಿ ನುಡಿವಳಿಗಳಲಿ ಅತಿಜಾಣ ರಾದಿರಿ" ಎಂಬ ಅಲ್ಲಮನ ಮಂದಹಾಸಭರಿತ ಉಪದೇಶ ವಾಕ್ಯದಲ್ಲಿ

ಚಾಮರಸನು ಚಿತ್ರಿಸಿದ್ದಾನೆ. ಇದೇ ಪ್ರಕರಣವು ಶೂನ್ಯ ಸಂಪಾದನೆಯಲ್ಲಿಯೂ ಪ್ರಭುದೇವರ ಪುರಾಣದಲ್ಲಿಯೂ ಬಹಳ ಮಟ್ಟಿಗೆ ಬೇಜಾರು ಹಿಡಿಸುವಷ್ಟು, ಅಲ್ಲಮಪ್ರಭು ಎಂತಹ ನಿಷ್ಕರುಣಿಯಾದ ಚಲವಾದಿ ಎಂದು ನಾವು ಅನ್ನುವಷ್ಟು ಲಂಬವಾಗಿ ತಿರಸ್ಕಾರನಿಂದಾಭರಿತವಾಗಿ ವರ್ಣಿತವಾಗಿದೆ.

ಅಲ್ಲಮನ ಆರೋಗಣೆಯಾದನಂತರ ಸಚರಾಚರವೆಲ್ಲ ತೃಪ್ತಿ ಪಟ್ಟಿತು ಎಂಬದನ್ನು ಚಾಮರಸನು ಭಾವಗರ್ಭಿತವಾಗಿ ಹೇಳಿ ಪ್ರಭುವಿನ ಚರಿತ್ರೆಗೆ ಕುಂದಕ ಬರದಂತೆ ಕಥೆಯನ್ನು ಮುಕ್ತಾಯಗೊಳಿಸಿದ್ದಾನೆ. ಇದೇ ವಿಷಯವನ್ನು ಎಳಂದೂರು ಹರೀಶ್ವರನು ಬರೆಯುವಾಗ ಒಂದು ಕಪ್ಪೆಯ ಒಡಲಲ್ಲಿ ಪ್ರಸಾದವಿರುವುದನ್ನು "ಬಿಜ್ಜಳ ತರ್ಕೈಸಲು" ಬಸವೇಶ್ವರನು ಕಪ್ಪೆಯ ಒಡಲನ್ನು ಸೀಳಿ ಪ್ರಸಾದ ತೋರಿಸಿದ್ದನ್ನೂ, ಹರಳಯ್ಯ ಮಧುವಯ್ಯಗಳ ಸಂಘಟನೆಯನ್ನೂ ಮಧ್ಯದಲ್ಲಿ [69]ಸಿಂಗಿರಾಜನೆಂಬ ವೈಷ್ಣವ ಸಾಮಂತನು ಬಸವ ಭಕ್ತನಾಗಿ ಸ್ತೋತ್ರಮಾಡಿದ್ದನ್ನೂ ಜಗದೇವಾದಿಗಳಿಂದ ಬಿಜ್ಜಳನು ಹತನಾದುದನ್ನೂ, ಕಡೆಯಲ್ಲಾದ ಯುದ್ಧಗಳ ಅವಾಂತರಗಳನ್ನೂ ಬರೆದು, ಇದೇನು ಪ್ರಭುದೇವರ ಪುರಾಣವೋ ಬಸವ ಪುರಾಣವೋ ಎಂಬ ಶಂಕೆಯನ್ನುಂಟುಮಾಡಿದ್ದಾನೆ.

(iv) ಶೈಲಿ ಮತ್ತು ವರ್ಣನೆಗಳು.—ಚಾಮರಸನು ಪಂಡಿತ ಪ್ರಿಯಗಳಾದ ಶ್ಲೇಷೆ ವಿರೋಧಾಭಾಸಾದಿ ಅಲಂಕಾರಗಳನ್ನು ಉಪಯೋಗಿಸಿಲ್ಲ; ಹಾಗೆಯೆ ಶಬ್ದಾಲಂಕಾರಗಳ ಗೊಂದಲವನ್ನೂ ತಂದು ಹಾಕಿಕೊಂಡಿಲ್ಲ. ಅವನು ಊರು ಉದ್ಯಾನಗಳನ್ನಾಗಲಿ ನಾಡು ಕಾಡುಗಳನ್ನಾಗಲಿ ಬಹಳ ಮಿತವಾಗಿ ನಾಲ್ಕು ಪದ್ಯಗಳಲ್ಲಿ ವರ್ಣಿಸಿ ಮುಗಿಸುತ್ತಾನೆ. ಶ್ರೀಗಿರಿಯ ಉನ್ನತ ಶಿಖರಗಳನ್ನೂ ನಿಮ್ನ ಕಂದರಗಳನ್ನೂ ವರ್ಣಿಸ

---

69. ಬಸವಲಿಂಗ ಶಾಸ್ತ್ರಿಗಳು 'ಸಿಂಗಿರಾಜ ವಿಜಯಂ' ಎಂಬ ಗ್ರಂಥದ (ಸಿಂಗಿರಾಜ ಪುರಾಣದ ಗದ್ಯಾನುವಾದ) ಪೀಠಿಕೆಯಲ್ಲಿ ಈ ಕಥೆಯನ್ನು ಪ್ರಸ್ತಾವಮಾಡಿ, ಸಿಂಗಿರಾಜನು ಬಸವಣ್ಣನವರ ಸಮಕಾಲೀನನೆಂದು ಹೇಳಿದ್ದಾರೆ. ಶ್ರೀಯುತ ಮಂಜಪ್ಪ ಹರ್ಡೇಕರ್ ಮತ್ತು ಸಿಂದಗಿ ಸಿದ್ದಪ್ಪನವರು, ಬಸವಲಿಂಗ ಶಾಸ್ತ್ರಿಗಳ ಆಧಾರದಿಂದ ಸಿಂಗಿರಾಜನು ಬಸವಣ್ಣನವರ ಸಮಕಾಲೀನನೆಂದೂ, ಸಿಂಗಿರಾಜ ಪುರಾಣವೇ ಬಸವಣ್ಣನವರ ವಿಚಾರದಲ್ಲಿ ಆದಿ ಕಾವ್ಯವೆಂದೂ ಅಭಿಪ್ರಾಯಪಟ್ಟಿದ್ದಾರೆ. ಆದರೆ ನಾವು ಬೇರೆ ರೀತಿ ಅಭಿಪ್ರಾಯಪಡುತ್ತೇವೆ.



ಬೇಕಾದಾಗ "ಏಱಿ ನೋಡಲು ಸತ್ಯಲೋಕಕೆ ಹಾರಿಸುವ ಗಿರಿಶಿಖರಗಳು ಎಂಗೆ ಎಱಾಱಿ ಹೊಕ್ಕಡೆ ಸಪ್ತಪಾತಾಳದ ಸಘಾಟಿಕೆಯು ತ್ರೋೞಿಸುವ ಜಿಂಕದ ಜಿಲಂಗಳು" ಎಂದು ಎರಡು ಮಾತುಗಳನ್ನು ಹೇಳಿ ಮುಂದಕ್ಕೆ ಹೊರಟಿದ್ದಾನೆ. ಪ್ರಭುಲಿಂಗಲೀಲೆಯಲ್ಲಿ ಒಳಹೊಕ್ಕು ನೋಡಿದರೆ ಸೂರ್ಯೋದಯ ಸೂರ್ಯಾಸ್ತಗಳ ವರ್ಣನೆಗಳು ಕೂಡ ಇಲ್ಲ; ವಸಂತಾದಿ ಷಡೃತಗಳ ವರ್ಣನೆ ಮೊದಲೇ ಇಲ್ಲ. ಚಾಮರಸನು ಈ ಕಾವ್ಯಾಂಗಗಳ ಕಡೆಗೆ ತೋರಿಸಿರುವ ಔದಾಸೀನ್ಯವಾದರೂ ಆಶ್ಚರ್ಯವನ್ನುಂಟುಮಾಡತಕ್ಕದ್ದಾಗಿದೆ.

ಪ್ರಭುಲಿಂಗಲೀಲೆಯಲ್ಲಿ ಸಮಯೋಚಿತವಾದ ಉಪಮಾನ, ದೃಷ್ಟಾಂತ ಮತ್ತು ರೂಪಕಗಳ ಮೂಲಕ ಕವಿ ಭಾವವ್ಯಂಜನ ಮಾಡಿಸಿದ್ದಾನೆ. ಇವೃಗಳಿಗೆ ಕೆಲವು ಉದಾಹರಣೆಗಳನ್ನು ಇಲ್ಲಿ ಕೊಡಬಹುದು: "ತಮವ ತರಣಿಯನೊಂದುಗೂಡುವೆನೆಂಬ ಭಾವಭ್ರಮಿತ ಬುದ್ಧಿಯಲಿ" ತಾವು ಸಾಂಗದ ಮಾಯೆಯನ್ನೂ ಸದ್ರೂಪ ಅಲ್ಲಮಪ್ರಭುವನ್ನೂ ಸಖಿಯರು ತಂದು ಸೇರಿಸಿದರು. "ಹಱುಗುಲನು ಜೋಕೈಸಿಕೊಳುತಲಿ ತೊಱೆಯ ದಾಂಟುವರಂತೆ", "ಶಿಶುಗಳಿಗೆ ಎಂಗೆ ಮೊಲೆವಾಲೆ ಜೀವನವಾದಡೆಯು ನೆಱೆವಾಲನೆಱವುತ ಮೆಲ್ಲಮೆಲ್ಲನೆಯಶನವುಣಕಲಿಸಿ ಬಾಲಕರ ಪಟು ಮಾಡಬಲ್ಲ ಸಕೇಲಕದವೊಲು" ಇಷ್ಟಲಿಂಗಮಾರ್ಗಾಚರಣೆಯಿಂದ ಶಿವತತ್ತ್ವ ಸಾಧನೆಯಾಗಬೇಕೆಂಬುದನ್ನು ಕವಿ ತಿಳಿಸಿದ್ದಾನೆ. ಕಾಲು ಕೈ ಕಣ್ಣು ಮೊದಲಾದ ಇಂದ್ರಿಯಗಳು ಸುಸ್ಥಿತಿಯಲ್ಲಿರುವಾಗಲೆ ಪಾರಮಾರ್ಥವನ್ನು ಸಾಧಿಸಬೇಕೆಂಬುದಕ್ಕೆ "ಹಾಲು ಹಯನುಳ್ಳಲ್ಲಿ ಹೇಳದೆ ಕೇಳದೇ ಹಬ್ಬ ವನು ಸವಿವುದು, ಗಾಳಿ ಬೀಸುವ ದಿನದಲೆ ತೂಱುವುದು ಹೊಟ್ಟುಗಳ; ಕಾಲುಕೈಕಣ್ಣುಗಳು ತನುವಿಹ ಕಾಲದಲಿ ಕಾಲನ ನಿವಾರಿಸಿ ಮೇಲುಗತಿ ಯುಱಿಸುವನೆ ಜಾಣನು" ಎಂದು ಸುಲಭವಾದ ಮತ್ತು ಸೊಗಸಾದ ದೃಷ್ಟಾಂತಗಳನ್ನು ಚಾಮರಸನು ಹೇಳಿಸಿದ್ದಾನೆ. "ಬಿಸಿಯ ಹದನನು ತಿಳಿದು ಲೋಹವ ಬೆಸುವವೊಲು ಪರಿಪಾಕಭಾವದ ಹಸನನಱಿದು" ಅಲ್ಲಮಪ್ರಭು ಗೋರಕ್ಷನಿಗೆ ಉಪದೇಶವಿತ್ತನೆಂದು ಚಾಮರಸನು ಹೇಳಿದ್ದಾನೆ. "ಬಸುಱ ಹೆಂಡತಿ ಊಟ ಹೊಟ್ಟೆಯ ಶಿಶುವ ದಣಿಸುವ ವೊಲು ಜಗಂಗಳ ಬಸುಱೊಳಗಡಗಿಸಿಕೊಂಡ", ಅಲ್ಲಮಪ್ರಭು ಉಂಡು

ತೃಪ್ತಿಪಟ್ಟಾಗ ಸಚರಾಚರವೆಲ್ಲ ತೃಪ್ತಿಯನೆಯ್ದಿದುವೆಂದು ಹೇಳಿದ್ದಾನೆ. ಹೀಗೆ ಈ ಗ್ರಂಥದಲ್ಲಿ ಉಪಮಾದ್ಯಲಂಕಾರಗಳು ಸಹಜವಾಗಿಯೂ ಪ್ರಯಾಸವಿಲ್ಲದೆಯೂ ಆಯಾ ಸಂದರ್ಭಕ್ಕೆ ಹೊಂದಿಕೊಂಡುಬಂದು ಕಾವ್ಯಕ್ಕೆ ಕಳೆಯನ್ನು ಕಟ್ಟಿವೆ.

ಕಥಾ ಭಾಗವೇ ಹೆಚ್ಚಾಗಿರುವ ಪ್ರಭುಲಿಂಗಲೀಲೆಯಲ್ಲಿ ದೃಶ್ಯ ಕಾವ್ಯದ ಫಲ ದೊರೆಯುವಂತೆ ಕವಿ ಸನ್ನಿವೇಶಗಳನ್ನು ತಂದುಕೊಂಡು ಸರಸವಾದ ಸಂಭಾಷಣೆಗಳ ಮೂಲಕವೂ ವಿಕಾಸಹೊಂದುವ ಪಾತ್ರ ಗುಣಗಳ ಮೂಲಕವೂ ರಂಜನೆಮಾಡಿಸಿದ್ದಾನೆ. ಇಲ್ಲಿ ಬರುವ ಭಾಷೆ ಸರಳವಾದುದು; ಪದ್ಯ ರೂಪದಲ್ಲಿದ್ದರೂ ಮಾತನಾಡಿದಷ್ಟು ಸುಲಭವಾಗಿ ಸ್ವಾರಸ್ಯವಾಗಿದೆ. ಇವುಗಳಿಗೆ ಉದಾಹರಣೆಗಳನ್ನು ಕಥಾಸಾರಾಂಶದಲ್ಲಿ ಹಿಂದೆಯೇ ಕೊಟ್ಟಿದೆ.

ಪದ್ಯಗಳ ಶೈಲಿ ಮತ್ತು ಭಾಷೆ ಇವುಗಳ ವಿಚಾರದಲ್ಲಿ ಕೆಲವು ಮಾತುಗಳನ್ನು ಹೇಳಿ ಈ ಪ್ರಕರಣವನ್ನು ಮುಗಿಸಬಹುದು. ಪ್ರಭುಲಿಂಗಲೀಲೆಯ ಅನೇಕ ಪದ್ಯಗಳು ನಿರರ್ಗಳವಾಗಿ ಓಡುತ್ತವೆ. ಈ ಗ್ರಂಥದಲ್ಲಿ ಕೆಲವು ಕಡೆಗಳಲ್ಲಾದರೋ ಭಾಮಿನೀ ಷಟ್ಪದಿಯ ಶೈಲಿ ಬಹುಮಟ್ಟಿಗೆ ಕುಮಾರವ್ಯಾಸನ ಶೈಲಿಯನ್ನು ಹೋಲುತ್ತದೆ. ಭಾರತದ ಪದ್ಯಗಳಲ್ಲಿ ಕಂಡುಬರುವ ಒಂದು ಬಿಗಿ ಕಟ್ಟು, ಗಂಡು ದನಿ ಮತ್ತು ಶಕ್ತಿ ಪ್ರಭುಲಿಂಗಲೀಲೆಯ ಪದ್ಯಗಳಲ್ಲಿ ಕಾಣದಿರಬಹುದು. ಆದರೆ ಒಟ್ಟಿನಲ್ಲಿ ಬಸವಪುರಾಣಾದಿ ಪದ್ಯಗಳಿಗಿಂತ ಹೆಚ್ಚು ಲಾಲಿತ್ಯವೂ ಮನೋಹರತ್ವವೂ ಇಲ್ಲಿಯ ಪದ್ಯಗಳಲ್ಲಿ ಕಂಡುಬರುತ್ತವೆಯೆಂದು ಧಾರಾಳವಾಗಿ ಹೇಳಬಹುದು.

ಈ ಗ್ರಂಥದಲ್ಲಿ ಉಪಯೋಗಿಸಿರುವ ಭಾಷೆ ನಡುಗನ್ನಡ. ಚಾಮರಸನ ಕಾಲಕ್ಕೆ 'ಱ'ಕಾರವು ಉಪಯೋಗದಲ್ಲಿದ್ದಿತು. ಪ್ರಭುಲಿಂಗಲೀಲೆಯಲ್ಲಿ ಈ ಱ ಕಾರವನ್ನು ಉಪಯೋಗಿಸಿರುವುದಾದರೂ ಪ್ರಾಸಸ್ಥಾನದಲ್ಲಿ ಒಂದೊಂದು ವೇಳೆ ಱ ಮತ್ತು ರ ಕಾರಗಳು ಮಿಶ್ರವಾಗಿ ಬರುವುದುಂಟು. ಸಾಮಾನ್ಯವಾಗಿ ಷಟ್ಪದೀಕಾವ್ಯಗಳಲ್ಲಿ ಇವುಗಳನ್ನು ಹೀಗೆ ಉಪಯೋಗಿಸುತ್ತಾರೆ. ಎರಡನೆಯದಾಗಿ ರೇಫೆಯ ಒತ್ತಿನ ಹಿಂದೆ ಬರುವ ಅಕ್ಷರವನ್ನು ಸಮಯೋಚಿತವಾಗಿ ಲಘು ಅಥವಾ ಗುರುವನ್ನಾಗಿ ಮಾಡಿಕೊಳ್ಳುತ್ತಾನೆ. ಇದು ಅಸಾಧುಪ್ರಯೋಗವೆಂದು ಶಬ್ದ

ಮಣಿದರ್ಪಣಕಾರನು ಅಭಿಪ್ರಾಯಪಟ್ಟಿರುವನು. ಮೂರನೆಯದಾಗಿ ಚಾಮರಸನು ಕೆಲವು ವಿಲಕ್ಷಣ ಪ್ರಯೋಗಗಳನ್ನು ಮಾಡಿದ್ದಾನೆ. ಕ್ರೀ ಎಂಬುದನ್ನು ಕ್ರಿಯೆ ಎಂಬರ್ಥದಲ್ಲಿ ಆತನು ಉಪಯೋಗಿಸಿದ್ದಾನೆ. ಶರಿರ (ಪದ್ಯ ೭೬೨), ಉದಾಸಿನ (ಪದ್ಯ ೧೫೫), ಸರ್ವ ತಪ್ಪೆನುತ (ಪದ್ಯ ೪೦೯) ಎಂದು ಪ್ರಯೋಗಗಳನ್ನು ಆತನು ಮಾಡಿದ್ದಾನೆ. "ಅಱಿಯಲಱಿಯದೆ", "ಅಱಿವುದಱಿವುಗಳ" ಎಂಬ ಪದದ್ವಂದ್ವಗಳೂ "ಚಾಗು! ಪೂತುರೆ! ಮಝು! ಭಾಪು!" ಎಂಬ ಮೆಚ್ಚಿಕೆಯ ಮಾತುಗಳೂ ಸ್ವಲ್ಪ ಹೆಚ್ಚಾಗಿಯೇ ಬರುತ್ತವೆ. ನಾಲ್ಕನೆಯದಾಗಿ ಸಂಧಿ ಮಾಡುವಾಗ ಕೆಲವುಕಡೆ 'ಯ' ಕಾರಾಗಮಕ್ಕೆ ಪ್ರತಿಯಾಗಿ 'ವ' ಕಾರಾಗಮವನ್ನು ಉಪಯೋಗಿಸಿರುವುದು ಕಂಡುಬರುತ್ತದೆ. ಈ ಎರಡು ವಿಧವಾದ ಆಗಮ ಪ್ರಯೋಗಗಳೂ ಆಗ ರೂಢಿಯಲ್ಲಿದ್ದಿರಬಹುದು.

**VIII. ವೀರಶೈವ ತತ್ವ.**—ಪ್ರಭುಲಿಂಗಲೀಲೆ ಕವಿಯ ಅಭಿಪ್ರಾಯದಲ್ಲಿ ಕೇವಲ ಜೀವನ ಚರಿತ್ರೆಯಲ್ಲ. ವೇದಾಂತದ ಸಾರವಾಗಿಯೂ ಅನುಭಾವಿಗಳಿಗೆ ಅಮೃತಪ್ರಾಯವಾಗಿಯೂ ಇರುವುದೆಂದು ಅವನು ತಿಳಿಸುತ್ತಾನೆ. ಇದರಲ್ಲಿರುವ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವು ಗ್ರಹಿಕೆಯಾಗಬೇಕಾದರೆ ಆ ಸಿದ್ಧಾಂತದ ಮುಖ್ಯಾಂಶಗಳ ಪರಿಚಯವು ಆವಶ್ಯಕ.[70]

ಅವ್ಯಕ್ತವಾಗಿದ್ದ ಪರವಸ್ತು ಸ್ವಲೀಲೆಯಿಂದ ಸೇವ್ಯಸೇವಕ ಭಾವದಿಂದ ಲಿಂಗ ಮತ್ತು ಅಂಗ ಎಂದು ಎರಡಾಯಿತು. ಹೀಗೆ ಎರಡಾದ ಸಮಯದಲ್ಲಿಯೇ ಪರವಸ್ತುವಿನಲ್ಲಿ ಅಂತರ್ಗತವಾಗಿದ್ದ ಶಕ್ತಿ ಎರಡಾಗಿ ಒಂದು ಭಾಗ ಲಿಂಗವನ್ನಾಶ್ರಯಿಸಿತು. ಇನ್ನೊಂದು ಭಾಗ ಅಂಗವನ್ನು ಆಶ್ರಯಿಸಿತು. ಅಂಗವನ್ನು ಆಶ್ರಯಿಸಿದ ಭಾಗವು ಭಕ್ತಿಯೆಂಬ ಹೆಸರನ್ನು ಪಡೆಯಿತು. ಶಕ್ತಿ ಸಮೇತವಾದ ಲಿಂಗವು ಭಾವ, ಪ್ರಾಣ ಮತ್ತು ಇಷ್ಟ ಲಿಂಗಗಳೆಂದು ಮೂರಾಯಿತು. ಭಾವಲಿಂಗವು ಮಹಾಲಿಂಗ ಪ್ರಸಾದ

---

70. ಷಟ್ಸ್ಥಲದ ವಿಚಾರವನ್ನು ಇಲ್ಲಿ ಬಹಳ ಸ್ಥೂಲವಾಗಿ ತಿಳಿಸಿದೆ. ಹೆಚ್ಚು ವಿವರಣೆಗಳಿಗೆ ಸಿದ್ಧಾಂತಶಿಖಾಮಣಿ, ಶಿವಾದ್ವೈತಮಂಜರಿ, ಶಿವಾನುಭವಸೂತ್ರ, ಷಟ್ಸ್ಥಲ ಪ್ರದೀಪಿಕೆ ಮುಂತಾದ ಗ್ರಂಥಗಳನ್ನು ನೋಡತಕ್ಕದ್ದು.

ಲಿಂಗಗಳೆಂದೂ, ಪ್ರಾಣಲಿಂಗವು ಜಂಗಮಲಿಂಗ ಶಿವಲಿಂಗಗಳೆಂದೂ, ಇಷ್ಟ ಲಿಂಗವು ಗುರುಲಿಂಗ ಆಚಾರಲಿಂಗಗಳೆಂದೂ ಪುನಃ ವಿಂಗಡವಾಗಿ ಆರು ಲಿಂಗಗಳಾದುವು. ಆಯಾ ಲಿಂಗಕ್ಕನುಸಾರವಾಗಿ ಶಕ್ತಿಗಳೂ ಆರಾಗಿ ಅವುಗಳಲ್ಲಿ ಸೇರಿಕೊಂಡವು. ಹೀಗೆ ಲಿಂಗಗಳು ಆರಾದ್ದರಿಂದ ಅಂಗವು ಕೂಡ ಮೊದಲು ಯೋಗಾಂಗ ಭೋಗಾಂಗ ಮತ್ತು ತ್ಯಾಗಾಂಗ ಎಂದಾಗಿ ಕಡೆಗೆ ಐಕ್ಯಶರಣ, ಪ್ರಾಣಲಿಂಗಿ ಪ್ರಸಾದಿ, ಮಹೇಶಭಕ್ತ ಎಂದು ಆರು ಅಂಗಸ್ಥಲಗಳಾಗಿ ತದನುಗುಣವಾದ ಭಕ್ತಿಗಳಿಂದ ಕೂಡಿ ಲಿಂಗಗಳನ್ನು ಸೇವಿಸುವುದು.

"ಅಂಗ" ಎನ್ನಿಸಿಕೊಂಡ ಶುದ್ಧ ಜೀವನಿಗೆ ಪಂಚಭೂತಗಳ ಮತ್ತು ಅವುಗಳ ಪಂಚೀಕರಣದ ದೆಸೆಯಿಂದ ಸ್ಥೂಲ ಸೂಕ್ಷ್ಮ ಮತ್ತು ಕಾರಣ ಶರೀರಗಳು ಉಂಟಾದುವು. ನ್ಯೂನೀಭಾವದಿಂದ ಕಿಂಚಿದ್‌ಜ್ಞತೆ, ಕಿಂಚಿತ್ ಕರ್ತೃತ್ವತೆ, ಮುಂತಾದ ಗುಣಶಕ್ತಿಗಳನ್ನು ಪಡೆದ ಶಿವಪ್ರಕಾಶವೇ ಅಂಗವಾಗಿ ವ್ಯವಹರಿಸಲ್ಪಡುವುದಲ್ಲದೆ, ತಾನು ಯಾರೆಂಬುದನ್ನು ತಿಳಿಯದೆ ದೇಹಾಭಿ ಮಾನವುಳ್ಳವನಾಗಿ ಜನನ ಮರಣಗಳನ್ನು ಪಡೆಯುತ್ತಿರುವುದು. ಹೀಗೆ ಜನನ ಮರಣಗಳುಂಟಾಗುತ್ತಿರಲು ಸಂಚಿತ, ಆಗಾಮಿ ಮತ್ತು ಪ್ರಾರಬ್ಧ ಗಳೆಂಬ ಕರ್ಮತ್ರಯಗಳು ಅಂಟಿಕೊಂಡು ಅನೇಕ ಜನ್ಮಗಳಿಗೆ ಎಳೆದೊಯ್ಯು ತ್ತಿರುವುವು. ಶಿವಜ್ಞಾನೋದಯವಾಗುವ ಕಾಲಕ್ಕೆ ಸಂಸಾರದಲ್ಲಿ ವಿರಕ್ತ ಭಾವವುಂಟಾಗಿ, ನಾನು ಯಾರು? ಎಲ್ಲಿಂದ ಬಂದೆ? ಈ ಕಷ್ಟಸಂಕಟಗಳು ನನಗೆ ಬರಲು ಕಾರಣಗಳೇನು? ಇವುಗಳಿಂದ ಪಾರಾಗುವ ಬಗೆಯೆಂತು? ಎಂಬ ವಿಚಾರಗಳುಂಟಾಗುವುವು. ತಿಳಿವಳಿಕೆಯನ್ನು ಪಡೆಯುವುದಕ್ಕಾಗಿ ಗುರುವನ್ನು ಆಶ್ರಯಿಸಲು, ಗುರು "ನೀನು ಈಶ್ವರಾಂಶವೇ ಆಗಿರುವೆ. ನಿನ್ನ ನಿಜಸ್ಥಿತಿಯನ್ನು ತಿಳಿಯುವ ಮಾರ್ಗವನ್ನು ಉಪದೇಶಿಸುವೆನು" ಎಂಬ ಧೈರ್ಯ ಹೇಳಿ ದೀಕ್ಷೆಯನ್ನು ಕೊಡುವನು. ಹೀಗೆ [71]ದೀಕ್ಷೆ

---

71. "ದೀಯತೇ ಚ ಶಿವಜ್ಞಾನಂ ಕ್ಷೀಯತೇ ಪಾಶಬಂಧನಂ ॥ ೧೧ ॥
ಯಸ್ಮಾದತಸ್ಸಮಾಖ್ಯಾತಾ ದೀಕ್ಷೇತೀಯಂ ವಿಚಕ್ಷಣೈಃ ।"

ಎಂದು ಸಿ. ಶಿ. ಆರನೆಯ ಪರಿಚ್ಛೇದದಲ್ಲಿ ಹೇಳಿದೆ. "ದೀಯತೇ ಯೇನ ವಿಜ್ಞಾನಂ" ಎಂದು ವಿ. ಧ. ಶಿ. ಮ. ಪುಟ ೧೯೦ರಲ್ಲಿದೆ." "ದೀಯತೇ ಲಿಂಗಸಂಬಂಧಃ

ಯನ್ನು ಪಡೆಯುವುದರಿಂದ ಜೀವನಿಗೆ ಮಲತ್ರಯಗಳೂ ಕರ್ಮತ್ರಯಗಳೂ ಕತ್ತರಿಸಿ ಹೋಗುವುವು. ಆದುದರಿಂದ ಮುಂದೆ ಜನ್ಮಗಳುಂಟಾಗುವುದಿಲ್ಲ.

ಕರ್ಮತ್ರಯ ಮುಕ್ತನಾಗಿ ಅಂಗ ಎನ್ನಿಸಿಕೊಂಡ ಶುದ್ಧ ಜೀವನು ತನ್ನಲ್ಲಿ ಲಿಂಗದ ಗುಣಗಳನ್ನು ಪ್ರಜ್ವಲಿಸಿಕೊಂಡು ಲಿಂಗೈಕ್ಯನಾಗುವ ವಿದ್ಯೆಯೆ ಷಟ್ಸ್ಥಲವಿದ್ಯೆ. ಗುರು ದೀಕ್ಷೆಯ ಕಾಲದಲ್ಲಿ ತನ್ನ ಹಸ್ತವನ್ನು ಶಿಷ್ಯನ ಮಸ್ತಕದ ಮೇಲಿಟ್ಟು ಬ್ರಹ್ಮರಂಧ್ರಸ್ಥಾನದಲ್ಲಿರುವ ನಿಷ್ಕಲಲಿಂಗ ಚೈತನ್ಯವನ್ನು ಆಕರ್ಷಿಸಿ, ಅದನ್ನು ಶಿಷ್ಯನ ಹೃದಯದಲ್ಲಿ ಪ್ರಾಣಲಿಂಗವನ್ನಾಗಿ ಮಾಡಿ, ಅಲ್ಲಿಂದ ನೇತ್ರಗಳಿಗೆ ತಂದು ಬಾಹ್ಯದಲ್ಲಿ ಕಾಣುವ ಇಷ್ಟಲಿಂಗವನ್ನಾಗಿ ಕರಸ್ಥಲಕ್ಕೆ ಅನುಗ್ರಹಿಸುವನು. "ಪರವಸ್ತು ರೂಪವಾದ ಲಿಂಗವಿದು, ನಿನ್ನ ಪ್ರಾಣದಂತೆ ತಿಳಿ — ಇದನ್ನು ಎಂದಿಗೂ ಅಗಲದಿರು" ಎಂದು ಬೋಧಿಸಿ ಕಿವಿಯಲ್ಲಿ ಪಂಚಾಕ್ಷರಿಯನ್ನುಪದೇಶಿಸುವನು.

ಹೀಗೆ ಗುರು ಅನುಗ್ರಹಿಸಿಕೊಟ್ಟ ಇಷ್ಟಲಿಂಗವನ್ನು ದೇಹದಮೇಲೆ ಧರಿಸಿಕೊಂಡು ಪೂಜಾಕಾಲದಲ್ಲಿ ಕರಸ್ಥಲಕ್ಕೆ ತಂದುಕೊಂಡು ಅಷ್ಟವಿಧಾರ್ಚನೆ ಷೋಡಶೋಪಚಾರಗಳನ್ನು ಅದಕ್ಕೆ ಮಾಡಬೇಕು. ಈಶ್ವರನು ಭಕ್ತರ ಅನುಗ್ರಹಾರ್ಥವಾಗಿ, ಗುರು, ಲಿಂಗ ಮತ್ತು ಜಂಗಮರೂಪಗಳನ್ನು ತಾಳಿರುವುದರಿಂದ ಇವುಗಳಲ್ಲಿ ಭಕ್ತನು ಅಭೇದ ಬುದ್ಧಿಯನ್ನು ತೋರಿಸಬೇಕು. ಗುರುವನ್ನು ತನುವಿಂದ ಓಲೈಸಬೇಕು. ಲಿಂಗಕ್ಕೆ ಮನಸ್ಸನ್ನು ಅರ್ಪಿಸಬೇಕು. ಜಂಗಮಕ್ಕೆ ಧನವನ್ನು ನೀಡಬೇಕು. ಹೀಗೆ ಇಷ್ಟಲಿಂಗದ ಸಹಾಯದಿಂದ ತನು ಮನ ಧನದ ಮೇಲಿನ ಆಸೆಗಳನ್ನು ತ್ಯಜಿಸಿ ನಿಶ್ಚಲವಾದ ಭಕ್ತಿಯನ್ನು ಮಾಡಿ ಅಷ್ಟಾವರಣಗಳನ್ನು ಪಾಲಿಸಿಕೊಂಡು ಬರುವವನು ಭಕ್ತನು.

ಮೇಲಿನ ಭಕ್ತಿಯೇ ದೃಢಪಟ್ಟು ನಿಷ್ಠೆಯಾಗಿ ಎಂತಹ ತೊಂದರೆಗಳು ಬಂದರೂ ವ್ರತ ಭ್ರಷ್ಟನಾಗದೆ ಧೈರ್ಯ ಸ್ಥೈರ್ಯಗಳನ್ನು ಪಡೆದಾತನು

---

ಕ್ಷೀಯತೇ ಚ ಮಲತ್ರಯಂ" ಎಂದು ಶಿ. ಭ. ಸೂ. ದಲ್ಲಿ ಹೇಳಿದೆ. "ದೀಯತೇ ಲಿಂಗ ಸಂಬಂಧಃ ಕ್ಷೀಯತೇ ಕರ್ಮಸಂಚಯಃ" ಎಂದು ಸೂ. ತ. ಅಷ್ಟಮ ಪಟಲದಲ್ಲಿ ಹೇಳಿದೆ.

ಮಹೇಶನು.[72] ಈತನು ಪರಧನ ಪರಸ್ತ್ರೀ ವಿಮುಖನಾಗಿ ವ್ರತಾಚರಣೆಯಲ್ಲಿ ಪ್ರಾಣಾರ್ಪಣ ಮಾಡುವುದಕ್ಕೂ ಸಿದ್ಧನಾಗಿರುವನು. ಸರ್ವವನ್ನೂ ಇಷ್ಟಲಿಂಗ ಪ್ರೀತ್ಯರ್ಥವಾಗಿ ಮಾಡುತ್ತ ಸ್ವಾರ್ಥತ್ಯಾಗಿಯಾಗಿರುವನು. ಗುರು ಲಿಂಗ ಜಂಗಮಾರ್ಪಿತವನ್ನು ಮಾತ್ರ ಭುಜಿಸುವನು.

ಈ ಭಕ್ತ ಮತ್ತು ಮಹೇಶಸ್ಥಲಗಳಲ್ಲಿ ದೇಹವನ್ನೂ ಮನಸ್ಸನ್ನೂ ಶಿಕ್ಷಣಕ್ಕೊಳಪಡಿಸಿ ಮುಂದೆ ಆಗಬೇಕಾದ ಪ್ರಾಣಲಿಂಗ ಜ್ಞಾನಸಂಪಾದನೆಗೆ ಸಿದ್ಧನಾಗಬೇಕು. ಪ್ರಸಾದಿಸ್ಥಲದಲ್ಲಿ ಮನಸ್ಸು ಶಾಂತಿಯನ್ನು ಪಡೆಯುವುದು. ಭಕ್ತ ಮತ್ತು ಮಹೇಶಸ್ಥಲಗಳಲ್ಲಿ ಕಂಡುಬಂದ ವೀರಶ್ರದ್ಧೆ ಆಡಂಬರಗಳು ಕ್ರಮೇಣ ಕಡಮೆಯಾಗುತ್ತ ಮನಸ್ಸು ಸ್ವಸ್ಥತೆಗೆ ಬರುವುದು. ಆಹಾರಪದಾರ್ಥಗಳನ್ನು ಮಾತ್ರವಲ್ಲದೆ ಎಲ್ಲ ವಸ್ತುಗಳನ್ನೂ ಮೊದಲು ಲಿಂಗಕ್ಕರ್ಪಿಸಿ ಪ್ರಸಾದರೂಪದಲ್ಲಿ ಪ್ರಸಾದಿ[73] ಸ್ವೀಕರಿಸುವನು. ಈ ಲಿಂಗವು ಬಾಹ್ಯದಲ್ಲಿರುವ ಲಿಂಗ ಮಾತ್ರವಲ್ಲ. ಆಯಾ ಇಂದ್ರಿಯ ಸ್ಥಾನಗಳಲ್ಲಿರುವ ಚೈತನ್ಯಮೂರ್ತಿಗಳಾದ ಆಚಾರಾದಿ ಲಿಂಗಗಳು. ಆದುದರಿಂದ ರೂಪ ರಸ ಗಂಧಾದಿಗಳನ್ನು ಆಯಾ ಇಂದ್ರಿಯದ ಮೂಲಕ ಆಯಾ ಇಂದ್ರಿಯ ಸ್ಥಾನದಲ್ಲಿರುವ ಲಿಂಗಕ್ಕರ್ಪಿಸಿ ಪ್ರಸಾದವಾಗಿ ಪರಿವರ್ತಿಸಿಕೊಂಡು ಅರ್ಪಣಬುದ್ಧಿಯನ್ನು ಬೆಳೆಸುತ್ತ ಪ್ರಸಾದಿ ಮುಂದುವರಿಯುವನು. ಕಡೆಗೆ ತನಗುಂಟಾದ ಸಂತೋಷ ವ್ಯಥೆಗಳೂ ಕಷ್ಟ ಸಂಕಟಗಳೂ, ಸುಖ ದುಃಖಗಳೂ ಪ್ರಸಾದರೂಪವಾಗಿಯೇ ಆತನಿಗೆ ಗೋಚರಿಸಿ, ಅವುಗಳನ್ನು ಭೋಗಿಸುವ ಕರ್ತೃ ಲಿಂಗದೇವನೇ ಆಗಿರುವನೆಂದೂ, ಬೇಕು ಬೇಡೆಂಬುದು ಏನೂ ಇಲ್ಲವೆಂದೂ ತಿಳಿಯುವುದು.

---

72. ಸಹಜ ದಾನದಲ್ಲಿ ನಿಷ್ಠೆಯನ್ನು ಪಡೆದವನೂ, ಶಿವನಲ್ಲಿಯೇ ನಿಷ್ಠೆಯನ್ನು ಪಡೆದವನೂ ಮಹೇಶ ಎಂಬುದಾಗಿಯೂ, ಪರಶಿವನೇ ಗುರು ಲಿಂಗ ಜಂಗಮ ಸ್ವರೂಪನೆಂದು ಅನುಷ್ಠಿಸುವವನೇ ಮಹೇಶನೆಂದೂ ಕೆಲವು ಗ್ರಂಥಗಳು ತಿಳಿಸುತ್ತವೆ (ಶಿ. ತ. ಮಂ. ಪುಟ ೧೨೯, ೧೨೩೮–೪೦ ನೋಡಿ.) 73. ಅಷ್ಟಾವರಣಗಳನ್ನೂ, ಪಂಚಾಚಾರಗಳನ್ನೂ ಪಾಲಿಸಿಕೊಂಡು ಬರುವವನು ಪ್ರಸಾದಿ ಎಂದು ಶಂಕರ ಸಂಹಿತೆಯಲ್ಲಿ ವಿವರಿಸಿದೆ. (ಶಿ. ತ. ಮಂ. ಪುಟ ೧೨೩೮–೧೨೪೦ ನೋಡಿ.)

ಭಕ್ತ, ಮಹೇಶ ಮತ್ತು ಪ್ರಸಾದಿ ಸ್ಥಲಗಳಲ್ಲಿ ಭೃತ್ಯ ಸ್ವರೂಪವಿದ್ದು ದ್ವೈತಭಾವ ಬಲಿದಿರುತ್ತದೆ; ಪ್ರಾಣಲಿಂಗಿ ಸ್ಥಲದಿಂದ ಕರ್ತೃ ಸ್ವರೂಪವನ್ನು ಪಡೆದು ಅದ್ವೈತಕ್ಕೆ ಏರುವುದಾಗಿದೆ. ಮೊದಲಿನ ಮೂರು ಸ್ಥಲಗಳಲ್ಲಿ ಕರ್ಮ ಪ್ರಾಧಾನ್ಯವಿದ್ದು ಜ್ಞಾನವು ಗೌಣವಾಗಿರುತ್ತದೆ; ಮುಂದಿನ ಮೂರು ಸ್ಥಲಗಳಲ್ಲಿ ಜ್ಞಾನ ಪ್ರಾಧಾನ್ಯವಿದ್ದು ಕರ್ಮವು ಗೌಣವಾಗಿರುತ್ತದೆ. ಇಂದ್ರಿಯಾದಿಗಳೆಲ್ಲ ಲಿಂಗಸ್ಥಾನಗಳೆಂದು ತಿಳಿದಮೇಲೆ ತಾನು ಮಾಡುವ ಕಾರ್ಯಗಳೆಲ್ಲ ಲಿಂಗ ಕಾರ್ಯಗಳಾಗಿಯೂ, ಕರಣಾದಿಗಳೆಲ್ಲ ಲಿಂಗ ಕರಣಗಳಾಗಿಯೂ ಇರುವುವೆಂಬ ಭಾವವು ಪ್ರಾಣಲಿಂಗಿಗೆ ಮೂಡುವುದು. ತನ್ನ ದೇಹದಲ್ಲೆಲ್ಲ ಆಚಾರಾದಿ ಲಿಂಗಗಳಿರುವುದರಿಂದ ತಾನು ಸರ್ವಾಂಗ ಲಿಂಗಿಯೆಂದು ಗ್ರಹಿಕೆಯಾಗಿ ಅಂತರ್ಲಿಂಗಾನುಸಂಧಾನಕ್ಕಾಗಿ ಪ್ರಾಣಲಿಂಗಿ ಅಂತರ್ಮುಖಿಯಾಗುವನು. ಹೀಗೆ ಮಾಡುವುದರಿಂದ ಆಧಾರ ಸ್ವಾಧಿಷ್ಠಾನಾದಿ ಸ್ಥಳಗಳಲ್ಲಿರುವ ಷಟ್ಚಕ್ರಗಳೂ ಷಡ್ಲಿಂಗಗಳೂ ಅನುಭವವೇದ್ಯವಾಗಿ ಲಿಂಗದಲ್ಲಿ ಪ್ರಾಣವೂ ಪ್ರಾಣದಲ್ಲಿ ಲಿಂಗವೂ ಉಳ್ಳವನಾಗುತ್ತಾನೆ. ಇಷ್ಟಲಿಂಗದಲ್ಲಿ ಗುರು ಸೇರಿಸಿದ ಕಳೆ ಅಂತರಂಗದಲ್ಲಿರುವುದೆಂದು ಸ್ಫುರಿಸಿ ಹೊರಗಿನ ಕುರುಹು ಗೌಣವಾಗಿ ಅಂತರ್ಲಿಂಗಪೂಜೆಯೇ ಬಲಿಯುವುದು.

ಹೀಗೆ ಪ್ರಾಣಲಿಂಗವನ್ನು ಬಿಟ್ಟು ಅಗಲಲು ಇಚ್ಛೆಯಿಲ್ಲದೆ, ಲಿಂಗದಲ್ಲಿ ಮೋಹಪಟ್ಟು ಲಿಂಗ ಪತಿ ಶರಣ ಸತಿ ಎಂಬ ಭಾವದಿಂದ ಕ್ರೀಡಿಸುವವನು ಶರಣನು. ನಿಕಟವಾದ ಲಿಂಗಸಂಬಂಧದಿಂದ ಸರ್ವಜ್ಞತ್ವ ಸರ್ವ ಶಕ್ತಿತ್ವ ಮೊದಲಾದ ಲಿಂಗದ ಗುಣಗಳೆಲ್ಲವನ್ನೂ ಪಡೆದು ಶರಣನು ಇಹಲೋಕ ಪರಲೋಕಗಳನ್ನು ಒಂದಾಗಿ ಮಾಡಬಲ್ಲನು. ಬಾಹ್ಯ ಪ್ರಪಂಚದಲ್ಲಿ ಎತ್ತೆತ್ತಲೂ ಲಿಂಗ ಕಳೆಯನ್ನೇ ಕಾಣುವವನಾದ್ದರಿಂದ ಅಹಿಂಸಾಪರನೂ ಪರಮಶಾಂತಮೂರ್ತಿಯೂ ಆಗುವನು. ಸ್ವಸ್ವರೂಪ ಜ್ಞಾನಿಯಾದುದರಿಂದ ಪೂಜೆ ಪುರಸ್ಕಾರ ನಿಯಮ ಆಚಾರ ಮುಂತಾದುವುಗಳನ್ನು ಮೀರಿದವನೂ ಆಗುವನು. ಶರಣನು ಹಮ್ಮು ಬಿಮ್ಮುಗಳಿಲ್ಲದೆ, ಕೋಪ ತಾಪಗಳಿಲ್ಲದೆ, ಸರ್ವ ಸಮತಾಭಾವದಿಂದ ಕೂಡಿ, ಭವಿ ಭಕ್ತ ಎಂಬ ಭೇದಭಾವಗಳಿಲ್ಲದೆ ವರ್ತಿಸುತ್ತಾನೆ.

ಹೀಗೆ ಶರಣನಾದವನು ಸತಿಭಾವವಡಗಿ ಲಿಂಗ ಕಳೆಯೇ ತಾನಾಗಿ, ನೀರು ನೀರು ಬೆರೆಸಿದಂತೆ, ಜ್ಯೋತಿ ಜ್ಯೋತಿಯ ಕೂಡಿದಂತೆ ಪರವಸ್ತುವಿನಲ್ಲಿ ಐಕ್ಯನಾಗುವುದೇ ಐಕ್ಯಸ್ಥಲ. ಇದೇ ಪರಮಪದವಿ, ಇದೇ ನಿರಾಕುಳ ನಿಶ್ಚಿಂತ ನಿರಾಮಯವಾದ ಮುಕ್ತಿ. ಈ ಜೀವನ್ಮುಕ್ತನು ದೇಹದಿಂದ ಬೇಕಾದಾಗ ಬಿಡುಗಡೆಹೊಂದಬಲ್ಲನು. ಆದರೆ ಲೋಕಾನುಗ್ರಹಾರ್ಥವಾಗಿ ದೇಹೋಪಾಧಿ ತಾನಾಗಿ ಹೋಗುವತನಕ ಗುರುವಾಗಿ ಚರಿಸುತ್ತಿರುವನು.

**IX. ಪ್ರಭುಲಿಂಗಲೀಲೆಯ ರಹಸ್ಯಾರ್ಥ.**—ಮೇಲೆ ವಿವರಿಸಿದ ಷಟ್ಸ್ಥಲ ಮತ್ತು ಏಕೋತ್ತರ ಶತಸ್ಥಲಗಳ ಮರ್ಮವನ್ನು ಚಾಮರಸನು ಈ ಕಾವ್ಯದಲ್ಲಿ ತೋರಿಸಿದ್ದಾನೆ. ವೇದಾಂತದ ಗೂಢಾರ್ಥವು ಸುಲಭವಾಗಿ ರುಚಿಸುವಂತೆ ಅದನ್ನು ತಕ್ಕ ಪಾತ್ರಗಳ ಮೂಲಕ ರಸಭರಿತವಾದ ಕಥಾರೂಪದಲ್ಲಿ ಬರೆದಿದ್ದಾನೆ. ಪ್ರಭುಲಿಂಗಲೀಲೆ ಒಂದು ವಿಧದಲ್ಲಿ ಕನ್ನಡದ Pilgrim's Progress ಎಂದು ಹೇಳಬಹುದು.

ಕವಿ ಶಕ್ತಿವಿಶಿಷ್ಟಾದ್ವೈತವನ್ನು ಹೇಳುವವನಾದ್ದರಿಂದ ಪ್ರಾರಂಭದಲ್ಲಿಯೇ "ಶಕ್ತಿ ಸಮೇತ ಶಂಕರನೊಸೆದು ಕುಳ್ಳಿತು ಮೆರೆವುತಿರ್ದನು ದಿವ್ಯ ತೇಜದಲಿ" ಎಂದು ಹೇಳಿ ಪರಮೇಶ್ವರನನ್ನು ವರ್ಣಿಸಿದ್ದಾನೆ. ಶಕ್ತಿ ಭಕ್ತಿಗಳಲ್ಲಿ ವಿಶ್ವದ ವಿಕಾಸಕ್ಕೆ ಶಕ್ತಿ ಪ್ರಧಾನವಾಗಿದ್ದರೂ, ಸಾಮರಸ್ಯ ಸಾಧನವಾದ ಭಕ್ತಿಯೇ ಹೆಚ್ಚೆನ್ನುವುದನ್ನು ಪಾರ್ವತೀಪರಮೇಶ್ವರರ ಸಂವಾದದಲ್ಲಿ ಹೇಳಿ ಅದು ಹೇಗೆ ಹೆಚ್ಚೆನ್ನುವುದನ್ನು ಮುಂದೆ ಕಥೆಯಲ್ಲಿ ವಿವರಿಸಿದ್ದಾನೆ. ಮಮಕಾರ, ಮೋಹಿನೀದೇವಿ, ಮಾಯೆ, ಅಹಂಕಾರಾಚಾರ್ಯ ಎಂಬ ಹೆಸರುಗಳನ್ನು ನೋಡುವಾಗಲೇ ಇವರ ಸಂಪರ್ಕದಿಂದ ಮುಕ್ತಿಯಿಲ್ಲೆಂಬುದು ಸ್ಫುಟವಾಗುತ್ತದೆ. ತ್ಯಾಗಾಂಗ, ಭೋಗಾಂಗ, ಯೋಗಾಂಗಗಳ ಸಾಧನೆಗೆ ಮಾಯಾಮೋಹಗಳನ್ನು ತ್ಯಜಿಸಿ ಹಮ್ಮುಬಿಮ್ಮುಗಳನ್ನು ಬಿಟ್ಟು ಮುಂದುವರಿಯಬೇಕು. "ಹೆಣ್ಣಿಂಗೆ ಗಂಡು ರೂಪಾಗಿ ಕಾಡಿತ್ತು ಮಾಯೆ, ಗಂಡಿಂಗೆ ಹೆಣ್ಣುರೂಪಾಗಿ ಕಾಡಿತ್ತು ಮಾಯೆ"—ಆದುದರಿಂದ ಸಾಧನೆಗೆ ತವಕಪಡುವ ವ್ಯಕ್ತಿ ಹೆಣ್ಣಾಗಲಿ ಗಂಡಾಗಲಿ ಈ ಮಾಯೆಯನ್ನು ಜಯಿಸಬೇಕು.

ಇನ್ನೊಂದು ಕಡೆ ಸುಜ್ಞಾನಿ ಮತ್ತು ನಿರಹಂಕಾರರಿದ್ದಾರೆ. ಇವರ ಪುತ್ರನಿಗೆ ಅಲ್ಲಮನೆಂದು ಹೆಸರು. [74]ಅಲ್ಲಮ ಎಂಬುದು ನಿರ್ಮಾಯ ನೆಂಬುದರ ಕನ್ನಡವೆಂದು ಇಟ್ಟುಕೊಳ್ಳಬಹುದು. ಯಾರು ಜ್ಞಾನಿಗಳೋ ಅವರು ನಿರಹಂಭಾವದಿಂದಲೇ ಇರುತ್ತಾರೆ. ಜ್ಞಾನವೂ ನಿರಹಂಭಾವವೂ ಇರುವ ಕಡೆ ನಿರ್ಮಾಯವಿರುವುದು ಸಹಜ. "ಬಗೆಯೆ ನಿರಹಂಕಾರ ಸುಜ್ಞಾನಿಗಳ ಮೇಳವನೊಲ್ಲದಾ ಪ್ರಭುವಗಲಿ ತಾನಿರಬಲ್ಲನೆ ಬೇಕಾದಡೀ ಹದನ, ನಿಗಮದಲಿ ಶಾಸ್ತ್ರದಲಿ ಅನುಭಾವಿಗಳ ನುಡಿಯಲಿ ಕೇಳುವುದು, ನಾನಗಲೆ ನಿಮ್ಮುವನೆಂದನಲ್ಲಮ ಜನನಿ ಜನಕರಿಗೆ" ಮಾಯಾರೂಪಿಣಿ ಯಾದ ಶಕ್ತಿ ಜೀವನನ್ನು ಕೆಳಗಡೆಗೆ, ಲೌಕಿಕದ ಕಡೆಗೆ ತಳ್ಳುತ್ತದೆ; ನಿರ್ಮಾಯ ರೂಪಾದ ಭಕ್ತಿ ಜೀವನನ್ನು ಮೇಲುಗಡೆಗೆ ಪರಮನ ಕಡೆಗೆ ಒಯ್ಯುತ್ತದೆ. ಆದುದರಿಂದಲೇ ನಿರ್ಮಾಯನಿಂದ ಮಾಯಾ ಪರಾಜಯವಾಯಿತು. ಹೀಗೆಯೇ ಸುಮತಿ ಮತ್ತು ನಿರ್ಮಳರಿಗೆ ಸಾತ್ವಿಕಾಂಶವು ಮಹಾದೇವಿಯಾಗಿ ಜನಿಸುವುದು. ಸಾತ್ವಿಕ ಶಕ್ತಿಯೇ ಭಕ್ತಿಯ ಪುತ್ತಳಿಯಾದುದರಿಂದ ಮುಕ್ತಿಯುಂಟಾದುದು ಸಹಜವೇ ಆಗಿದೆ. ಸುಮತಿ ಮತ್ತು ನಿರ್ಮಳ ಸಾತ್ವಿಕದ ತಾಯಿತಂದೆಗಳು.

ಜೀವನು ಸಂಸಾರವು ಹೇಯವೆಂದು ಬಗೆದು ಸಾಧನ ಚತುಷ್ಟಯ ಸಂಪನ್ನನಾಗಿ ಮುಕ್ತಿ ಸಾಮ್ರಾಜ್ಯವನ್ನು ಪಡೆಯಬೇಕು. ಇದನ್ನು ಮಹದೇವಿಯಕ್ಕನ ಕಥೆಯಲ್ಲಿ ಕವಿ ನಿರೂಪಿಸಿದ್ದಾನೆ. ತಂದೆತಾಯಿ ಮುಂತಾದವರನ್ನು ಬಿಟ್ಟು ಮುಕ್ತಿಸಾಧನೆಗಾಗಿ ಗುರುವನ್ನು ಹುಡುಕಿ

---

74. ಹರೀಶ್ವರನು ಪ್ರ. ರ. ಯಲ್ಲಿ ಹೇಳಿರುವಂತೆ "ನಾಮಕರಣಂ ಜಗಕ್ಕಲ್ಲಯ್ಯ ನೆಂದಾಗೆ । ಭೂಮಿಯೊಳು ನಿರ್ಮಾಯನೆಂಬ ಪೆಸರಂತಾಗೆ ॥" ಎಂದು ನಿಶ್ಚಯಿಸುವುದೇ ಸಮಂಜಸವಾಗಿದೆ. ಸಂ. ಪ್ರ. ಲೀಲಾಕಾರನು, ಪ್ರ. ಪುರಾಣ ಕರ್ತೃ, ಶ್ರೀಯುತ ಸಿದ್ಧರಾಮಪ್ಪ ಪಾವಟೆ ಮತ್ತು ಶ್ರೀಯುತ ಬಿಳಿಯಂಗಡಿಯವರು ಕಷ್ಟಪಟ್ಟು "ಅಲ್ಲಮ" ಎನ್ನುವುದು ಸಂಸ್ಕೃತವೆಂದು ಸಮರ್ಥಿಸಿದ್ದಾರೆ. ಈ ಸಮರ್ಥನೆ ಸಹಜವಾಗಿ ಕಾಣುವುದಿಲ್ಲ. ಎರಡನೆಯದಾಗಿ ಮಹಮ್ಮದೀಯರ "ಅಲ್ಲಾ, ಅಲಂಫೀರ್" ಎನ್ನುವುದರಿಂದ, ಅಲ್ಲಮ ಬಂದಿರುವುದೆಂದು ಅರಬ್ಬೀ ಭಾಷೆಗೆ ಗಂಟುಹಾಕುವುದಾದರೂ ಅನುಚಿತವೆಂದು ನಮಗೆ ತೋರುತ್ತದೆ. ಬ. ಧ್ಯಾಂ. ದಿ. ಪುಟಗಳು 117–120, ಬ್ರೌನರ ತೆಲುಗು ನಿಘಂಟು ಪುಟ 45.

ಕೊಂಡು ಆಕೆ ಹೊರಟಳು. ತರುವಾಯ ಗೊಗ್ಗಯ್ಯನ ಪ್ರಕರಣವನ್ನು ವರ್ಣನೆ ಮಾಡಿ ಗುರು ಲಿಂಗ ಜಂಗಮ ಸೇವೆ, ಆ ಸೇವೆಗಾಗಿ ಒಂದು ಕಾಯಕ, ಸರಳ ಜೀವನ ಮುಂತಾದುವನ್ನು ತೋರಿಸಿ, ಇವು ಆರಂಭದಲ್ಲಿ ಆವಶ್ಯಕವಾದರೂ ಬಾಹ್ಯ ಗುರು ಲಿಂಗ ಜಂಗಮ ಸೇವೆಯನ್ನು ಮಾಡುತ್ತ ಕಾಲಕಳೆದರೆ ಪ್ರಯೋಜನವಿಲ್ಲೆಂದೂ ಪ್ರಾಣಲಿಂಗ ಜ್ಞಾನವುಂಟಾಗಿ ಅಂತಹ ಜ್ಞಾನದಿಂದ ಮುಕ್ತಿ ದೊರೆಯಬೇಕೆಂದೂ ಕವಿ ಹೇಳಿದ್ದಾನೆ. ಮುಂದೆ ಮುಕ್ತಾಯಕ್ಕನ ಪ್ರಕರಣವಿದೆ. ಮುಕ್ತಾಯಕ್ಕ ಸಾಧನೆಯಲ್ಲಿ ತೊಡಗಿದ್ದು ಸಂಕಟದಲ್ಲಿ ತೊಳಲಿ ಬಾಹ್ಯ ಗುರು ಕಣ್ಮರೆಯಾದ್ದರಿಂದ ವಿಕಳಾವಸ್ಥೆಯನ್ನು ಪಡೆದಿದ್ದಳು. ಗುರು ಹೊರಗಡೆಯಿಲ್ಲ, ಒಳಗಡೆಯೇ ಇದ್ದಾನೆ; ಪರಶಿವನು ತನ್ನ ವಿನೋದಕ್ಕೆ ತಾನೇ ಶಿಷ್ಯನಾದ, ತಾನೇ ಗುರುವಾದ, ತಾನೇ ಮಂತ್ರವಾದ; ಆದುದರಿಂದ ಅಭಿನ್ನಭಾವದಿಂದ ನೋಡಿದರೆ ನಿನಗೆ ನೀನೇ ಗುರುವಲ್ಲದೆ ಬಾಹ್ಯದಲ್ಲಿ ಬೇರೆ ಯಾರೂ ಇಲ್ಲ ಎಂದು ಮುಂತಾಗಿ ಬೋಧಿಸಿ ಪ್ರಭು ಆಕೆಯನ್ನು ಅಂತರ್ಮುಖಿಯಾಗಿ ಮಾಡಿದನು. ಸಿದ್ಧರಾಮನು ಯೋಗ ಸಾಧನೆಯಿಂದ ಪ್ರಾಣಲಿಂಗ ಜ್ಞಾನಯುಕ್ತನಾಗಿದ್ದರೂ ಕರ್ಮ ಮುಕ್ತನಾಗಿರಲಿಲ್ಲ. ಕುರುಹುವಿಡಿದು ಕುರುಹುಗೆಡಬೇಕೆಂಬ ತತ್ವವನ್ನೂ ಇಷ್ಟಲಿಂಗ ಪ್ರಾಧಾನ್ಯದ ಮೂಲಕ ನಿಷ್ಕರ್ಮಿಯಾಗುವ ವೀರಶೈವಮಾರ್ಗವನ್ನೂ ಕವಿ ಅಲ್ಲಿ ತಿಳಿಸಿದ್ದಾನೆ. ಸಿದ್ಧರಾಮನನ್ನು ಕರ್ಮಶೃಂಖಲದಿಂದ ಬಿಡಿಸಿ ಆತನು ಸ್ಥಾವರಲಿಂಗಕ್ಕೆ ಪ್ರತಿಯಾಗಿ ಆತ್ಮಲಿಂಗವನ್ನು ಅಂಗೀಕರಿಸುವಂತೆ ಪ್ರಭು ಮಾಡಿದನು. ಇದು ಸಿದ್ಧರಾಮನ ಕರ್ಮಯೋಗಕ್ಕೆ ಜ್ಞಾನಯೋಗವು ಸೇರಿಕೊಂಡಾಗ ಉಂಟಾಯಿತು. ವೀರಶೈವದಲ್ಲಿ ಕ್ರಿಯಾ ಜ್ಞಾನಗಳೆರಡಕ್ಕೂ ಇರುವ ಪ್ರಾಶಸ್ತ್ಯವು ಇಲ್ಲಿ ವ್ಯಕ್ತವಾಗುವುದಲ್ಲದೆ ಸರ್ವಾಂಗ ಲಿಂಗಿಯಾಗಿ ಕರ್ಮರಹಿತನಾಗುವ ಮರ್ಮವೂ ವ್ಯಕ್ತವಾಗಿದೆ.

ಈ ಕರ್ಮ ಜ್ಞಾನಗಳೆರಡೂ ಭಕ್ತಿಯೋಗ ಸಾಧಕನಾದ ಬಸವೇಶ್ವರನ ಬಳಿಗೆ ಬಂದು ಸೇರಿದುವು. ಬಸವೇಶ್ವರನು ಭಕ್ತನಾಗಿದ್ದರೂ ನಿರ್ಲೇಪ ಭಕ್ತಿಯೆಂಬುದು ಆತನಲ್ಲಿ ತಲೆದೋರಿರಲಿಲ್ಲ. 'ಮಾಡುವೆ, ನೀಡುವೆ' ಎಂಬ ಹಮ್ಮನ್ನು ಬಿಡಿಸಿ ಸ್ತುತಿ ನಿಂದೆಗಳಿಗೆ ಹಿಗ್ಗದಂತೆ ಕುಗ್ಗದಂತೆ ನೋಡಿ

ಲಿಂಗೈಕ್ಯನಾಗುವಂತೆ ಪ್ರಭು ಮಾಡಿದನು. ಬಸವೇಶ್ವರನು ಶೂನ್ಯ ಸಿಂಹಾಸನವನ್ನು ಸ್ಥಾಪಿಸಿ ಅಲ್ಲಮನನ್ನು ಮೂರ್ತಿಗೊಳಿಸಿ ಮೈಮರೆತಿದ್ದು ಬಾಹ್ಯದಲ್ಲಿ ಮಾತ್ರವಲ್ಲ. ಅದು ಅಂತರಂಗದಲ್ಲಿ ಮೊದಲು ನಡೆಯಿತು. ಮೂಲಾಧಾರದಲ್ಲಿರುವ ಕುಂಡಲಿನಿಯನ್ನು ಎಬ್ಬಿಸಿ ಸುಷುಮ್ನಾ ನಾಳ ದಲ್ಲಿರುವ ಷಟ್ಚಕ್ರಗಳ ಷಡ್ಲಿಂಗಗಳನ್ನು ಒಂದರಲ್ಲೊಂದು ಐಕ್ಯಮಾಡಿಸಿ ಕಡೆಗೆ ಶೂನ್ಯ ಮಂದಿರದಲ್ಲಿ ಪರಶಿವನೊಬ್ಬನೇ ಇರುವಂತೆ ನಿರ್ವಿಕಲ್ಪ ಸಮಾಧಿಯನ್ನು ಬಸವೇಶ್ವರನು ಸಾಧಿಸಿದನು.

ಹೀಗೆ ಪ್ರಭುಲಿಂಗಲೀಲೆಯಲ್ಲಿ ಷಟ್ಸ್ಥಲಗಳು ವರ್ಣಿತವಾಗಿರುವುವಲ್ಲದೆ "ಹಿಡಿದ ಸ್ಥಲದಲ್ಲಿ ಷಡುಸ್ಥಲಗಳು" ಕೈಗೂಡುವುವೆಂಬುದನ್ನು ಗೊಗ್ಗಯ್ಯ, ಮುಕ್ತಾಯಕ್ಕ ಮುಂತಾದವರ ಪ್ರಸಂಗಗಳಲ್ಲಿ ಅವರಿಗೆ ಐಕ್ಯಪದವಿ ದೊರೆತುದರ ಮೂಲಕ ಚಾಮರಸನು ತಿಳಿಸಿದ್ದಾನೆ. ಕಡೆಗೆ ಷಟ್ಸ್ಥಲ ಸಾಧನೆಯಿಂದ ಜೀವನ್ಮುಕ್ತನಾದವನು ಮುಂದೆ ಗುರುವಾಗಿ ಹೇಗೆ ಲೋಕೋದ್ಧಾರ ಮಾಡಬೇಕೆನ್ನುವುದನ್ನೂ ಅಲ್ಲಮನ ಉದಾಹರಣೆಯಿಂದ ವ್ಯಕ್ತಪಡಿಸಿದ್ದಾನೆ. ಆದ್ದರಿಂದ ಈ ಕಾವ್ಯದಲ್ಲಿ ಅಂಗಸ್ಥಲ, ಲಿಂಗಸ್ಥಲಗಳ ಮರ್ಮಗಳು ಅಡಕವಾಗಿರುವುವೆಂದೂ, ಷಟ್ಸ್ಥಲ ಏಕೋತ್ತರ ಶತಸ್ಥಳ ಗಳು ಪ್ರತಿಪಾದಿತವಾಗಿರುವುವೆಂದೂ ಹೇಳಬಹುದಾಗಿದೆ.

**X. ಪ್ರಭುಲಿಂಗಲೀಲೆಯ ಭಾಷಾಂತರಗಳು.**—ಸಂಸ್ಕೃತಾದಿ ಭಾಷೆಗಳಿಂದ ಕನ್ನಡಕ್ಕೆ ಪರಿವರ್ತಿತವಾದ ಗ್ರಂಥಗಳು ನಮ್ಮ ಸಾಹಿತ್ಯದಲ್ಲಿ ಸಾಕಾದಷ್ಟು ಇವೆ. ನಮ್ಮ ಕನ್ನಡ ಗ್ರಂಥಗಳು ಇತರ ಭಾಷೆಗಳಿಗೆ ಪರಿವರ್ತಿತವಾಗಿವೆಯೆ ಎಂಬುದನ್ನು ಪರೀಕ್ಷಿಸಿದ್ದಾದರೆ, ಅವುಗಳ ಸಂಖ್ಯೆ ಬಹಳ ಕಡಮೆಯೆಂದೇ ಹೇಳಬೇಕು. ಆದರೆ ಪ್ರಭುಲಿಂಗಲೀಲೆ ಮಾತ್ರ ಸಂಸ್ಕೃತ, ತೆಲುಗು ಮತ್ತು ತಮಿಳು ಭಾಷೆಗಳಿಗೆ ಪರಿವರ್ತನ ಹೊಂದಿರು ವುದು ಕನ್ನಡಿಗರಿಗೆ ಒಂದು ಹೆಮ್ಮೆಯ ವಿಷಯ. ತೆಲುಗಿನಲ್ಲಿ ಎರಡು ಪ್ರಭುಲಿಂಗಲೀಲೆಗಳಿವೆ. ಒಂದನ್ನು ಪಿಡುಪರ್ತಿ ಸೋಮನಾಥನು ದ್ವಿಪದಿ ಯಲ್ಲಿ ಬರೆದಿದ್ದಾನೆ. ಇನ್ನೊಂದನ್ನು ಪಾಲಸಾರ್ಯ ಪುತ್ರನಾದ ಪಿಡುಪರ್ತಿ ಬಸವಕವಿ ಚಂಪೂ ಕಾವ್ಯವಾಗಿ ಬರೆದಿದ್ದಾನೆ. ತಿರುವಣ್ಣಾಮಲೆಯ ಶಿವಪ್ರಕಾಶ ಸ್ವಾಮಿಗಳು ಪ್ರಭುಲಿಂಗಲೀಲೆಯನ್ನು ತಮಿಳಿನಲ್ಲಿ ಬರೆ

ದಿದ್ದಾರೆ. ಕನ್ನಡದ ಪ್ರಭುಲಿಂಗಲೀಲೆಯನ್ನು ವಿಜಯನಗರದ ದೊರೆಯಾದ ಇಮ್ಮಡಿ ಪ್ರೌಢದೇವರಾಯನು ತೆಲುಗು ಮತ್ತು ತಮಿಳು ಭಾಷೆಗಳಿಗೆ ಪರಿವರ್ತನ ಮಾಡಿಸಿದನೆಂದು ಇ. ಪಿ. ರೈಸ್ ಅವರು ಹೇಳಿದ್ದಾರೆ.[75] ಪಿಡುಪರ್ತಿ ಸೋಮನಾಥ ಕವಿ ಮತ್ತು ಪಾಲನಾರ್ಯ ಪುತ್ರ ಬಸವ ಕವಿ ಇವರ ಕಾಲವು[76] ಸುಮಾರು ಕ್ರಿ. ಶ. ೧೫೨೦ ಆಗುವುದರಿಂದಲೂ, ಶಿವ ಪ್ರಕಾಶ ಸ್ವಾಮಿಗಳ ಕಾಲವು[77] ಸುಮಾರು ಕ್ರಿ. ಶ. ೧೬೫೦ ಆಗುವುದರಿಂದಲೂ ಕ್ರಿ. ಶ. ೧೪೧೯–೧೪೪೬ರಲ್ಲಿದ್ದ ಇಮ್ಮಡಿ ಪ್ರೌಢದೇವರಾಯನು ಮೇಲೆ ಹೇಳಿದ ತೆಲುಗು ಮತ್ತು ತಮಿಳು ಕವಿಗಳಿಗೆ ಪ್ರೋತ್ಸಾಹಕನಾಗಿದ್ದನೆನ್ನುವುದು ಅಸಂಭವನೀಯವಾಗಿರುತ್ತದೆ.

ಸಂಸ್ಕೃತ ಪ್ರಭುಲಿಂಗಲೀಲೆ ಭವಿಷ್ಯತ್ಪುರಾಣಾಂತರ್ಗತವಾದುದೆಂದು ಅದರಲ್ಲಿ ಹೇಳಿದೆ. ಆದರೆ ನಾವು ನೋಡಿದ ಭವಿಷ್ಯತ್ಪುರಾಣದಲ್ಲಿ ಪ್ರಭುಲಿಂಗಲೀಲೆಯ ಕಥೆ ಇಲ್ಲ. ಸಂಸ್ಕೃತ ಪ್ರಭುಲಿಂಗಲೀಲೆ ಕ್ರಿ. ಶ. ೧೬ನೆಯ ಶತಮಾನದಲ್ಲಿ ರಚಿತವಾಗಿದ್ದಿರಬಹುದು. ಇದನ್ನು ಚೆನ್ನಬಸವ ಪುರಾಣ ಕರ್ತೃವಾದ ಹಂಪೆಯ ವಿರೂಪಾಕ್ಷಪಂಡಿತನು ಬರೆದನೆಂದು ಪಂಡಿತ ಶ್ರೀ ಗುರುಸಿದ್ಧ ಶಾಸ್ತ್ರೀ ಉಜ್ಜಯಿನೀ ಅವರು ಹೇಳಿದ್ದಾರೆ.[78] ಆದರೆ ಪಿಡುಪರ್ತಿ ಸೋಮನಾಥನ ಗ್ರಂಥಕ್ಕೂ ಸಂಸ್ಕೃತ ಪ್ರಭುಲಿಂಗಲೀಲೆಗೂ ಬಹಳ ಸಾಮ್ಯವಿರುವುದರಿಂದಲೂ, ಅನೇಕ ಕಡೆಗಳಲ್ಲಿ ಸಂಸ್ಕೃತ ಸಮಾಸಪದ ಪುಂಜಗಳೂ ಪದ್ಯಗಳೂ ಸಮಾನವಾಗಿರುವುದರಿಂದಲೂ ಒಂದು ವೇಳೆ ಈ ಸೋಮನಾಥನೇ ಸಂಸ್ಕೃತದಲ್ಲಿಯೂ ಬರೆದಿರಬಹುದೇ ಎಂಬ ಅನುಮಾನವು ನಮಗೆ ತಲೆದೋರುತ್ತದೆ. ಇದು ಹೀಗೆಯೇ ಸರಿ ಎಂದು ಹೇಳುವುದು ಸದ್ಯದಲ್ಲಿ ಸಾಧ್ಯವಿಲ್ಲ.

**XI. ಭಾಷಾಂತರಗಳ ವಿಮರ್ಶೆ.**— ಪ್ರಭುಲಿಂಗಲೀಲೆ ಹೀಗೆ ಮೂರು ಭಾಷೆಗಳಿಗೆ ಪರಿವರ್ತನ ಹೊಂದಿರುವುದಾದರೂ, ಚಾಮರಸನು ಹೇಳಿದ ಕಥೆಯನ್ನು ಬಹುಮಟ್ಟಿಗೆ ಆ ಕವಿಗಳು ಅನುಸರಿಸಿರುವುದಾದರೂ,

---

75. Kan. Lit. ಪುಟ 68. 76. Tel. Lit. ಪುಟ 52, 77. 77. ತಮಿಳು ಪ್ರಭುಲಿಂಗಲೀಲೆ ಪುಟ 207, ಪದ್ಯ 23ರಲ್ಲಿ ಅದು ರಚಿತವಾದ ಕಾಲವನ್ನು ಶಾ. ಶ. ೧೫೭೪ ಎಂದು ಕೊಟ್ಟಿದೆ. 78. ಬ. ಧ್ವಾಂ. ದಿ., ಪುಟಗಳು 18, 131–2.

ಆ ಕವಿಗಳು ತಮ್ಮ ಪ್ರಭಾವ ಮುದ್ರೆಯನ್ನು ತಮ್ಮ ಗ್ರಂಥಗಳಲ್ಲಿ ಒತ್ತದೆ ಬಿಟ್ಟಿಲ್ಲ. ಕನ್ನಡ ಪ್ರಭುಲಿಂಗಲೀಲೆಯೊಡನೆ ಈ ಗ್ರಂಥಗಳನ್ನು ಹೋಲಿಸಿ ದೀರ್ಘ ವಿಮರ್ಶಾತ್ಮಕ ಲೇಖನವನ್ನು ಇಲ್ಲಿ ಬರೆಯುವುದು ಅನುಚಿತ ಮತ್ತು ಅಪ್ರಕೃತ. ಆದರೆ ಒಟ್ಟಿನಲ್ಲಿ ಕೆಲವು ವಿಚಾರಗಳನ್ನು ಮಾತ್ರ ಇಲ್ಲಿ ಸ್ಥೂಲವಾಗಿ ಹೇಳಬಹುದು. ತಮಿಳು ಗ್ರಂಥದಲ್ಲಿ ಕನ್ನಡದ ಗ್ರಂಥ ದಲ್ಲಿರುವುದಕ್ಕಿಂತ ಹೆಚ್ಚಾಗಿ ಕಾವ್ಯಗುಣವಿದೆ. ಸಂದರ್ಭೋಚಿತವಾದ ವರ್ಣನೆಗಳೂ ಹೃದಯಂಗಮವಾದ ಉಪಮಾನಗಳೂ ತಮಿಳು ಗ್ರಂಥದ ಸ್ವಾರಸ್ಯವನ್ನು ಹೆಚ್ಚಿಸಿವೆ. ತೆಲುಗು ಮತ್ತು ಸಂಸ್ಕೃತ ಪ್ರಭುಲಿಂಗ ಲೀಲೆಗಳಲ್ಲಿ ಅಲ್ಲಮಪ್ರಭುವಿನ ಮೂರ್ತಿಮಹತ್ವವು ಚೆನ್ನಾಗಿ ವ್ಯಕ್ತ ವಾಗಿಲ್ಲ. ಆ ಗ್ರಂಥಕಾರರಿಗೆ ಪ್ರಭುವಿನ ಮೂರ್ತಿಸ್ವರೂಪವೇ ಗ್ರಹಿಕೆ ಯಾಗಿಲ್ಲ. ಮಾಯೆ ತನ್ನ ಪ್ರತಾಪವನ್ನು ಆಡಿದ ಸನ್ನಿವೇಶದಲ್ಲಿ "ಯನ ವಿನಿಯಲ್ಲಮ ಯಾಗ್ರಹಂ ಬೆಂತ", "ಅನಿನ ಯಲ್ಲಮಪ್ರಭುಂಡಾಗ್ರ ಹಂಬುನ ನಿಟ್ಲನಿಯೆ", "ಪ್ರಭುಃ ಸಾಗ್ರಹ ಏವಮೂಚೇ" ಎಂದು ತೆಲುಗು ಮತ್ತು ಸಂಸ್ಕೃತ ಗ್ರಂಥಗಳಲ್ಲಿ ಬರೆದಿದ್ದಾರೆ. ಶಾಂತಚಿತ್ತನೂ ಹಸನ್ಮುಖಿಯೂ ಆದ ಅಲ್ಲಮನನ್ನು ಚಾಮರಸನು ಸೊಗಸಾಗಿ ಚಿತ್ರಿ ಸಿದ್ದಾನೆ. 'ಆಗ್ರಹ' ಎಂಬ ಪದವನ್ನು ಪ್ರಭುವಿಗೆ ಆರೋಪಿಸಿ ಅವನು ಬರೆದಿಲ್ಲ. ಎರಡನೆಯದಾಗಿ ಮುಕ್ತಾಯಕ್ಕನಿಗೆ ಅಜಗಣ್ಣನ ವಿಯೋಗ ವ್ಯಥೆಯನ್ನು ಬಿಡಿಸಿದಮೇಲೆ ಪ್ರಭುವಿನ ವಾತ್ಸಲ್ಯಗರ್ಭಿತವಾದ ಕರುಣ ರಸ ಪ್ರದರ್ಶನವನ್ನು ಚಾಮರಸನು ಸೊಗಸಾಗಿ ತೋರಿಸಿದ್ದಾನೆ. "ಎನಗಿನ್ನು ಗತಿಮತಿಯಾವುದೆಂದೆನುತಲ್ಲಮಪ್ರಭುದೇವರಿಗೆ ಮುಕ್ತಾಯಿ ವಿನ್ನೈಸಿದಳು ಭಕ್ತಿಯಲಿ." ಆಗತಾನೆ ಕಣ್ಣೀರು ಆರಿ ಶಾಂತಿ ನೆಲಸುತ್ತಿದ್ದ ಮುಕ್ತಾಯಿಗೆ ಅಲ್ಲಮಪ್ರಭು "ಅಕ್ಕ ಕೇಳಾ ನಿನ್ನ ಹೆಸರಿಗೆ ತಕ್ಕ ಬಯಕೆಯ ನೀನು ಬಯಸಿದೆ, ಮಿಕ್ಕ ಭವಭಾರಿಗಳು ಬಲ್ಲರೆ ಲಿಂಗಮಾರ್ಗ ವನು" ಎಂದು ಹೇಳಿದಂತೆ ಚಾಮರಸನು ಚಿತ್ರಿಸಿ ಮುಂದೆ ಮಾಡುವ ಉಪದೇಶಕ್ಕೆ ಆಕೆಯನ್ನು ಹೇಗೆ ಒಲಿಸಿಕೊಂಡನೆನ್ನುವುದನ್ನು ತೋರಿ ಸಿದ್ದಾನೆ. ಪ್ರಭುವಿನಲ್ಲಿದ್ದ ಆ ದೊಡ್ಡ ಗುಣವನ್ನು ಅರಿಯದೆ ತೆಲುಗು ಮತ್ತು ಸಂಸ್ಕೃತ ಗ್ರಂಥಕಾರರು ಆ ಮಾತುಗಳನ್ನೇ ಬಿಟ್ಟುಬಿಟ್ಟಿದ್ದಾರೆ. ಇದರಂತೆ ಇನ್ನೂ ಉದಾಹರಣೆಗಳನ್ನು ಕೊಡಬಹುದು.

ಮೂರನೆಯದಾಗಿ ಚಾಮರಸನು ಹಲವು ಕಡೆಗಳಲ್ಲಿ ಸೊಗಸಾ ಉಪಮಾನಗಳನ್ನೂ ರೂಪಕಗಳನ್ನೂ ಕೊಟ್ಟಿದ್ದಾನೆ. ಅವುಗಳು ತೆಲುಗು ಮತ್ತು ಸಂಸ್ಕೃತ ಗ್ರಂಥಗಳಲ್ಲಿಲ್ಲ. ಉದಾಹರಣೆಗಾಗಿ ಇಲ್ಲಿ ಕೆಲವನ್ನು ಕೊಟ್ಟಿವೆ: "ಉದಕದಲಿ ಮುಳುಗಿದ ಸುಣ್ಣಕಲ್ಲಿಂತಾಗಿ ಕುದಿವುತ", "ಸಿದ್ಧರಾಮ ಶಶಾಂಕನೆಂಬ ಮಹಾಮನೋಹರನು ಉದ್ಧರಿಸಹುಟ್ಟಿದನು ಯೋಗಸಮುದ್ರವನು", "ಮಲಯಜದ ಮರಗಾಳಿ ಸೋಂಕಿಸಲುಳಿದ ಮರ ಪರಿಮಳಿಸುವಂತಿರೆ", "ದೇವ ನಿಮ್ಮವರುಗಳ ಪರಿಯನು ನೀವೆ ಬಲ್ಲಿರಿ, ಹಾವಿನಡಿಯನು ಹಾವುಗಳು ನೆರೆಬಲ್ಲವಲ್ಲದೆ ನಮಗೆ ಗೋಚರವೆ", "ಸೂಲ ಸಂಕಲೆಗಡಿದು ಕನಕದ ಕೋಳವನು ಕಾಲಿಂಗೆ ಕೀಲಿಪ ಕಾಳು ಮತಿಯವನಂತೆ"—ಎಂದು ಮುಂತಾದುವೆಲ್ಲ ಆ ಗ್ರಂಥಗಳಲ್ಲಿ ಇಲ್ಲ.

ಹೀಗೆ ಚಾಮರಸನ ಕೃತಿಯನ್ನು ಭಾಷಾಂತರಗಳೊಂದಿಗೆ ಹೋಲಿಸಿ ಸೋಡಿದ್ದಾದರೆ ಕನ್ನಡ ಕವಿಯ ಕೀರ್ತಿ ಹೆಚ್ಚುವುದಾಗಿದೆಯೆ ಹೊರತು ಕಡಮೆಯಾಗುವ ಹಾಗಿಲ್ಲ. ತಮಿಳು ಪ್ರಭುಲಿಂಗಲೀಲೆ ಕೆಲವು ವರ್ಣನಾ ಭಾಗಗಳಲ್ಲಿ[79] ಉತ್ತಮವಾಗಿರುವುದು ನಿಜ. ಆದರೆ ಕಥಾ ಸರಣಿಯಲ್ಲಿ ಚಾಮರಸನು ತೋರಿಸಿರುವ ಸಾರಳ್ಯ, ಪಾತ್ರ ಗುಣನಿರೂಪಣದಲ್ಲಿ ತಂದಿರುವ ಒಂದು ಸೊಗಸು ತಮಿಳು ಗ್ರಂಥದಲ್ಲಿಲ್ಲ. ಶಿವಪ್ರಕಾಶ ಸ್ವಾಮಿಗಳು ತಮಿಳು ಸಾಹಿತ್ಯದಲ್ಲಿ ಅತ್ಯುತ್ತಮ ವರ್ಗದ ಕವಿಗಳೆನಿಸಿದ್ದಾರೆ. ಆದುದರಿಂದ ಅವರ ಕೈಗೆ ಸಿಕ್ಕಿದ ಪ್ರಭುಲಿಂಗಲೀಲೆಗೆ ಬೇರೊಂದು ರೀತಿ ಒಂದು ಹೊಸದಾದ ಕಳೆ ಬಂದಿರುವುದಾದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ.

**XII. ಉಪಸಂಹಾರ.**—ಪ್ರಭುಲಿಂಗಲೀಲೆ ಕನ್ನಡ ಸಾಹಿತ್ಯದಲ್ಲಿ ಒಂದು ಉತ್ತಮವಾದ ಕಾವ್ಯವಾಗಿದೆ. ಅದಕ್ಕಿಂತ ಪ್ರೌಢವಾದ ಗ್ರಂಥಗಳನ್ನು ವೀರಶೈವ ಕವಿಗಳಲ್ಲಿಯೆ ಇತರರು ರಚಿಸಿರಬಹುದು. ಆದರೆ ಯೋಗಿಶ್ರೇಷ್ಠನಾದ ಒಬ್ಬ ಅವತಾರ ಪುರುಷನ ಜೀವನ ಚರಿತ್ರೆಯನ್ನೂ

---

79. ಮಾಯೆ ಕಾಡನ್ನು ಹೊಕ್ಕಾಗ, ಕಾಡಿನ ವರ್ಣನೆ, ಇತ್ಯಾದಿ. ದುರ್ವಾಸ ಮಹರ್ಷಿಗೆ ಋಷಿಗಳು ಬಿನ್ನೈಸುವಾಗ ಚಿತ್ರದ ದೀಪದಂತೆ ಸ್ಥಿರವಾಗಿದ್ದ ನಮ್ಮ ಮನಸ್ಸು ಗಾಳಿಗೊಡ್ಡಿದ ದೀಪದಂತೆ ಏಕೆ ಚಂಚಲವಾಯಿತು—ಎಂದು ಕೇಳುತ್ತಾರೆ. ಇಂತಹ ಒಳ್ಳೆಯ ಉಪಮಾನಗಳು ತಮಿಳು ಗ್ರಂಥದಲ್ಲಿ ದೊರೆಯುತ್ತವೆ.

ಶನ ಬೋಧೆಗಳನ್ನೂ ಸರಸವಾಗಿ ಕಾವ್ಯರೂಪದಲ್ಲಿಡುವುದು ಹೇಗೆಂಬು ವನ್ನು ಚಾಮರಸನು ತೋರಿಸಿರುವಂತೆ ಇತರ ವೀರಶೈವ ಪುರಾಣ ಕವಿಗಳು ತೋರಿಸಿಲ್ಲ. ಉದಾತ್ತ ನೀತಿ ಧ್ಯೇಯವು ಉತ್ತಮ ರಸಕಾವ್ಯದ ಮುಖ್ಯ ಲಕ್ಷಣವೆಂದು ನಾವು ಹೇಳಬಹುದಾದರೆ ಪ್ರಭುಲಿಂಗಲೀಲೆ ಅಂತಹ ಉತ್ತಮ ರಸಕಾವ್ಯವಾಗಿದೆ, ಮತ್ತು ಅದರ ಸ್ಥಾನವು ಬಹಳ ಉನ್ನತವಾಗಿಯೂ ಇದೆ.

[ತಮಿಳು ಪ್ರಭುಲಿಂಗಲೀಲೆಗೆ ಅರ್ಥವಿವರಣೆ ಮಾಡಿ ನನ್ನ ಮಿತ್ರರಾದ ಶ್ರೀಯುತ ಎಂ. ಪಿ. ಸೋಮಸುಂದರಂ ಪಿಳ್ಳೆ, ಎಂ.ಎ., ಎಲ್.ಟಿ. ಅವರು ನನಗೆ ಉಪಕಾರ ಮಾಡಿದ್ದಾರೆ. ಪಿಡುಪರ್ತಿ ಸೋಮನಾಥನ ಪ್ರಭುಲಿಂಗಲೀಲೆಯನ್ನು ಕೆಲವು ದಿವಸಗಳ ಮಟ್ಟಿಗೆ ಕಳುಹಿಸಿಕೊಟ್ಟು ಕಾಕಿನಾಡದ ಶ್ರೀಯುತ ಭಂಡಾರು ತಮ್ಮಯ್ಯನವರು ಉಪಕಾರಮಾಡಿದ್ದಾರೆ. ಆಂಧ್ರ ಸಾಹಿತ್ಯ ಪರಿಷತ್ತಿನ ಮ್ಯಾನೇಜರ್ ಶ್ರೀಯುತ ಕೊಟ್ಟ ಪಲ್ಲಿ ಸೂರ್ಯಾರಾವ್ ಅವರು ಮೇಲಿನ ಪ್ರಭುಲಿಂಗಲೀಲೆಯನ್ನು ದೊರೆಕಿಸಿಕೊಡುವುದರ ಮೂಲಕವೂ ಇತರ ವಿಧಗಳಲ್ಲಿಯೂ ಸಹಾಯಮಾಡಿದ್ದಾರೆ. ನಾನು ಈ ಮಹನೀಯ ರಿಗೆಲ್ಲ ಬಹಳ ಕೃತಜ್ಞನಾಗಿದ್ದೇನೆ. ಮದ್ರಾಸಿನ ಮತ್ತು ಮೈಸೂರಿನ ಓರಿಯಂಟಲ್ ಲೈಬ್ರರಿಗಳಲ್ಲಿರುವ ಪುಸ್ತಕಗಳನ್ನು ನೋಡುವುದಕ್ಕೆ ಅವಕಾಶಕೊಟ್ಟ ಆ ಸಂಸ್ಥೆಗಳ ಅಧಿಕಾರಿಗಳಿಗೂ ನಾನು ಬಹಳ ಕೃತಜ್ಞನಾಗಿದ್ದೇನೆ.]

ಎಂ. ಆರ್. ಶ್ರೀ.

---

# ಪರಿಶಿಷ್ಟ I

## (i)

ಕಂ॥ ಶ್ರೀ ಗುರು ಗುಹೇಶ ಶರಣಂ।
ರಾಗ ದ್ವೇಷಾದಿ ವಿರಹಿತಾಂತಃಕರಣಂ॥
ಯೋಗ ಮತಾಚರಣಂ ನಿಖಿ।
ಳಾಗಮ ನಿಪುಣಂ ಸನಾಮ ಸೀಮಂ ಚಾಮಂ॥

ಕಂ॥ ಶ್ರೀ ಗುರು ಗುಹೇಶ್ವರನ ದಿ।
ವ್ಯಾಗಮ ಲೀಲೆಯಲಿ ಸಂದ ಗತಿಗಳ ಮೊದಲೊಳ್॥
ಕೈಗೆಯ್ದು ಸೂಚಿತಾರ್ಥದ।
ಭಾಗೆಯ ನಾ ನೊರೆವೆ ನಿಳೆಗೆ ವಸ್ತುಕದಿಂದಂ॥

ಮ॥ ವಿನುತ ಶ್ರೀ ಪ್ರಭುಲಿಂಗ ಲೀಲೆಯೆನಲುಂ ಮೇಣ್ ಲಿಂಗ
ಲೀಲಾಬ್ಧಿಯೆಂ।
ದೆನಲುಂ ಭಾವಿಸುವಂದು ಲೀಲೆಯೆನಲುಂ ಬಲ್ಲರ್ಗೆ
ತತ್ತ್ರೈವಿಧ॥
ಸ್ವನಮೇಕಾರ್ಥತೆಯೆಂದು ಲಾಲಿಸಿ ಮಹೋತ್ಸಾಹಂಗಳಂ
ತಾಳ್ದು ಸ।
ಜ್ಜನಮೆಲ್ಲಂ ಸುಖಿಸುತ್ತಮಿರ್ಕೆ ಮೆಱೆವಾ ಚಂದ್ರಾರ್ಕ
ತಾರಂಬರಂ॥

ಕಂ॥ ಪ್ರಭು ಲಿಂಗ ಲೀಲೆಗೊಪ್ಪಂ।
ಶುಭವಿಪ್ಪತ್ತೈದು ಗತಿಗಳಂತಾ ಗತಿಯೊಳ್॥
ಪ್ರಭು ಲಿಂಗ ಲೀಲೆ ಗಗನ।
ಪ್ರಭೆ ಕಿಱು ಗನ್ನಡಿಯೊಳೆಸೆವ ತೆಱದಿಂದೆಸೆಗುಂ॥

ಕಂ॥ ಮೊದಲ ಗತಿಯೊಳ್ ಪುರಾತರ ।
ಪದ ಪದ್ಮ ಸ್ತುತಿ ಸಮಸ್ತ ಶಕ್ತ್ಯ ದಿಶಾ ॥
ಸ್ಪದ ದೇವತ ಭಾಷಾವಳಿ ।
ಮುದದಿಂ ಪ್ರಭು ಲಿಂಗ ಲೀಲೆಯೊಳ್ ಪ್ರಕಟಿಸುಗುಂ ॥

## (ii) ಪೀಠಿಕಾ ಪ್ರಕರಣದ ಕಥೆ

1. ನಿರ್ಮಾಯನೆಂಬ ಗಣಾಧಿಪನು ಈಶ್ವರಾಸ್ಥಾನಕ್ಕೆ ಬರುತ್ತ ಸುರಕನ್ಯೆಯೊಬ್ಬಳನ್ನು ಮೋಹದಿಂದೀಕ್ಷಿಸಲು ನೀವಿಬ್ಬರೂ ಭೂಮಿಗೆ ಹೋಗಿ ಸುಖಪಟ್ಟು ಬನ್ನಿರೆಂದು ಈಶ್ವರನು ಹೇಳಿ ಕಳುಹಿಸಿದಂತೆಯೂ, ಅದರಂತೆ ಅಲ್ಲಮನ ಅವತಾರವಾದಂತೆಯೂ ಹರೀಶ್ವರನು ಪ್ರ. ದೇ. ರಗಳೆಯಲ್ಲಿ ಬರೆದಿದ್ದಾನೆ. ಇಲ್ಲಿ ಪಾರ್ವತೀಪರಮೇಶ್ವರರ ಸಂಭಾಷಣೆ ಇಲ್ಲ.

2. ಈಶ್ವರಾಸ್ಥಾನಕ್ಕೆ ಎಲ್ಲರೂ ಬಂದಂತೆ ಅಲ್ಲಮನೂ ಬರಲು ಈಶ್ವರನೆದ್ದು ತನ್ನ ಸಿಂಹಾಸನವನ್ನು ಆತನಿಗೆ ಬಿಟ್ಟು ಮರ್ಯಾದೆಮಾಡಿದಂತೆಯೂ ಆತನು ಹೊರಟುಹೋದಮೇಲೆ ಪಾರ್ವತಿ ವಿಸ್ಮಿತಳಾಗಿ "ಈಗ ಬಂದವನಾರು? ನೀನು ಕೂಡ ಎದ್ದು ಮರ್ಯಾದೆಮಾಡಿದೆಯಲ್ಲ!" ಎಂದು ಕೇಳಿದಂತೆಯೂ, ಆಗ ಈಶ್ವರನು ಅಲ್ಲಮನ ವೃತ್ತಾಂತವನ್ನು ತಿಳಿಸಿದಂತೆಯೂ, ಅನಂತರ ಪಾರ್ವತಿ ಪೈಜೆಯನ್ನು ನುಡಿದಂತೆಯೂ ತೆ. ಪ್ರ. ಲೀ. ಗಳಲ್ಲಿದೆ.

3. ಈಶ್ವರಾಸ್ಥಾನದಲ್ಲಿ ಪರಮೇಶ್ವರನು ನಂದೀಶ್ವರನನ್ನು ಕುರಿತು "ನಿನಗೆಯಾನು ಸರಿಯೆ, ಪರಮ ಸ್ವತಂತ್ರ" ಎಂದು ಹೊಗಳಲು "ನಿರ್ಮಾಯನಿರದೆಯಾಕ್ಷೇಪಿಸುತ ನಿನಗಧಿಕರಿಲ್ಲೆಂಬ ಬಿರುದೆಂದು ಪೋದುದು" ಎಂದು ಕೇಳಿದನು. ಆಗ ಪಾರ್ವತಿ ತಾನು ಬಾಯಿಹಾಕಿ ಈಶ್ವರನು ಹೇಳಿದ್ದು ಸರಿಯೆಂದು ವಾದಿಸತೊಡಗಿದಳು. "ನಿನಗೆ ನಿರ್ಮಾಯನೆಂಬ ಬಿರುದೇಕೆ, ಎಲ್ಲರ ಗುಣಂಗಳಂ ಬಲ್ಲೆ. ತೋಱಿಂದರಿಲ್ಲಿಯೆ ತೋಱುವೆನು" ಎಂದು ಮುಂತಾಗಿ ಪಾರ್ವತಿ ಹಂಗಿಸಲು, ನಿರ್ಮಾಯನು ತಾನು ಮಾಯಾವಶನಾಗುವುದಿಲ್ಲೆಂದು ಶಪಥಮಾಡಿದನು. ಆಗ ಮಾಯೆಯನ್ನು ಸ್ಮರಿಸಿ ಪಾರ್ವತಿ ಎದುರಿಗೆ ನಿಲ್ಲಲು ಆಸ್ಥಾನದಲ್ಲಿ

ಮೋಹದ ಜೊಮ್ಮು ಉಂಟಾಯಿತು. ನಿರ್ಮಾಯನು "ಈಶತ್ವವನೆಯ್ದಿ ನೋಡುತಿರೆ" ಈಶ್ವರನು ನಕ್ಕು "ಕರದ ಮಾಯಾ ವಿಲಾಸದ ಸೋಟ ನಿನಗಾಯ್ತು" ಆದ್ದರಿಂದ ಭೂಮಿಗೆ ಹೋಗಿ ಮಾಯೆಯನ್ನು ಗೆದ್ದು ಬಾ ಎಂದು ಹೇಳಿ ಕಳುಹಿಸುವನು ಎಂದು—ಮುಂತಾಗಿ ಶಿ. ಚಿಂ.ಯಲ್ಲಿದೆ.

4. ಈಶ್ವರನ ಸಭೆಯಲ್ಲಿ ಮೊದಲು ಪಾರ್ವತೀಪರಮೇಶ್ವರರಿಗೆ ಸಂಭಾಷಣೆಯಾಗುವುದು. ಈಶ್ವರನು ಭಕ್ತಿಯಲ್ಲಿ ನಿಷ್ಕಾಮ ಸಕಾಮ ಎಂದು ಇರುವುದಾಗಿಯೂ, ನಾಮ ರೂಪ ಕ್ರಿಯೆಗಳನ್ನು ಗೆದ್ದು ಕಾಮ ವರ್ಜಿತರಾದರೆ ಮುಕ್ತಿಯನ್ನು ಪಡೆಯಬಹುದೆಂಬದಾಗಿಯೂ ಹೇಳುವನು. ಆಗ ಪಾರ್ವತಿ ಈ ಜಗತ್ತನ್ನೆಲ್ಲ ನಾನೇ ಆವರಿಸಿರುವೆನು; ನನ್ನ ಮಗನಾದ ಕಾಮನು ಅಜೇಯನು. ಇನ್ನು ನಮ್ಮ ಆಜ್ಞೋಲ್ಲಂಘನೆ ಮಾಡಿ ನಿಷ್ಕಾಮವನ್ನು ಆಚರಿಸುವವರು ಯಾರು? ಎಂದು ಆಲೋಚಿಸುತ್ತಿರಲು ಈಶ್ವರನು ಅದನ್ನು ತಿಳಿದು ಅಲ್ಲಮನನ್ನು ಸ್ಮರಿಸಿದಂತೆಯೂ ಅಲ್ಲಮನು ಸಭೆಗೆ ಬಂದಂತೆಯೂ ಸಂ. ಪ್ರ. ಲೀ. ಯಲ್ಲಿದೆ. ಮುಂದೆ ಕಥೆ ತೆ. ಪ್ರ. ಲೀ. ಗಳಲ್ಲಿರುವಂತೆ ಇದೆ.

5. ಈಶ್ವರನ ಸಭೆಗೆ ಅಲ್ಲಮನು ಬರಲು ಸಭೆಯಲ್ಲಿದ್ದವರು "ಭ್ರಾಂತ ಮಾಯಾ ಕೋಳಾಹಳ" ಎಂದು ಮುಂತಾಗಿ ಹೊಗಳುವರು. ಆಗ ಪಾರ್ವತಿ—ಪ್ರಭುವಿನಲ್ಲಿ ಈ ಗುಣಗಳಿವೆಯೆ? ಎಂದು ಈಶ್ವರನನ್ನು ಕೇಳುವಳು. ಆತನು ಇವೆ ಎಂದು ಹೇಳಿ ಪ್ರಭುವನ್ನು ತಾನೂ ಹೊಗಳುವನು. ಆಗ ಪಾರ್ವತಿ ಕೋಪಗೊಂಡು ಹಿಂದೆ ಭೃಂಗೀಶನ ವಿಚಾರದಲ್ಲಿಯೂ ಅವನಿಗೆ ಸಹಾಯಕನಾದೆ; ಈಗಲೂ ಹೀಗೆ ಹೊಗಳುತ್ತೀಯೆ. ಈ ಪ್ರಭುವನ್ನು ಭೂಮಿಗೆ ಕಳುಹಿಸು. ಇವನ ಸಾಮರ್ಥ್ಯವನ್ನಾದರೂ ನಾನು ನೋಡುತ್ತೇನೆ ಎಂದು ಹೇಳುವಳು. ಈಶ್ವರನು ರಂಭಾ ಶುಕರ ಕಥೆಯನ್ನು ಆಕೆಗೆ ಹೇಳಿ, ಹಾಗೆಯೆ ನಿನಗೆ ಸೋಲಾಗುವುದೆಂದು ತಿಳಿಸುವನು. ಆಕೆ ಕೇಳದೆ ಹಠಮಾಡುವಳು. ಆಗ ಈಶ್ವರನು ನಿನ್ನಂಶವಾದ ಮಾಯೆಯನ್ನು ಭೂಮಿಗೆ ಕಳುಹಿಸಿ ಪರೀಕ್ಷಿಸು ಎಂದು ಹೇಳಿ ಪ್ರಭುವಿನ ಕೊರಳಿಗೆ ಹೂಮಾಲೆಯನ್ನು ಹಾಕಿ ಅವನನ್ನು ಕಳುಹಿಸಿಕೊಡುವನು—ಎಂದು ಮುಂತಾಗಿ ಪ್ರ. ಪುರಾಣದಲ್ಲಿದೆ.

6. ತಮಿಳು ಪ್ರ. ಲೀ. ಯಲ್ಲಿ ಚಾಮರಸನ ಕನ್ನಡ ಪ್ರ. ಲೀ. ಯಲ್ಲಿ ಹೇಳಿದಂತೆಯೆ ಇದೆ.

7. ಈಶ್ವರನ ಸಭೆಗೆ ಅಲ್ಲಮನು ಬರಲು ಚಂಡೇಶನು ಆತನನ್ನು "ಮಾಯಾ ಕೋಳಾಹಲ ಮಾಯಾ ಮದ ಮರ್ದನ" ಎಂದು ಮುಂತಾಗಿ ಹೊಗಳುವನು. ಆಗ ಮಾಯೆ ಕೋಪಗೊಂಡು ತನ್ನ ಪ್ರತಾಪವನ್ನು ಆಡುವಳು. ಇವರಿಬ್ಬರಲ್ಲಿ ಯಾರು ಹೆಚ್ಚು ಎಂದು ಪಾರ್ವತಿ ಪರಮೇಶ್ವರನನ್ನು ಕೇಳುವಳು. ಆಗ ಪರಮೇಶ್ವರನು ಅಲ್ಲಮನೇ ಹೆಚ್ಚು ಎನ್ನಲು, ಮುಂದೆ ಪಾರ್ವತಿಯ ಪ್ರತಿಜ್ಞೆ, ಇತ್ಯಾದಿಗಳು ಆದಂತೆ ಪ್ರ. ಸಾಂಗತ್ಯದಲ್ಲಿದೆ.

8. ಭೃಂಗೀಶ್ವರನು ಒಂದೇ ಕೈಯೆತ್ತಿ ನಮಸ್ಕರಿಸಿದಾಗ ತನಗೇಕೆ ನಮಸ್ಕಾರಮಾಡಲಿಲ್ಲವೆಂದು ಪಾರ್ವತಿ ಕೇಳಿದಳು. ಪ್ರಕೃತ್ಯಂಶವಾದ್ದರಿಂದ ವಂದನಾರ್ಹವಲ್ಲವೆಂದು ಭೃಂಗಿ ಉತ್ತರಕೊಡಲು, ಪಾರ್ವತಿ ಕೋಪಗೊಳ್ಳುವಳು. ಇವನನ್ನು ಭೂಮಿಗೆ ಕಳುಹಿಸು, ಇವನು ಮಾಯಾಧೀನನಾಗುವಂತೆ ನಾನು ಮಾಡುತ್ತೇನೆ—ಎಂದು ಪಾರ್ವತಿ ಈಶ್ವರನನ್ನು ಕೇಳಿಕೊಳ್ಳಲು, ಈಶ್ವರನು ಒಪ್ಪಿ ಕಳುಹಿಸಿದಂತೆ ಕರ್ನಲ್ ಮೆಕೆನ್ಸಿಯವರು ಸಂಗ್ರಹಿಸಿರುವ ಪ್ರ. ಲೀಲೆಯ ಕಥೆಯಲ್ಲಿದೆ. ಇದನ್ನು ಅವರು ಭೈರವಾಂಕನ ಕಾವ್ಯ ಕಥಾಸೂತ್ರರತ್ನಾಕರದಿಂದ ಸಂಗ್ರಹಿಸಿದ್ದೆಂದು ಹೇಳಿದ್ದಾರೆ.

(iii)

1. **ಮಹದೇವಿಯಕ್ಕ.**—ಈಶ್ವರನು ಮಾಯೆಯನ್ನು ಕರೆದು ಉಡುತಡಿಯಲ್ಲಿ ಮಹದೇವಿಯಾಗಿ ಹುಟ್ಟೆಂದು ಹೇಳಿದಂತೆ ಪ್ರ. ಪು. ದಲ್ಲಿದೆ. (ನಗರದ ಸೀಮೆ ಬಳ್ಳಿಗಾವೆಯ ಹತ್ತಿರ ಉಡುಗಣೆ ಅಥವಾ ಉಡುತಡಿ ಎಂಬ ಊರು. ಸಿ. ಮಂ. ರ.)

ಮಹದೇವಿ ಎಂಬ ಪಾರ್ವತಿಯ ಸಖಿ ಈಶ್ವರನಿಗೆ ಪ್ರೀತಿಪಾತ್ರನಾದ ಗುಪ್ತಗಣನಾಥನನ್ನು 'ಭವಿ' ಎಂದು ಬೈದಂತೆಯೂ, ಆಗ ಪಾರ್ವತಿ—ನಿಷ್ಕಾರಣವಾಗಿ ಅವನನ್ನು ಭವಿಯೆಂದು ಬೈದಿರುತ್ತೀಯೆ. ನೀನು ಭೂಮಿಯಲ್ಲವತರಿಸಿ ಭವಿಯನ್ನು ಮದುವೆಯಾಗು ಹೋಗು—ಎಂದು

ಹೇಳಿದಂತೆಯೂ, ಅದರಂತೆ ಮಹದೇವಿ ಉಡುತಡಿಯಲ್ಲಿ ಮಹದೇವಿಯಕ್ಕ ನಾಗಿ ಶಿವಭಕ್ತ ಶಿವಭಕ್ತೆಯರಿಗೆ ಜನಿಸಿದಂತೆಯೂ ಹರೀಶ್ವರನ ಮ. ದೇ. ರ. ಯಲ್ಲಿದೆ.

ಮ. ದೇ. ಪುರಾಣದಲ್ಲಿ ಮೇಲಿನ ಶಾಪ ವೃತ್ತಾಂತವಿಲ್ಲ. ತನ್ನ ಓಲಗಕ್ಕೆ ಗುಪ್ತಗಣನಾಥನು ಬರಲು ಬಂದ ಕೆಲಸವೇನೆಂದು ಕೇಳಿ ತಿಳಿದು, ಮಾಯಾದೇವಿಯ ಕಥೆಯನ್ನು ಸಂಕ್ಷೇಪವಾಗಿ ಹೇಳಿ ಸಾತ್ವಿಕಾಂಶ ವಾದ ರುದ್ರಕನ್ಯೆಯನ್ನು ಪಾರ್ವತಿಯು ಭೂಮಿಗೆ ಕಳುಹಿಸುವಳು.

2. **ಬಸವಣ್ಣನವರು.**—ಪಾರ್ವತಿ ನಾಗಲಾಂಬೆಯಾಗಿ ಅವತರಿಸಲು ಹೋಗುವಾಗ "ವೃಷಭರಾಜನಂ ಕಳುಹು ನನ್ನೊಡನೆನ್ನಲು, ಸ್ಮರ ವೈರಿ ಚಿಂತಿಸುತ್ತೀಕೆ ಹಿಡಿದುದ ಬಿಡಳು" ಎಂದೆನುತ ವೃಷಭೇಶ್ವರನನ್ನು ಕಳುಹಿಸಿ ಭೂಮಿಯಲ್ಲಿ ಪ್ರಭುವನ್ನು ನಾಗಲಾಂಬೆಗೆ ತೋರಿಸೆಂದು ಅಪ್ಪಣೆ ಕೊಟ್ಟನು—ಎಂದು ಮುಂತಾಗಿ ಪ್ರ. ಪುರಾಣದಲ್ಲಿದೆ. ಬಸವ ಪುರಾಣ, ಬಸವರಾಜದೇವರ ರಗಳೆ ಮುಂತಾದುವುಗಳಲ್ಲಿ ಬೇರೆ ಬೇರೆ ರೀತಿಯಿದೆ.

3. **ಬಿಜ್ಜಳ.**—ತ್ರಿದಂಡಿ ಎಂಬ ದ್ವಾರಪಾಲಕನು ವೃಷಭೇಂದ್ರನನ್ನು ಹಾಸ್ಯಮಾಡಿದಂತೆಯೂ, ಆಗ ದೇವೇಂದ್ರನು ನಂದೀಶ್ವರನ ಸಾಮರ್ಥ್ಯವನ್ನು ವರ್ಣಿಸಿದಂತೆಯೂ, ಈಶ್ವರನು ತ್ರಿದಂಡಿಯಮೇಲೆ ಕೋಪಗೊಂಡು ಬಿಜ್ಜಳನಾಗುವಂತೆ ಭೂಮಿಗೆ ಕಳುಹಿಸಿದಂತೆಯೂ ಪ್ರ. ಪುರಾಣದಲ್ಲಿದೆ.

ಅಸಿಮಿಷಯ್ಯನಿಗೆ ಲಿಂಗವನ್ನು ಕೊಟ್ಟಮೇಲೆ ಇಷ್ಟಲಿಂಗ ವಿರಹಿತನಾಗಿ ಬಂದ ನಂದೀಶ್ವರನನ್ನು ಕೈಲಾಸದ ಬಾಗಿಲಲ್ಲಿ ದ್ವಾರಪಾಲಕರು ತಡೆದುಬಿಟ್ಟರು. ಆಗ ಈಶ್ವರನು ಬಂದು ಸರ್ವಾಂಗಲಿಂಗಿಯಾದ ನಂದೀಶ್ವರನನ್ನು ಏತಕ್ಕೆ ತಡೆದಿರಿ? ಎಂದು ಕೋಪಗೊಂಡು ಅವರನ್ನು ಭೂಮಿಯಲ್ಲಿ ಹುಟ್ಟಿರೆಂದು ಹೇಳಿದಂತೆಯೂ ಅವರು ಬಿಜ್ಜಳ ಕರ್ಣದೇವರಾಗಿ ಹುಟ್ಟಿದಂತೆಯೂ ಸಿಂ. ರಾ. ಪುರಾಣದಲ್ಲಿದೆ.

4. **ಸಿದ್ಧರಾಮ.**—ಈಶ್ವರನ ಸಭೆಗೆ ಹೋಗುತ್ತಿರುವಾಗ ಗಂಧರ್ವರಿಬ್ಬರು ಭೃಂಗಿಯನ್ನು ನೋಡಿ ನಕ್ಕರು. ಆಗ ಭೃಂಗಿ ಭೂಮಿಯಲ್ಲಿ ಮನುಷ್ಯದಂಪತಿಗಳಾಗಿ ಜನಿಸಿರೆಂದು ಶಾಪವನ್ನು ಕೊಟ್ಟನು. ಆಗ

ಗಂಧರ್ವರು ಪಶ್ಚಾತ್ತಾಪಪಟ್ಟು ವಿಶಾಪವನ್ನು ಕೇಳಲು ನಿಮ್ಮ ಗರ್ಭದಲ್ಲಿ ಶಿವಯೋಗಿ ಜನಿಸುವನು, ಆಗ ವಿಶಾಪವೆಂದು ಹೇಳಿದನು. ಆ ಗಂಧರ್ವರು ಈಶ್ವರನಲ್ಲಿ ಮೊರೆಯಿಡಲು ತನ್ನ ನಿಜರೂಪು ಅವರ ಗರ್ಭದಲ್ಲಿ ಜನಿಸಿ ಅವರಿಗೆ ಮುಕ್ತಿಯನ್ನು ಕೊಡುವುದಾಗಿ ಈಶ್ವರನು ಅಭಯವನ್ನಿತ್ತು ಕಳುಹಿದನು.

ಈ ಗಂಧರ್ವರೇ ಮುದ್ದವ್ವ ಮುದ್ದುಗೌಡರಾಗಿ ಭೂಮಿಯಲ್ಲಿ ಹುಟ್ಟಿದರು. ಅವರು ಮುದುಕರಾದ ತರುವಾಯ ಸಿದ್ಧರಾಮನು ಅವರಿಗೆ ಮಗನಾಗಿ ಹುಟ್ಟಿದನು.

[ಸಿದ್ಧರಾಮನ ಜನನವನ್ನು ರೇವಣಸಿದ್ಧನು ಚಾಮಲದೇವಿಗೂ, ಮುದ್ದುಗೌಡ ಮುದ್ದವ್ವೆಯರಿಗೂ ಮೊದಲೇ ತಿಳಿಸಿದಂತೆ ಸಿ. ರಾ. ಪು., ರೇ. ಸಿ. ರ., ರೇ. ಸಿ. ಪು., ರೇ. ಸಾಂ., ಪಾ. ಸೋ. ಪು. ಮುಂತಾದ ಗ್ರಂಥಗಳಲ್ಲಿ ಹೇಳಿದೆ. ಆಸ್ಥಾನ ವಿದ್ವಾನ್ ಸಿರಸಿ ಗುರುಶಾಂತಿ ಶಾಸ್ತ್ರಿಗಳು ಭಾಷಾಂತರ ಮಾಡಿರುವ ರೇಣುಕ ವಿಜಯದಲ್ಲಿ ಈ ಪ್ರಸ್ತಾವವಿಲ್ಲ. ಮೂಲ ಸಂಸ್ಕೃತ ರೇಣುಕ ವಿಜಯ–ಸಿದ್ಧನಾಥ ಶಿವಾಚಾರ್ಯ ರಚಿತವಾದದ್ದು ಅದರಲ್ಲಿಯೂ ಈ ಭಾಗವಿಲ್ಲ. ಆದರೆ ಈಶಾನ್ಯ ಶಿವಗುರು ಸಂಸ್ಕೃತ ದಲ್ಲಿ ರೇಣುಕ ಚರಿತ್ರೆಯನ್ನು ಬರೆದಿರುವುದಾಗಿಯೂ ಈ ಸಂಸ್ಕೃತ ಗ್ರಂಥವನ್ನು ಅನುಸರಿಸಿ ಹರೀಶ್ವರನು ರೇವಣಸಿದ್ಧ ರಗಳೆಯನ್ನು ಬರೆ ದಂತೆಯೂ ಅವುಗಳೆರಡನ್ನೂ ಅನುಸರಿಸಿ ತಾನು ರೇವಣಸಿದ್ಧ ಪುರಾಣವನ್ನು ಬರೆದಂತೆಯೂ ಬೊಮ್ಮರಸನು ಹೇಳಿದ್ದಾನೆ. ಸೋಸಲೆ ರೇವಣಾರ್ಯನು ಶಿವಾಧಿಕ್ಯಮಣಿ ಟೀಕೆಯಲ್ಲಿ ಈಶಾನ ಗುರು ಸಿದ್ಧೇಶ್ವರ ಚಾರಿತ್ರ ಎಂದು ಸಂಸ್ಕೃತದಲ್ಲಿ ಕಾವ್ಯವನ್ನು ಬರೆದಿರುವುದಾಗಿ ಹೇಳಿದ್ದಾನೆ. (ಕವಿ. ಚ. II, ಪುಟ 366). ಆದುದರಿಂದ ಈ ಸಂಸ್ಕೃತ ಗ್ರಂಥದಲ್ಲಿ ರೇವಣಸಿದ್ಧನು ಸಿದ್ಧರಾಮನ ಜನನ ವೃತ್ತಾಂತವನ್ನು ತಿಳಿಸಿದ ಭಾಗವಿದ್ದಿರಬಹುದೆಂದು ಊಹಿಸಬಹುದಾಗಿದೆ. (ಈ ರೇಣುಕ ಚರಿತ್ರೆ ಉಪಲಬ್ಧವಾಗಿಲ್ಲ)]

## (iv) ಮಹದೇವಿಯಕ್ಕನ ಮದುವೆಯ ವಿಚಾರ

1. ಮಹದೇವಿಯಕ್ಕನು ಕೌಶಿಕನನ್ನು ಮದುವೆಮಾಡಿಕೊಂಡಳೆಂದೂ, ಗಂಡಹೆಂಡಿರಂತೆ ಸಂಸಾರ ಮಾಡಿಕೊಂಡು ಅವರು ಕೆಲಕಾಲ ಸುಖವಾಗಿದ್ದ

ರೆಂದೂ, ಮೂರು ತಪ್ಪುಗಳನ್ನು ಕೌಶಿಕನು ಮಾಡಿದಮೇಲೆ ಆಕೆ ಬಿಟ್ಟು ಹೋದಂತೆಯೂ ಹರೀಶ್ವರನು ಮ. ದೇ. ರಗಳೆಯಲ್ಲಿ ಬರೆದಿದ್ದಾನೆ. ಮದುವೆಯ ವರ್ಣನೆ ನಾಲ್ಕನೆಯ ಸ್ಥಲ ೧೧೦ನೆಯ ಪಂಕ್ತಿಯವರೆಗೆ ಇದೆ.

2. ಮಹದೇವಿಯಕ್ಕ ಕೌಶಿಕನನ್ನು ಮದುವೆಮಾಡಿಕೊಂಡಳೆಂಬ ಅಂಶವನ್ನು ಕೆಂಚ ವೀರಣ್ಣೊಡೆಯರಾದಿಗಳು ರಚಿಸಿರುವ ಶೂನ್ಯಸಂಪಾದನೆಯಲ್ಲಿ ಹೇಳಿದೆ. (K. A. 105, ಮೈ. ಓ. ಲೈ. ಪುಟ ೧೯೨ ಹಿಂಭಾಗ.)

3. ಮದುವೆ ಮಾಡಿಕೊಂಡು ತಾನೇ ರಾಜ್ಯಭಾರವನ್ನು ನಡೆಸುತ್ತಿದ್ದಂತೆ ಮ. ದೇ. ಪುರಾಣದಲ್ಲಿ ಹೇಳಿದೆ. ಮದುವೆಯ ವರ್ಣನೆ ೬ನೆಯ ಸ್ಥಲದ ಪೂರ್ತಿ ಇದೆ. ಕೌಶಿಕನು ಮೂರು ತಪ್ಪುಗಳನ್ನು ಮಾಡಿದಮೇಲೆ ಆಕೆ ಬಿಟ್ಟುಹೋಗುವಳು.

4. ತೆಲುಗು ಮತ್ತು ತಮಿಳು ಪ್ರಭುಲಿಂಗಲೀಲೆಗಳಲ್ಲಿ ಮದುವೆ ಮಾಡಿಕೊಳ್ಳಲಿಲ್ಲವೆಂಬರ್ಥವನ್ನು ತಿಳಿಸಿದ್ದಾರೆ.

5. ಚ. ಬ. ಪುರಾಣ, ಪಾ. ಸೋ. ಪುರಾಣ ಮುಂತಾದುವುಗಳಲ್ಲಿಯೂ ಮದುವೆ ಮಾಡಿಕೊಳ್ಳಲಿಲ್ಲವೆಂದು ಹೇಳಿದ್ದಾರೆ.

6. ಸಂಸ್ಕೃತ ಪ್ರಭುಲಿಂಗ ಲೀಲೆಯಲ್ಲಿ ಮಹದೇವಿಯಕ್ಕನು ಪಲ್ಲಕ್ಕಿಯಲ್ಲಿ ಕುಳಿತು ಅರಮನೆಗೆ ಹೊರಡಲು,—

"ಶಿವನಿಷ್ಠಾಂ ಗರಿಷ್ಠಾಂ ತಾಂ ಸಕಲಜ್ಞಾಂ ನಿಜಾತ್ಮಜಾಂ ।
ವಿಜ್ಞಾಯ ಪಿತರೌ ತೂಷ್ಣೀಂ ಬಭೂವತುರನಿಂದಿತೌ ॥"

ಎಂದು ಹೇಳಿದ್ದಾನೆ. ಇದಕ್ಕೆ ಟೀಕಾಕಾರನು ತಮ್ಮ ಮಗಳು ಶಿವಭಕ್ತಿಯುಕ್ತಳೂ ಸಾರಾಸಾರ ವಿಚಾರಪರಳೂ ಆದುದರಿಂದ ಅನಿಂದಿತವಾದ ಯಾವ ಕಾರ್ಯವನ್ನೂ ಮಾಡುವುದಿಲ್ಲೆಂಬ ಧೈರ್ಯದಿಂದ ಸ್ವಸ್ಥವಾಗಿದ್ದರು ಎಂದು ಬರೆದಿದ್ದಾನೆ. ಶ್ರೀಯುತ ಬಿಳಿಅಂಗಡಿಯವರೂ ಗದ್ಯಾತ್ಮಕ ಪ್ರ. ಲೀ. ಯಲ್ಲಿ ಇದೇ ಅಭಿಪ್ರಾಯವನ್ನು ಹೇಳಿದ್ದಾರೆ.

7. ಅಮರಾರ್ಯ ಹಿರೇಮಠ ಅವರು ಬರೆದಿರುವ ಪ್ರಭುವಿಜಯ ಚರಿತ್ರ ನಾಟಕದಲ್ಲಿ ಈ ರೀತಿ ಹೇಳಿದ್ದಾರೆ:—ಮಹದೇವಿಯಕ್ಕನು ಅರಮನೆಯನ್ನು ಸೇರಿ ಶಿವಭಕ್ತನಾಗೆಂದು ದೊರೆಗೆ ಹೇಳಲು ಅವನು

ಒಪ್ಪದೇ ಹೋಗುವನು. ಬಳಿಕ ತನ್ನ ಭಾಷೆಯನ್ನು ಮೀರಿ ಬಲಾತ್ಕಾರವಾಗಿ ಹಿಡಿಯಹೋಗಲು, ಆಕೆ "ಏಹ್ಯೇಹಿ ಅಗ್ನೇ" ಎಂದು ಶಪಿಸಿ ಅವನ ಮುಖವನ್ನು ಸುಡುವಳು. (ಇದಕ್ಕೆ ಆಧಾರವೆಲ್ಲಿರುವುದೋ ನಮಗೆ ತಿಳಿಯದು.)

## (v) ಮುಕ್ತಾಯಕ್ಕ ಅಜಗಣ್ಣರ ವೃತ್ತಾಂತ

ಅಜಗಣ್ಣನು ಹೊಲದಲ್ಲಿ ಕೆಲಸಮಾಡುತ್ತಿದ್ದಾಗ ಒಂದು ದಿನ ರಾತ್ರಿ ಹುತ್ತದಿಂದ ನಾಗರಹಾವೊಂದು ಹೊರಕ್ಕೆ ಬಂದು ಹೆಡೆಯನ್ನು ಬಿಚ್ಚಿ ಹೆಡೆಯಲ್ಲಿದ್ದ ರತ್ನದ ಕಾಂತಿಯಿಂದ ಆಹಾರವನ್ನು ಹುಡುಕಿಕೊಂಡದ್ದನ್ನೂ, ತರುವಾಯ ಹೆಡೆಯನ್ನು ಮುಚ್ಚಿಕೊಂಡು ಹುತ್ತದೊಳಗೆ ಹೊರಟುಹೋದದ್ದನ್ನೂ ನೋಡಿದನು. ಆಗ ತನ್ನಲ್ಲಿದ್ದ ಲಿಂಗವನ್ನು ಹೆಡೆಯ ರತ್ನದಂತೆ ಗುಪ್ತವಾಗಿಟ್ಟುಕೊಳ್ಳಬೇಕೆಂದು ಅಭಿಪ್ರಾಯಪಟ್ಟು ಲಿಂಗವನ್ನು ನುಂಗಿಬಿಟ್ಟನೆಂದು ವೀ. ಮ. ಪು. ೭ನೆಯ ಕಾಂಡದಲ್ಲಿ ಹೇಳಿದೆ.

ಅಜಗಣ್ಣನು ಹುಡುಗನಾಗಿದ್ದಾಗ ಜೊತೆಯ ಬಾಲಕರು "ಅಜಗಣ್ಣ! ನಿನ್ನ ಲಿಂಗವನ್ನು ಕೊಡು ಸಕ್ಕರೆಯನ್ನು ಕೊಡುತ್ತೇವೆ" ಎಂದು ಕೇಳಿದಂತೆಯೂ, ಆ ಬಾಲಕರು ಲಿಂಗವನ್ನು ಎಲ್ಲಿ ಕಸಿದುಕೊಳ್ಳುವರೋ ಎಂದು ಹೆದರಿ ಅದನ್ನು ನುಂಗಿಬಿಟ್ಟಂತೆಯೂ ಶೂ. ಸಂ. (K. A. 105) ಯಲ್ಲಿ ಹೇಳಿದೆ.

ಅಜಗಣ್ಣನಿಗೆ ಯೌವನ ಪ್ರಾಪ್ತವಾಗಲು ಸೋದರಮಾವನು ತನ್ನ ಮಗಳನ್ನು ಕೊಟ್ಟು ಮದುವೆಮಾಡಿದನು. ಅಳಿಯನನ್ನು ತನ್ನ ಜೊತೆಯಲ್ಲಿಯೇ ಕರೆದುಕೊಂಡು ಹೋಗಲು ಪ್ರಯತ್ನಿಸಿದಾಗ ಮುಕ್ತಾಯಕ್ಕ ಅಜಗಣ್ಣನನ್ನು ಕುರಿತು ನಿನ್ನ ಐಕ್ಯವನ್ನು ತಿಳಿಯುವ ಬಗೆಯೆಂತು ಎಂದು ಕೇಳಿದಳು. ಆಗ ಅಜಗಣ್ಣನು—ನೀನು ಕಡೆಯುತ್ತಿರುವ ಮೊಸರು ಕಲ್ಲಾದಾಗ ನಾನು ಲಿಂಗೈಕ್ಯನಾದೆನೆಂದು ತಿಳಿ—ಎಂದು ಹೇಳಿ ಹೊರಟು ಹೋದನು.

ಅಜಗಣ್ಣನು ಗುಪ್ತ ಭಕ್ತನಾಗಿದ್ದುದನ್ನು ಆತನ ಹೆಂಡತಿ ತಿಳಿಯದೆ ಶಿವಭಕ್ತನಲ್ಲದವನನ್ನು ಮದುವೆಯಾದೆನಲ್ಲ ಎಂದು ದುಃಖಪಡುತ್ತಿದ್ದಳು.

ಅಜಗಣ್ಣನು ಹುಚ್ಚನೆಂದು ಮನೆಯವರು ತಿಳಿದು ಮೂಟೆಗಳನ್ನು ಹೊರಿಸುತ್ತಿದ್ದರು. ಒಂದು ದಿನ ಗೋಧಿಯ ಮೂಟೆಯನ್ನು ಹೊತ್ತುಕೊಂಡು ಬರುತ್ತಿದ್ದಾಗ ತಲೆ ಬಾಗಿಲುವಾಡಕ್ಕೆ ತಗುಲಲು ಒಡನೆಯೆ ಷಡಕ್ಷರ ಮಂತ್ರವನ್ನು ಉಚ್ಚರಿಸಿ ಅಜಗಣ್ಣನು ಐಕ್ಯನಾದನು. ಆತನು ಹೇಳಿದ ಕುರುಹಿಂದ ಮುಕ್ತಾಯಕ್ಕ ಆ ವಿಷಯವನ್ನು ತಿಳಿದು ಪ್ರಲಾಪಿಸುವಳು. ಈ ಕಥೆ ಖಂಡವಾಗಿಯೋ ಅಖಂಡವಾಗಿಯೋ ಪ್ರ. ದೇ. ಪದ, ಪ್ರ. ದೇ. ಸ. ತಾ., ಗು. ರಾ. ಚಾ., ಪಾ. ಸೋ. ಪು. ಮುಂತಾದ ಗ್ರಂಥಗಳಲ್ಲಿ ದೊರೆಯುತ್ತದೆ. ಗು. ರಾ. ಚಾ. ದಲ್ಲಿ ಮೂರು ಕುರುಹುಗಳನ್ನು ಹೇಳಿದೆ: "ನಾರಿ ನೀನುಟ್ಟ ಸೀರೆಯು ನಿರಿ ಕಳೆದಪುದು, ತೋರ ಮುಡಿಗೆಟ್ಟು ಬಿಚ್ಚುವುದು, ಕಡೆವುತಿರ್ಪ ಮೊಸರು ತಾಂ ಕಲ್ಲಪ್ಪುದು."

## (vi) ಪ್ರಭು ಬಯಲಾದ ಸ್ಥಳ

1. ಅಲ್ಲಮಪ್ರಭು ಕಡೆಗೆ ಶ್ರೀಪರ್ವತಕ್ಕೆ ಹೋಗಿ ಅಲ್ಲಿಯ ಕದಳೀವನದಲ್ಲಿ ಬಯಲಾದಂತೆ ಪ್ರ. ರ., ಸಿ. ಪು., ಮ. ದೇ. ಪು., ಶೂ. ಸಂ. ಮುಂತಾದ ಗ್ರಂಥಗಳಲ್ಲಿ ಹೇಳಿದೆ.

2. ಈ ಬಯಲಾದ ಸ್ಥಳವು ಶಿವಮೊಗ್ಗ ಡಿಸ್ಟ್ರಿಕ್ಟು ಷಿಕಾರಿಪುರ ತಾಲ್ಲೂಕು ಬಳ್ಳಿಗಾವೆಯೆಂದೂ, ಅಲ್ಲಿರುವ ವಿರಕ್ತಮಠದಲ್ಲಿ ಪ್ರಭುದೇವರ ಗದ್ದುಗೆ ಇರುವುದಾಗಿ ಜನರು ತೋರಿಸುತ್ತಾರೆಂದೂ ಮೈಸೂರು ಗೆಜಟಿಯರ್ ಸಂಪುಟ ೫, ಪುಟ ೧೨೮೩ರಲ್ಲಿ ಹೇಳಿದೆ.

3. ಮೇಲೆ ಹೇಳಿದ ಗೆಜಟಿಯರಿನಲ್ಲಿಯೇ ಶಿವಮೊಗ್ಗ ಡಿಸ್ಟ್ರಿಕ್ಟು ಸಾಗರ ತಾಲ್ಲೂಕು ತಾಳಗುಂದದಲ್ಲಿ ವಿರಕ್ತಮಠವೊಂದಿರುವುದೆಂದೂ, ಪ್ರಭುದೇವರು ಬಳ್ಳಿಗಾವೆಯಲ್ಲಿ ಬಯಲಾಗದೆ ಇಲ್ಲಿ ಬಯಲಾದರೆಂದೂ, ಅವರ ಗದ್ದುಗೆ ಮಠದಲ್ಲಿರುವುದೆಂದೂ ಜನರು ಹೇಳುವುದಾಗಿ ಸಂಪುಟ ೫, ಪುಟ ೧೩೪೫ರಲ್ಲಿ ಹೇಳಿದೆ.

4. ಸಾಂಗಲಿ ಸಂಸ್ಥಾನದ ತೇರದಾಳದಲ್ಲಿ ಪ್ರಭುದೇವರ ಗದ್ದುಗೆ ಇರುವುದಾಗಿಯೂ, ಅದೇ ಆತನ ಐಕ್ಯದ ಸ್ಥಲವಾಗಿರಬೇಕೆಂದೂ ಶ್ರೀಯುತ ಧಾರ್ವಾಡದ ಬಿ. ಎಂ. ಪುರಾಣೀಕರು ಶ್ರೀ ಪ್ರಭುದೇವರ

ಸ್ತೋತ್ರ ಸಂಗ್ರಹದ ಅವತರಣಿಕೆಯಲ್ಲಿ ಹೇಳಿ ನಿರಂಜನ ವಂಶ ರತ್ನಾಕರದ ಆಧಾರವನ್ನು ತೋರಿಸಿದ್ದಾರೆ.

[ಆದರೆ ಇವರು ನಿ. ವಂ. ರ. ದಿಂದ ಆಧಾರವಾಗಿ ಉದ್ಧರಿಸಿರುವ ಭಾಗವು ಅಲ್ಲಮ ಪ್ರಭುವಿಗೆ ಸಂಬಂಧಪಟ್ಟದ್ದಲ್ಲ. ಅದು ಬಸವ ಪ್ರಭುಸ್ವಾಮಿಗಳಿಗೆ ಸಂಬಂಧಪಟ್ಟದ್ದು. ಈ ಬಸವ ಪ್ರಭುಸ್ವಾಮಿಗಳು ಮೂಲ ಅಲ್ಲಮಪ್ರಭುವಿಂದ ೧೨ನೆಯ ಪಟ್ಟದವರೆಂದು ನಿ. ವಂ. ರ. ಪುಟ ೨೧ರಲ್ಲಿ ಹೇಳಿದೆ. ಇಲ್ಲಿ ಬರುವ ಬಸವಪ್ರಭು ಚರಿತ್ರೆಗೂ ಚಾಮರಸಾದಿಗಳು ಹೇಳಿರುವ ಅಲ್ಲಮಪ್ರಭು ಚರಿತ್ರೆಗೂ ಯಾವ ಸಂಬಂಧವೂ ಇಲ್ಲವೆಂಬುದು ಗ್ರಂಥ ಪರಿಶೀಲನದಿಂದ ತಿಳಿದುಬರುತ್ತದೆ.

ಎರಡನೆಯದಾಗಿ ಅದೇ ನಿ. ವಂ. ರ. ದಲ್ಲಿ ಅಲ್ಲಮಪ್ರಭು ವಿಚಾರವಾಗಿ (ಪುಟಗಳು ೪–೫) ಹೀಗೆ ಹೇಳಿದೆ: "ಆಮೇಲೆ ಕಲ್ಯಾಣದಿಂದ ಪ್ರಭುಸ್ವಾಮಿಗಳು ಶ್ರೀಶೈಲಕ್ಕೆ ದಯಮಾಡಿಸಿ . . . . ಕದಳಿಯ ಬನದೊಳಗಿರುವ ಮಠದಲ್ಲಿ ರಕ್ತಾಕ್ಷಿನಾಮ ಸಂವತ್ಸರದ ಪುಷ್ಯ ಶುದ್ಧ ಪಾಡ್ಯಮಿ ಸೋಮವಾರ ಉದಯ ೨೫ ಗಳಿಗೆಗೆ ತಮ್ಮ ಗುಹೇಶ್ವರ ಲಿಂಗದಲ್ಲಿ ನಿರ್ವಯಲಾದರು. ಇವರು ಬಯಲಾದ ಮಠವು ಶ್ರೀಶೈಲ ಕದಳೀಬನದಲ್ಲಿ ಇರುವುದು. ಪಾತಾಳ ಗಂಗೆಯ ತಟಿಯಲ್ಲಿ ಇರುವ ಗುಡ್ಡದ ಮೇಲೆ ನಿಂತು ನೋಡಿದರೆ ಈಗ ಕಾಣುತ್ತದೆ. ಅಲ್ಲಿ ಹೋಗುವುವೆಂದು ಹೋದರೆ ದಾರಿ ಸಿಗುವುದಿಲ್ಲ."

ಮೂರನೆಯದಾಗಿ ಎಂಟನೆಯ ಪಟ್ಟದ ಜ್ಞಾನಾನಂದಸ್ವಾಮಿಗಳು ಕಲ್ಯಾಣದಲ್ಲಿ ಹಿಂದೆ ಅಲ್ಲಮಪ್ರಭು ಶೂನ್ಯಸಿಂಹಾಸನವೇರಿದ ಸ್ಥಳದಲ್ಲಿ ಶೂನ್ಯಸಿಂಹಾಸನವನ್ನು ರಚಿಸಿ ಒಂದು ಮಠವನ್ನು ಕಟ್ಟಿಸಿದಂತೆ ನಿ. ವಂ. ರ. ಪುಟ ೧೯ದಲ್ಲಿ ಹೇಳಿದೆ. ಆದುದರಿಂದ ೧೨ನೆಯ ಪಟ್ಟಕ್ಕೆ ಬಂದ ತೇರದಾಳದಲ್ಲಿ ಬಯಲಾದ ಬಸವಪ್ರಭು ಸ್ವಾಮಿಗಳು ಮೂಲ ಅಲ್ಲಮ ಪ್ರಭು ಆಗುವ ಸಂಭವವಿಲ್ಲವೆಂದು ಹೇಳಬೇಕಾಗುತ್ತದೆ.]

## ಪರಿಶಿಷ್ಟ II

## ಪ್ರಭುದೇವರ ರಗಳೆ

ಕಂ॥ ಶ್ರೀ ವಿವಿಧ ಶರಣ ಹೃತ್ಕಮ ।
ಳಾವಾಸಂ ಸಕಳ ದೇವ ಸೇವ್ಯಂ ಮೆಱೆದಂ ॥
ನೀಲ ಗ್ರೀವಂ ಅಲ್ಲಮ ।
ದೇವನನೊಲವಿಂದೆ ಹಂಪೆಯ ವಿರೂಪಾಕ್ಷಂ ॥

ಶ್ರೀಗಣ ನಿಕಾಯದಿಂದೊಪ್ಪೆ ಕೈಲಾಸದೊಳ್
ಭೋಗ ನಿಧಿ ಹಂಪೆಯ ವಿರೂಪಾಕ್ಷನೊಪ್ಪದೊಳ್
ಹರುಷದಿಂದೋಲಗಂ ಗೊಟ್ಟು ಕುಳ್ಳಿರೆ ಬಂದು
ಶರಣರೊಳಗೊರ್ಬ ನಿರ್ಮಾಯನೆಂಬಂ ಸಂದು
ಸುರ ಸತಿಯರೊಳಗೊರ್ಬಳಂ ನೋಡಲಳುಪಿಂದೆ
ಹರನವರನೀಕ್ಷಿಸುತ್ತಂ ದಯಾಪರದಿಂದೆ
ನೀವಿರ್ವರುಂ ಪೋಗಿ ವಸುಮತಿಯೊಳಗೆ ಪುಟ್ಟಿ
ಕಾವಂಗೆ ವಶವಾಗಿ ಸಕಲ ಸುಖಮುಂ ಮುಟ್ಟಿ
ಹರುಷದಿಂದಿರ್ಬರುಂ ಬಪ್ಪುದೆಂದೊಸೆದಿತ್ತ
ಹರನ ಬೆಸದಿಂದಿರ್ವರುಂ ನಲಿದು ಬರಲಿತ್ತ

ನರ ಲೋಕದೊಳಗೆ ಭೂಮಿಗೆ ತೊಡವಿದೆಂದೆನಿಪ
ಶರಣ ಸಂಕುಳಕೆ ಚೇತೋತ್ಸಾಹವೆಂದೆನಿಪ
ಸೂತ್ರಿಸಿದ ಹೊಸ ಸೋಮ ಸೂರ್ಯ ವೀಧಿಗಳೆಸೆವ
ನೇತ್ರ ತ್ರಯನ ಚಾರು ಭವನದಿಂದುಂ ಮೆಱೆವ
ಹರನ ಪ್ರಸಾದ ಪಾದೋದಕದೊಳೇ ಬಾಳ್ವ
ಪುರ ಹರನ ಕರುಣದಿಂದಂ ಸಂಪದವನಾಳ್ವ
ಶಿವನ ಸದ್ಭಕ್ತಿಯುಲ್ಲಿಯೆ ಸಫಲವೆಂದೆನಿಪ
ಭವನೊಲಿದು ನೆಲಸಿಪ್ಪ ಸೆಜ್ಜೆ ತಾನೆಂದೆನಿಪ

ಬಳ್ಳಿಗಾವೆಯೆನಿಪ್ಪ ಪುರವರಂ ರಂಜಿಪುದು
ಪಲ್ಲವಿಪ ಶರಣ ಸಂಕುಳದಿಂ ವಿರಾಜಿಪುದು
ಅಲ್ಲಿರ್ಪ ನಾಗ ವಾಸಕ್ಕೆಯಧಿ ಪತಿಯಪ್ಪ
ಸಲ್ಲಲಿತ ನಾಯಕನ ಸತಿಯು ಬಸುಱೊಳು ಬಪ್ಪ
ಸೆವದಿಂದ ನಿರ್ಮಾಯನಿರ್ದ್ದನಾ ಬಸುಱೊಳಗೆ

ನವ ಯೌವನೆಯ ಗರ್ಭದೊಳಗುದಿಸಿ ತೊಳ ತೊಳಗೆ
ಹೊಱಗೆ ಸಾಱಿದುದವಯವಂ ಗರ್ಭ ಚಿಹ್ನವಂ
ತುಱುಗಿದುದು ಲಾವಣ್ಯವೊಪ್ಪವಿಡಿದಂಗವಂ
ನಡೆ ಮೆಲುಪಿನೊಳ್ ನೆರೆಯೆ ತೊಡೆ ಥಾಳದೊಳ್ ಪೊರೆಯೆ
ನಡು ಬಟ್ಟನಾಗಿ ನಿಲೆ ಕುಡಿ ಕಪ್ಪನಾಳೆ ಮೊಲೆ
ಪೊಕ್ಕುಳುಣ್ಮುತ್ತಮಿರೆ ಮಿಕ್ಕು ಕೀಳ್ಪೊಡೆಯಲರೆ
ಅಕ್ಕಜಂ ಕೊರ್ವಿ ಜಘನಂ ನಡೆಯ ಬೀಗುತಿರೆ
ತ್ರಿವಳಿ ಬಸುಱಿಂ ಪಾಱೆ ಪೊಸ ಬಾಸೆ ಮೆಯ್ದೋಱೆ
ಅವಯವಂ ಚೆಲ್ವಾಗೆ ಬಾಹು ಯುಗ ದಳವೇಱೆ
ಮೊಗವಲರ್ದು ಬೆಳ್ಪಾಗೆ ಮಿಗೆ ಮಾತು ತೆಳ್ಪಾಗೆ
ಬಗಸೆ ಗಣ್ ಬಿಳುಪಾಗೆ ಕದಪು ಮಿಗೆ ನಯವಾಗೆ
ನವ ಮಾಸವಾದುದಾಕೆಗೆ ಚೆಲುವು ಮಿಗಿಲಾಗೆ
ನವ ಕುಮಾರಕನುದಯವಾಗಲುದ್ಯತನಾಗೆ
ಅನುವಾಗೆ ಶುಭ ದಿನ ಮುಹೂರ್ತಂಗಳೈತಂದು
ಜನಿಯಿಸುವ ಸಮಯಮಂ ಪಾರುತ್ತಮಿರಲಂದು
ವಾಸವ ದಿಶಾಂತರದೊಳರ್ಕನುದಯಿಸುವಂತೆ
ಭಾಸುರದ ಪಾಲ್ಗಡಲೊಳಿಂದು ಜನಿಯಿಸುವಂತೆ
ವಸುಧೆಯೊಳು ಸುರ ಕುಜದ ಸಸಿ ಪುಟ್ಟುವಂದದಿಂ
ಶಿಶುವೆನಿಸಿ ಪುಟ್ಟಿದಂ ನಿರ್ಮಾಯನೊಪ್ಪದಿಂ
ಆಗಳನುರಾಗದಿಂದುಮೆ ಶಿವರ್ ಪರಸುತಿರೆ
ನಾಗ ವಾಸಾಧಿಪತಿಯುಕ್ಕಱಿಂ ನಲಿಯುತಿರೆ
ಮಂಗಳವೆ ರೂಪು ಗೊಂಡಂದದಿಂ ಶಿಶು ಮೆಱೆಯೆ

ಲಿಂಗದಂಘ್ರಿಯೊಳೆ ನೋಟಂ ಮುಟ್ಟೆ ಕಣ್ದೆರೆಯೆ
ಅಭವ ರೂಪಿಂಗೆಸೆಯೆ ಜಾತಕರ್ಮಂ ಮಾಡೆ
ಶುಭ ಲಗ್ನವೆಂದಾ ಮುಹೂರ್ತಿಕರ್ ಕೊಂಡಾಡೆ
ಗೊಗ್ಗೇಶ್ವರ ಪ್ರಸಾದದ ಬೆಣ್ಣೆಯಂ ತಂದು
ಹಿಗ್ಗುತ್ತಲಿಕ್ಕಿದರ್ ಜನನಿ ಜನಕರದಂದು
ನಾಮಕರಣಂ ಜಗಕ್ಕಲ್ಲಯ್ಯನೆಂದಾಗೆ
ಭೂಮಿಗದು ನಿರ್ಮಾಯನೆಂಬ ಪೆಸರಂತಾಗೆ
ತೊಟ್ಟಿಲೊಳ್ ಕೈಗಳೊಳ್ ಹೃತ್ಕಮಲದೊಳ್ ಬೆಳೆದು
ದಟ್ಟಡಿ ಯಿಡುತ್ತೆ ಪರಿದಾಡುತ್ತೆ ಬೆಳೆ ಬೆಳೆದು
ಬೆಳೆದನಾತಂ ಶಿವ ಪದಕ್ಕೆ ಪೊಸ ತೊಡವೆನಿಸಿ
ಬೆಳೆದನಾತಂ ಭಕ್ತಿ ವಾರಿಧಿಗೆ ವಿಧುವೆನಿಸಿ

ಇಂತು ಬೆಳೆಯಲು ಬೆಳೆದುದಾತನೊಡನೆಯೆ ವಿದ್ಯೆ
ಸಂತತಂ ಸೊಗಯಿಪ ಮೃದಂಗದ ಮಹಾ ವಿದ್ಯೆ
ಆ ವಿದ್ಯೆಯೊಡನೆ ಜವ್ವನವೆಸೆದು ಬೆಳೆವುತಿರೆ
ಕಾವಂಗೆ ಸಿಂಗರದ ಹುರುಡು ಹುಟ್ಟುತ್ತಮಿರೆ
ನನೆಗಣೆಯ ಬಿಲ್ಲ ಹಂಗಿಲ್ಲದಂಗಜನೆನಿಪ
ವನಿತೆಯರ ಮನವನಿಳ್ಕುಳಿಗೊಳ್ವನಿವನೆನಿಪ
ಹರೆಯದೊಳ್ಗಿರಿಜೇಶನಂ ಕೇಳಿಸಲ್ಕೆಂದು
ಹರುಷದಿಂ ಗೊಗ್ಗೇಶ್ವರಾಲಯಕ್ಕೈತಂದು
ಒಡನೆಯೆ ಮೃದಂಗಮುಮನಿತ್ತರದೊಳಂ ನಿಲಿಸಿ
ನಡುವೆ ಸಿಂಗರಿಸಿ ರಂಗಂ ಬೊಕ್ಕು ಮೇಳೈಸಿ
ಅತಿ ರಸಾಮೃತ ಕಾಂತಿ ಯುತ ಸುಖಾಸ್ಪದವೆಂಬ
ನುತ ಗತಿ ನವೀನ ಗತಿ ಸರಸ ಗತಿಯೆಂಬ
ನುಣ್ಗತಿ ಸು ಗಂಭೀರ ಗತಿ ಸಾಂದ್ರ ಗತಿಯೆಂಬ
ಜಾಣ್ಗತಿ ಮಧುರ ಗತಿ ಮನೋಹರ ಗತಿಗಳೆಂಬ
ಸಂಗತಿ ಸರ್ವಂಗೆ ಕರ್ಣಾಭರಣವಾಗುತಿರೆ
ಒಗೆಗೆ ಪರಮಾನಂದ ರಸದ ತೆರೆಯಾಗುತಿರೆ

ಸಂದಿ ಮಾಕಾಳರಂ ಮಱಿವುತಿರೆ ಶಂಕರಂ
ಸಂದ ಮುರಜದ ಗತಿಗೆ ಮೆಚ್ಚುತಿರಲೀಶ್ವರಂ

ಇಂತು ಕೇಳಿಸುತಮಿರಲಲ್ಲಮಂ ಸಲಿದಿತ್ತ
ಕಂತು ಹರ ವರದಿಂದ ಸುರ ಕಾಂತೆಯಂದಿತ್ತ
ಆ ಪುರದ ಧನದತ್ತನಬಲೆಯುದರದಿ ಪುಟ್ಟಿ
ರೂಪಿನೊಳು ರತಿ ಸರಸ್ವತಿಗುಪ್ಪರಂ ಗಟ್ಟಿ
ಪೆಸರೆಸೆವ ಕಾಮಲತೆಯೆಂದೆಂಬ ನಾಮದಿಂ
ದೊಸೆದು ಸೌಭಾಗ್ಯ ಲತೆ ಕುಡಿಯಿಡಲ್ ಪ್ರೇಮದಿಂ
ಶಶಿ ಕಿರಣದಂತೆ ಬೆಳೆದಳ್ ಬೆಳೆದಳಮ್ಮಮ್ಮ
ಕುಸುಮ ಶರದಂತೆ ನೆಱೆದಳ್ ನೆಱೆದಳಮ್ಮಮ್ಮ
ರತಿ ಗಿತಿಯ ರಂಭೆ ಗಿಂಭೆಯ ಮಾತು ಬೇಡಿಲ್ಲಿ
ಮತಿ ಗಿತಿಗೆ ಪೊಗಳ್ವ ಗಿಗಳ್ವಾಸೆಗಳ್ ಪುಗಪಿಲ್ಲಿ
ಈ ತೆಱದೊಳೆಸೆವ ಸೊಬಗಿಸ ರೂಪನೊಳ ಕೊಂಡು
ಭೂತೇಶ ವಂದನೆಗೆ ನೇಮವಂ ಕೈಕೊಂಡು
ಮದನ ಶರವಿಕ್ಷು ಧನುವಿಂದೆ ಪೊಱ ಮಡುವಂತೆ
ಪದೆದು ಸುವಿಟರ ಮೇಲೆ ದಾಳಿ ಪೊಱ ಮಡುವಂತೆ
ಶಿವನ ಭವನಕ್ಕೆ ಪೊಱ ಮಟ್ಟಳಾ ಕಾಮಲತೆ
ಭವ ಭಕ್ತಿಯಿಂದ ರಾಜಿಸುವ ಲಾವಣ್ಯಾ ಲತೆ
ಇಕ್ಕೆಲದೊಳಬಲೆಯರ ಮುಸುಕು ಮಸಗುತ್ತಲಿರೆ
ಪಕ್ಕದೊಳ್ ನಡೆವ ಸತಿಯರು ಸಂದಣಿಸುತಮಿರೆ
ಮುಸುಕಿನೊಳು ಸಿಲುಕಿ ನಿಲುವ[ರ್ ಭ್ರಮಿಸಿಯ]ಲ್ಲಲ್ಲಿ
ನಸು ನೋಟದೊಳ್ ಸೋಲ್ವ ನವ ಯುವರ್ ಕೆಲರಲ್ಲಿ
ನೇವುರದ ಸುಣ್ದನಿಯೊಳೆಳವುತಿರ್ಪರ್ ಕೆಲರು
ಭಾವಕದ ನಡೆಯೊಳಗೆ ಸಿಕ್ಕಿ ನಿಲುವರ್ ಕೆಲರು

ಇಂತು ವಿಟರಂ ಗೋರಿಗೊಳಿಸುತ್ತೆ ನಡೆತಂದು
ಸಂತಸಂ ಮಿಗೆ ಶಂಭುವಿನ ನಿಳಯಕೆಯ್ತಂದು

ಒಳ ಪೊಕ್ಕು ಶಿವ ಲಿಂಗವಂ ದರುಶನಂ ಮಾಡಿ
ಬಳಸಿ ಕೈಯೆತ್ತಿ ಪೊಡವಡುತಕ್ಕಱಿಂ ನೋಡಿ
ತಿರುಗಿ ಬರುತಿರಲವನು ರಂಗ ಮಂಟಪದಲ್ಲಿ
ಹರವರಿಯ ಮುರಜ ಗತಿಗಳು ಪೊಣ್ಮುತಿರಲಲ್ಲಿ
ಪಾದರಿಯ ಪೂ ದುಱುಂಬಿನ ಪೊಸಬನೊಪ್ಪಿದಂ
ಕೇದಗೆಯ ಪಿಸುಪೆಸಳ ಕಿಱು ಪಿಂಡನೊಪ್ಪಿದಂ
ಕತ್ತುರಿಯ ತಿಲಕದ ಕುಮಾರನಿಂತೊಪ್ಪಿದಂ
ಮುತ್ತಿನೇಕಾವಳಿಯ ಮುಗ್ಧನಿಂತೊಪ್ಪಿದಂ
ಹೊಳೆವ ಬೆಳತಿಗೆ ಗಣ್ಗಳೆಳೆಯನೊಪ್ಪುತ್ತಿರಲು
ತೊಳಪ ಕರ್ಣಾಭರಣದರಸನೊಪ್ಪುತ್ತಿರಲು
ಸವಿ ಗೊಡುವ ಸು ಗತಿಗಳ ಸೊಬಗನೊಪ್ಪುತ್ತಿರಲು
ಭವನನೋಲೈಸುತಂ ಹರುಷದಿಂದಿರುತಿರಲು
ನಿಂದಂತೆ ನಿಂದಳಲ್ಲಮನ ನಿಲವಂ ಕಂಡು
ಸಂದಳಾ ಪೊಸ ರೂಪು ರೇಖೆಗೆ ಮನಂ ಗೊಂಡು
ನೋಡುತಿರೆ ಬಾರಿಸುತ ಕೆಲ ಬಲಕೆ ಸಾರುತ್ತೆ
ನೋಡಿ ಭೋಂಕೆನಲಲ್ಲಮಂ ತಿರುಗಿ ಕಾಣುತ್ತೆ
ಹರ ಹರ ಮಱೆದನಲ್ಲಿ ಸು ಗತಿಯಂ ಮುರಜಮಂ
ಹರ ಹರ ಮಱೆದಳಲ್ಲಿ ಶಿವನುಮಂ ತನ್ನುಮಂ
ಕಂಟಕಿತವಾದವೆರಡುಂ ದೃಷ್ಟಿ ಮೈ ದೋಱೆ
ಗಂಟಿಕ್ಕಿದವು ನೋಟವೆಯ್ದೆ ಕಾಮಂ ಮೀಱೆ
ಇಕ್ಕಿದೆರಡುಂ ಕೈಗಳಿಕ್ಕಿದಂದದೊಳಿರಲು
ಪಕ್ಕವಣೆಗರ ಮೇಲೆ ಜೋಲ್ದು ಮೂರ್ಛೆಗೆ ಸಲಲು
ಸಡಲಿಸಿದರೊಯ್ಯನೆ ಮೃದಂಗಮುಮನತ್ತಿತ್ತ
ಒಡ ಗೊಂಡು ಹೋಗಲುದ್ಯೋಗಮುಸರಾಗುತ್ತ
ಇರೆ ಕಾಮಲತೆಯು ಸತಿಯರು ನಡ ನಡಂ ನಡುಗಿ
ಪರಿ ಬೇಱೆ ಕೊಂಡೊಯ್ಯ ಬಾರದೆನುತಂ ಕೊರಗಿ
ತೆಗೆಯ ಬಾರದು ಬಾರದೆಲೆಲೆ ಹರಣದ ಹಱೆವು
ಬಗೆಗಗೋಚರವಿಲ್ಲಿ ಕೊಳ್ಳದೆಲೆ ನಿಮ್ಮಱಿವು

ಕೊಂಡು ನಡೆಯಿರ್ಬರುಮನೆಮ್ಮ ಸಜ್ಜೆಯ ಮನೆಗೆ
ಕಂಡೆವಿಲ್ಲಿಂತಪ್ಪ ನೇಹಮಂ ಪೊಸತೆಮಗೆ
ಎನುತ ಸಜ್ಜವಳಿ ಜಂತ್ರಂಗಳಂ ತಪ್ಪಂತೆ
ತನ ತನಗೆ ಬೆಱಗಾಗಿ ಗುಜು ಗುಜುಗೊಳುತ್ತಂತೆ
ಸಂದಣಿಸಿ ಕಾಮಲತೆಯರಮನೆಯೊಳಗೆ ಪೊಕ್ಕು
ತಂದು ಸೆಜ್ಜೆಯ ಮನೆಗೆ ಕೌತುಕಂ ಕೈ ಮಿಕ್ಕು
ಸಿರಿ ಮಂಚದೊಳಗಿರ್ವರುಮನೊಲಿದು ಕುಳ್ಳಿರಿಸಿ
ಬೆರಗಿಸಿಂದಾ ಮಾಸಿಸಿಯರೊಯ್ಯನೋಸರಿಸಿ

*  *  *

ಕಡೆ ಮೊದಲ್ ನಡುವಿಲ್ಲದೆಳ್ತರದ ಕಾಮಿಗಳು
ತಡವು ತವಕದೊಳದ್ದ ನವ ನವ ಪ್ರೇಮಿಗಳು

*  *  *

ಮುಟ್ಟಿದ ಸುಖಕ್ಕೆ ಕುರುಳಂ ಬೆರಳನೀವುತಂ
ಕಟ್ಟಕ್ಕಱಿಂದುರವ ಮುಡಹುಮುಮನೀವುತಂ
ತನು ಧನಂ ಮನಮುಮಂ ಕಾಮಲತೆಗೀವುತಂ
ನೆನೆದುದಂ ನೋಡಿತಂ ಕಾಮಲತೆಗೀವುತಂ

ಇಂತು ಪಲವುಂ ಕಾಲ ತೊಲಗದಲುಗದೆ ಇರ್ದು
ಕಂತು ಮದ ಹರಣನಿತ್ಯಾಜ್ಞೆ ಹತ್ತಿರೆ ಸಾರ್ದು
ಕಾಮಲತೆಯಂ ಬಂದು ಹತ್ತಿತು ಮಹಾ ಜ್ವರಂ
ಸೋಮ ಕಳೆಯಂ ರಾಹು ಮುತ್ತುವಂತಿರೆ ಕರಂ
ಜ್ವರದ ಪರಿತಾಪದಿಂದವಯವಂ ಸೀಳುತುಂ
ತರುಣಿ ಸೈರಿಸಲಾರದೇಳುತುಂ ಬೀಳುತುಂ
ಈ ವಸುಧೆಯೊಳಗಣ ಸುಖಂ ತನಗೆ ಸಾಕೆಂದು
ದೇವ ಲೋಕಕ್ಕೆ ನಡೆದಳ್ ಕಾಮಲತೆಯಂದು
ಆಗಲಾ ಜನನಿ ಜನಕರ್ ಮೊಱೆಯಿಡುತ್ತಿರಲು
ಸಾಗಿಪ ಸಖೀ ಜನಂ ಹರಣಗಳೆವುತ್ತಿರಲು
ನಂದ ಬಾಂಧವ ಕುಳಂ ಮಱುಗಿ ಬಾಯ್ಬಿಡುತಿರಲು

ನಿಂದವರ್ ನೆರೆದವರ್ ಕಣ್ಣನೀರಿಡುತಿರಲು
ಆ ರಣರಣಕದೊಳಲ್ಲಮನನೇನೆಂದಪೆಂ
ಸಾರ ಸರ್ವಸ್ವವಜಿತನನೇನನೆಂದಪೆಂ
ಬರೆದಂತೆ ಕಂಡರಿಸಿದಂತೆ ಕರುವಿಟ್ಟಂತೆ
ಮರುಳಂತೆ ಮಱೆವಿರ್ದರಂತೆ ಮರವಟ್ಟಂತೆ
ಉರವಣೆಯ ದುಃಖವೊಳಗೇಱೆ ಬಿಸುಸುಯ್ಯುತುಂ
ಪರಿಪರಿಯ ಶೋಕಾಗ್ನಿಯಿಂದುರಿದು ಬೇವುತುಂ
ಇರ್ದಲ್ಲಮನನೆಲ್ಲರೆಂತಕ್ಕೆ ಸಂತೈಸಿ
ಸಾರ್ದು ಕೈಗೊಟ್ಟು ಮಿಗೆ ನಲ್ಮೆಯಿಂ ಬೋಳೈಸಿ
ತಂದರಾತನನವನ ಜನನಿ ಪಿತರಿದ್ದೆಡೆಗೆ
ಕಂದನಿರವಂ ಕಂಡವರ್ ಮಱುಗಿ ಬೆಱಗಾಗೆ
ನಿಂದಲ್ಲಮಯ್ಯನೊಳಗೊಳಗೆ ಬಳಲ್ದಳಲುತುಂ
ಸಂದ ನೇಹದ ಸದ್ಗುಣಂಗಳಂ ನೆನೆವುತುಂ
ಕಾಮಲತೆಯತ್ತ ಮನಮುಂ ಸುತ್ತಲಲ್ಲಮುಂ
ಕಾಮಲತೆ ಕಾಮಲತೆ ಎಂದೆನುತಲಲ್ಲಮುಂ
ಮಱುಗಿ ಮನವುಕ್ಕಿ ಖೇದಂಗಳಿಂ ಪರಿತಂದು
ಪುರದ ಹೊಱಗಣ ಕಣಿಗಿಲೆಯ ತೋಟಕೆಯ್ತಂದು

ಕುಳ್ಳಿರ್ದು ಚಿಂತೆಯೊಳಗಾಳುತುಂ ಮುಳುಗುತುಂ
ತಳ್ಳಂಕದಿಂದೆ ನೆಲನಂ ನೋಡಿ ಸುಯ್ಯುತುಂ
ತಲೆವಾಗಿ ಕಣ್ಣನೀರ್ಗಱೆಯೆ ಚಿಂತಿಸುತಂದು
ನೆಲನಂ ಬರೆಯೆ ಬರೆವ ಹೆಜ್ಜೆಯೊಳಗಂತೊಂದು
ಮಿಸು ಮಿನುಗಿ ಹೊಳೆಹೊಳೆದು ನಸು ವೆಳಗು ತೋಱುತುಂ
ತನಗೆ ಕೌತುಕವೇಱೆ ಥಳಥಳಿಸಿ ಮಿಱುತುಂ
ಹರಹರ ಶಿವಜ್ಞಾನದಂಕುರಂ ತೋರ್ಪಂತೆ
ಪರಮ ಮುಕ್ತ್ಯಂಗನೆಯ ಕುಚದ ಕುಡಿ ತೋರ್ಪಂತೆ
ಹೊನ್ನ ಕಳಶಂ ತೋಱಲತಿ ಕೌತುಕಂ ಬಟ್ಟು
ತನ್ನಲಾರ್ಪನಿತನಗೆ ದಗೆಯಲಾಱದೆ ಬಿಟ್ಟು

ಪರಿದು ಬಂದಾ ಊರ ನೃಪತಿಗಱುಪಲು ಕೇಳ್ದು
ತ್ವರಿತದಿಂದಿದು ಚಿತ್ರವಿದು ಚಿತ್ರವೆನುತೆದ್ದು
ಪಟ್ಟದಾನೆಯ ಬೆನ್ಗೆ ವಾಯ್ದು ನಡೆ ತರುತಿರಲು
ಪಟ್ಟಣದ ಹೊಱವೊಳಲನೀಕ್ಷಿಸುತೆ ಬರುತಿರಲು
ಕಳಶವಿದ್ದಾ ಸೀಮೆಗೆಯ್ದು ಬರುತಿರೆ ಗಜಂ
ಚಲಿಸದಡಿಯಿಡದಂಕುಶದಿನೊತ್ತಿ ಭೂಭುಜಂ
ಇದು ಚೋದ್ಯವೆಂದು ಗಜದಿಂದಿಳಿದು ನಡೆತಂದು
ಸದಮಳನೆನಿಪ್ಪಲ್ಲಮನ ಕೈವಿಡಿದು ಬಂದು
ಕಂಡಿದದ್ಭುತವೆನುತೆ ಪರಿಜನಕೆ ಕೈವೀಸೆ
ಕಂಡುದೆಲ್ಲಗೆಯ ತೊಡಗಿತು ಮಣ್ಣ ಹೊಱಸೂಸೆ
ಕೋಟಿ ಗುದ್ದಲಿಗಳಿಕ್ಕಿಡವು ಕೆಲಬಲದಲ್ಲಿ
ನೋಟಕಜ್ಜರಿಯೆನಲ್ಕಗೆಯ ತೊಡಗಿದರಲ್ಲಿ
ಕಳಶ ಕೆಳಗಣ ಸಿಂಹಸೂತ್ರಿಕಂ ಮಂಟಪದ
ವಳಯದಿರ್ಕೆಲದ ವೃಷಭಾಂಕಿತ ಶಿವಾಲಯದ
ತುದಿ ಮೊದಲ್ ಕಾಣಬರೆ ನಿಮಿಷಕ್ಕೆ ಪಡಿಸಿದರು
ಮುದದಿಂದ ನೃಪತಿ ಸಂತಸಬಡಲ್ ತೀರ್ಚಿದರು
ಆಗಳರಸಂ ಹರುಷದಿಂದೊಲಿದು ಬಲವಂದು
ರಾಗದಿಂ ದೇವಾಲಯದ ಬಾಗಿಲೊಳ್ ನಿಂದು
ಕದವಂ ತೆಱೆದು ನೋಡಲಾರ್ಪ ಧೀರರುಮುಂಟೆ
ಹೆದಱಿದಿದಱೊಳಗನಾರಯ್ಯಲಾರ್ಪವರುಂಟೆ
ಎನಲೊರ್ವರುಂ ನುಡಿಯದುಸುರದಿರ್ದುದ ಕಂಡು
ಮನದೊಳಲ್ಲಮನತಿ ವಿರಕ್ತಿಯುಂ ಕೈಕೊಂಡು
ಬೆರಳಿಲ್ಲ ಕಿವಿಯಿಲ್ಲ ಮುಡಹು ಮುಂದಲೆಯಿಲ್ಲ
ಉರವಿಲ್ಲ ಮೂಗಿಲ್ಲ ಸತಿ ಕಾಮಲತೆಯಿಲ್ಲ
ಇನ್ನೇಕೆ ದೇಹದಭಿಲಾಷೆ ಚಿಃ ತೆಗೆಯೆಂದು
ತನ್ನ ಮನದೊಳಗೆ ನಿಶ್ಚೈಸಿ ಭರದಿಂ ಬಂದು
ಬೆಸಸು ಬೆಸಸಾನೆ ಪೊಕ್ಕಪೆನೆಂದು ನುಡಿವುತಿರೆ
ಹೊಸತು ಹೊಸತೆಂದರಸನಂದು ಬೆಱಗಾಗುತಿರೆ

ಪರಿ ಜನಂ ಪುರ ಜನಂ ಕರಮುರಿದೆನುತ್ತಮಿರೆ
ಪಿರಿಯರಿರ್ದಲ್ಲಮಂ ಕಾರಣಿಕನೆನುತಮಿರೆ
ಭಸಿತಮಂ ಮನವಾರೆ ಉದ್ಧೂಳಿಸಿಯೆ ಕೊಂಡು
ಶಶಿ ಧರನೆ ಶರಣೆನುತೆ ಕಡು ನಿಷ್ಠೆ ಕೈ ಕೊಂಡು
ಸೂಂಕಿ ನಿಮಿರ್ದೊತ್ತುತ್ತವೊಂದು ಕದಹಂ ತೆಱೆದು
ಭೋಂಕನೊಳಗಂ ಪೊಕ್ಕು ನರ ಲೋಕಮಂ ಮಱೆದು
ಬಗೆ ಬೇಱೆ ಪೊಸತಾಗಿ ಗಳಗಳನೆ ನಡೆತಂದು
ಪುಗುತಂ ಮಹಾ ಲಿಂಗದಂಘ್ರಿಗೆಱಗುತ್ತಂದು
ಕೆಲಸನೀಕ್ಷಿಸಲನಿಮಿಷಯ್ಯಂಗಳೊಪ್ಪಿರಲು
ತೊಲಗದಲುಗದ ಲಿಂಗ ನಿಜ ಸಿದ್ಧನೊಪ್ಪಿರಲು
ಬತ್ತಿಯಿಲ್ಲೆಣ್ಣೆಯಿಲ್ಲದ ದೀಪ್ತಿ ಬೆಳಬೆಳಗೆ
ಸುತ್ತಲುಂ ಶಿವ ಕಳೆಯ ತಂಬೆಳಗು ತೊಳತೊಳಗೆ
ತಿಳಿದ ನಿರ್ಮಳ ತತ್ವದಚ್ಚ ಬೆಳಗಿನೊಳಂದು
ತಳ ತಳಿಸಿ ನಳ ನಳಿಸಿ ಬೆಳಗಿ ಬೆಳಗಿನೊಳಂದು
ಕೀಲಿಸಿದ ಪದ್ಮಾಸನಂ ಪುಲಿದೊವಲ್ ತನುವ
ನಾಲಿಂಗಿಸಿದ ಭಸಿತವಮಳ ಸೂತ್ರಂ ಮೆಱೆವ
ಬೆಳಪ ಕಣ್ ಸುಲಿಪಲ್ಲು ಹೊಳೆವ ಮುಖ ಮಂಡಲಂ
ಇಳಿದ ಜಡೆ ರುದ್ರಾಕ್ಷಿ ಮಾಲೆ ಫಣಿಕುಂಡಲಂ
ಕಯ್ಯ ಶಿವ ಲಿಂಗದೊಳೆ ನಟ್ಟ ನೋಟಂ ಮೆಱೆಯೆ
ಮೆಯ್ಯ ಕೋಮಳತೆ ನಳ ನಳಿಸಿ ನಯಮಂ ಕಱೆಯೆ
ಮಿಗೆ ಬಳ್ಳಿವರಿದ ಕರಪದ ನಖಂ ಲತೆಯಾಗೆ
ಸೊಗಯಿಸುವ ಹಸ್ತ ರಾಗಂ ಸು ಪಲ್ಲವಮಾಗೆ
ಅರಳ್ದ ನಯನ ದ್ವಯಂ ವಿಕಸಿತ ಕುಸುಮಮಾಗೆ
ಕರ ತಳದ ಶಿವ ಲಿಂಗವಮೃತ ರಸ ಫಲವಾಗೆ
ಕಲ್ಪ ತರುವಿನ ತೆಱದೊಳಿರ್ದನಾ ಶಿವ ಯೋಗಿ
ಕಲ್ಪನೆಯ ವಶವಲ್ಲದಪ್ರತಿಮ ಶಿವ ಯೋಗಿ
ಕಣ್ಣಲ್ಲಿ ಜೀವಮಂ ಪಿಡಿದಿರ್ದ ಮಾಳ್ಕೆಯಿಂ
ತಿಣ್ಣಮೆನೆ ಲಿಂಗಮಂ ಪಿಡಿದಿರ್ದನೊಲ್ಮೆಯಿಂ

ಇರೆ ಮಹಾ ಗುರುವಸಲ್ಲಮದೇವನೀಕ್ಷಿಸುತೆ
ಹರುಷದಿಂ ಸಾತ್ವಿಕರಸಂ ಮುಟ್ಟಿ ಕಂಪಿಸುತೆ
ಸನ್ನಿಧಿಯ ಗುಣ ಶಿವಜ್ಞಾನಮಂ ಪುಟ್ಟಿಸಲು
ತನ್ನೊಳಗೆ ಶಿವನ ತತ್ವಂ ಘನವನೆಯ್ದಿಸಲು
ಪೊಗಳಲ್ಕೆ ತೊಡಗಿದಂ ಸಿದ್ಧ ಶಿವ ಯೋಗಿಯಂ
ಏಗೆ ಮೋಕ್ಷ ಲಕ್ಷ್ಮಿಯೊಡಗೂಡಿರ್ದ ಭೋಗಿಯಂ
ದೇವ ನಿರ್ಮಳ ನಿತ್ಯ ನಿರುಪಮ ಮಹಾ ಯೋಗಿ
ದೇವ ನಿರ್ಮಳ ನಿಜಾನಂದಕರ ಶಿವ ಯೋಗಿ
ಶಿವನಸೊಚ್ಚತವಾಗಿ ಕೈಕೊಂಡ ಶಿವ ಯೋಗಿ
ಭವನ ಮೂರ್ತಿಗೆ ಸೋಲ್ತು ಕಣ್ಣಿಟ್ಟಚಲ ಯೋಗಿ
ನೋಟದೊಳು ಲಿಂಗಮಂ ಸೆಱೆಗೆಯ್ದ ಶಿವ ಯೋಗಿ
ಕೂಟದೊಳು ತಣ್ಣ ತನುವಾದ ಬೆಳಗಿನ ಯೋಗಿ
ಮದನನಂ ಮರ್ದಿಸಿಯೆ ಸಂದಿರ್ದಭವ ಯೋಗಿ
ಹೃದಯದೊಳು ಭಕ್ತಿಯಂ ತಳೆದಿರ್ದ ಸ್ಥಿರ ಯೋಗಿ

ಎಂದು ಪೊಗಳುತ್ತೆ ಕೈಯೆತ್ತಿ ನಿಲಲಲ್ಲಮಂ
ಸಂದ ಶಿವ ಯೋಗಿ ಪಿಗ್ಗುತ್ತವಱಿದೆಲ್ಲಮಂ
ಮನದೊಳಗೆ ಕಾರಣಿಕನಿವನೆಂದು ನಿಶ್ಚೈಸಿ
ತನಗೆ ತನುವಿನ ತೊಡಕು ಸಾಕೆಂದು ನಿಶ್ಚೈಸಿ
ಘಳಿಲನಲ್ಲಮ ತನ್ನ ಕೈಯೊಡ್ಡಲಾ ಕ್ಷಣದೆ
ಇಳುಪಿದಂತಾಯ್ತು ಶಿವ ಲಿಂಗಂ ನಿರೀಕ್ಷಣದೆ
ನೋಟದಿಂದಂಗಯ್ಯಲಿಕ್ಕಿದಂ ಲಿಂಗಮಂ
ಕೂಟದಚ್ಚಳಿಯದಸು ವೆರಸಿ ಶಿವ ಲಿಂಗಮಂ
ಲಿಂಗದೊಡನೆಯೆ ಬೆರಸಿ ಪೋದುದಾತನ ಜೀವ
ಅಂಗಂ ಮಲಂಗಿದುದು ಭಿತ್ತಿಯಂ ಬಱಿ ಭಾವ
ಆಗಳಲ್ಲಮನವಯವಂ ಲಿಂಗ ಸೋಂಕಿಂದೆ
ರಾಗದಿಂದಂಕುರಿಸಿ ನಳನಳಿಸಿ ಚೆಲ್ವಿಂದೆ

ಪೂಜಿಮಟ್ಟನಲ್ಲಮಂ ಗೊಗ್ಗೇಶ್ವರಂ ಮೆಚ್ಚೆ

ಬೆಱಗಾಗಿ ನೋಡಲಮ್ಮದೆ ನೃಪಂ ಕಣ್ಮುಚ್ಚಿ
ಹೋಗುತಿರ್ದಂ ಲಿಂಗವೆತ್ತಲೊಯ್ದುದತ್ತ
ಆಗುತಿರ್ದುದು ಪುರ ಜನಕ್ಕೆ ಕೌತುಕವಿತ್ತ
ನೋಡಿದೆತ್ತಣ ಕಾಮಲತೆ ಎತ್ತಣಲ್ಲಮಂ
ಕೂಡಿದುದು ಪುಣ್ಯ ಫಲವಿಂತಿವಂಗೆಲ್ಲಮಂ
ಎತ್ತಣದು ಕಳಶವೆತ್ತಣ ಶಿವಾಲಯವಿವಂ
ಎತ್ತಣದು ಶಿವನ ಸುಜ್ಞಾನ ಸುಖದನುಭವಂ
ಇದ್ದಿದ್ದು ಬಲ್ಗರಂ ಹೊಡೆದುದಿವಸಂ ನೋಡ
ಪೊರ್ದಿದಂತಾಯ್ತು ನೆಱೆ ಸಂಸಾರವುಂ ನೋಡ
ಕಾಮಲತೆಗೊಲಿದಿರ್ದನೆಂಬುದದು ಪುಸಿ ನೋಡ
ಪ್ರೇಮವದು ಶಿವ ಲಿಂಗ ಪೂಜೆಯೆ ದಿಟಂ ನೋಡ
ಅಲ್ಲದಂತಿಂದಿವಂಗೀ ಪದಂ ಸಾರ್ವುದೇ
ಬಲ್ಲಿತೆನಿಸಿದ ಶಿವನ ಭಕ್ತಿಯೊಳಸಾರ್ವುದೇ
ಅಂಗೈಯೊಳಮೃತ ಫಲಮಂ ಪಡೆದನಲ್ಲಮಂ
ಲಿಂಗದ ನಿಜವನೊಚ್ಚತಂ ಗೊಂಡನಲ್ಲಮಂ
ದೇಹಾದಿ ಕರಣಮಂ ಮಿಱಿರ್ದನಲ್ಲಮಂ
ಮೋಹವಱತುದು ತಾನೆ ತಾನಾದನಲ್ಲಮಂ
ಸಾಧನ ಚತುಷ್ಟಯದ ಹಂಗು ಹೊದ್ದದನಿವಂ
ಬೋಧೆಯುಕ್ಕರವಱಿದು ನಿಜವಾದ ನಿಲವಿವಂ
ಕರತಳಾಮಳಕವಾದುದು ತತ್ವವೀತಂಗೆ
ಪರಮ ಶಿವ ಯೋಗಿಗಳ ನಿಜವಾದುದೀತಂಗೆ
ಶಶಿ ರವಿಗಳಂತೆ ಬೆಳ ಬೆಳಗುತಿರ್ದಂ ನೋಡ
ಉಸುರಲಿಲ್ಲದ ಪರ ಬ್ರಹ್ಮವಾದಂ ನೋಡ
ಮುಡಿ ಬಿಚ್ಚಿದುದನಱಿಯ ನುಡಿಸುತಿರ್ದುದನಱಿಯ
ಒಡನೆ ಬರ್ಪರನಱಿಯನಡವಿ ವೂರೆಂದಱಿಯ
ನಾಡೆ ಪೊಗಳ್ವರನಱಿಯ ಆಳಿಗೊಂಬರನಱಿಯ
ನಾಡೊಡೆಯನೆಂದಱಿಯನೇಳು ಜಗಮುಮನಱಿಯ
ಆಹ ಪರಮ ಜ್ಞಾನದಱಿವಿನೆಚ್ಚಱಿಮಱಿವೆ

ಆಹ ಹುಸಿ ಜಗದಿರಂ ಹುಸಿ ಬೆರಸದಚ್ಚ ಱಿವೆ
ಎಂದು ಪುರ ಜನವಿತ್ತ ಕೌತುಕಂ ಬಡುತವಿುರೆ
ಬಂಡನಲ್ಲಮಸರಣ್ಯಂ ಹೆಚ್ಚಿ ಹಿಗ್ಗುತಿರೆ
ಎಲೆಲೆ ಶಿವ ಲಿಂಗ ದೃಢ ನೀ ಬಂದನೀ ಬಂದ
ಎಲೆಲೆ ನಿರ್ಮಳ ಸಿದ್ಧ ನೀ ಬಂದನೀ ಬಂದ
ಎಂಬಂತೆ ಕೋಗಿಲೆಗಳಲ್ಲಿ ಕರೆವುತ್ತವಿುರೆ
ಇಂಪಸಿಂದರಗಿಳಿಗಳಡಿಗಡಿಗೆ ನುಡಿವುತಿರೆ
ನಡೆದುದೇ ಬಟ್ಟೆಯಾದುದು ಶಿವನ ಪುದಕರಿಗೆ
ನುಡಿದುದೇ ವೇದವಾದುದು ಲಿಂಗವಂತಂಗೆ
ಮುಟ್ಟಿದ ಮರಂ ಮನುಜರಾಗಿ ನಡೆವವು ಕೆಲವು
ಮೆಟ್ಟಿದ ಪ್ರಾಣಿ ಸ್ವರ್ಗಕ್ಕೆ ಸಲುಪವು ಕೆಲವು
ಮರನೊಡನೆ ನೆಳಲಾಗಿ ಬರುತವಿುಪ್ಪವು ನೋಡ
ಗಿರಿ ಕೆಲಕೆ ಸಾರ್ದು ಸ್ಯೆವಟ್ಟೆಗೊಡುವವು ನೋಡ
ಹುಲಿ ಹುಲ್ಲೆ ಫಣಿ ನಕುಲ ಸಿಂಹವಾನೆಗಳಲ್ಲಿ
ಕುಲ ವೈರಮಂ ಜಟ್ಟು ನಿಂದು ನೋಡುವವಲ್ಲಿ
ಇಂತು ನೋಡುತ್ತವಿುರಲಲ್ಲಮಂ ಬರುತಿರಲು
ಕಂತು ಹರನವತಾರವೆಂಬಂತೆ ನಡೆತರಲು
ಕರ ತಳದ ಸಿಂಹಾಸನದೊಳಿರ್ದ ಲಿಂಗಕ್ಕೆ
ಚರಿತದಿಂ ವನ ದೇವತೆಯುರೆಯ್ದೆ ವ್ಯೆಯಿಕ್ಕೆ
ನುತ ಚೂತದೆಳದಳಿರು ಹೀಲಿ ದಳೆವಿಡಿದು ಬರೆ
ಲತೆ ಪುಷ್ಪ ಮಂಜರಿಯ ಚಾಮರವನಿಕ್ಕುತಿರೆ
ಶಿವ ಲಿಂಗ ರಾಜ್ಯ ಸುಖದೊಳಗಿರ್ದನಲ್ಲಮಂ
ಭವನ ಕರುಣಾಲೋಕನದೊಳಿರ್ದನಲ್ಲಮಂ

ಇರುತ ಲಿಂಗಕ್ಕೆ ನೋಟದೊಳೆ ಮಜ್ಜನಕೆಱೆದು
ಅರಳ್ದಕ್ಷಿಯೆಂಬ ಪೂವಿಂದೆ ಪೂಜಿಸಿ ಮಱೆದು
ನಱುಸುಯ್ಯ ಕಂಪಿಂದೆ ನವ ಧೂಪಮಂ ಕೊಟ್ಟು
ನೆಱೆ ಮನದ ಬೆಳಗಿನಾರತಿಯೆತ್ತಿ ಪೊಡಮಟ್ಟು

ಸಿಟ್ಟಿಯಿಂ ನೇಹವುಮನಾರೋಗಿಸಲ್ ಕೊಟ್ಟು
ಕಟ್ಟಕ್ಕ ಜಿಚಲಿತಾನಂದಮಂ ಮುಂದಿಟ್ಟು
ಸಕಳ ಸುಖಮಂ ಕಣ್ಗಳಿಂದೆ ಕೈಗೂಡುತುಂ
ಸಕಳ ಭೋಗಂಗಳಂ ನೋಟದಿಂ ನೀಡುತುಂ
ತರು ನಿಕಾಯದ ಕೋಟರಂಗಳೊಳಗಲ್ಲಮಂ
ಗಿರಿ ಕುಳದ ಗಹ್ವರಂಗಳೊಳೆಲ್ಲವಲ್ಲಮಂ
ನೆರೆದ ನಿರ್ಮಳಿಸ ಪುಳಿನ ಸ್ಥಳದೊಳಲ್ಲಮಂ
ಚಂದ್ರ ಕಾಂತದ ಶಿಲೆಯ ತಂಪಿನೊಳಗಲ್ಲಮಂ
ಇಂದ್ರ ನೀಲದ ಮಣಿ ಶಿಲಾ ತಲದೊಳಲ್ಲಮಂ
ಪರಿಮಳದ ಚಂದನದ ತರುಗಳೊಳಗಲ್ಲಮಂ
ಕುರವಕದೊಳಂಕುರದ ಕುಟ್ಮಳದೊಳಲ್ಲಮಂ
ಸಂಪಗೆಯ ಬಿರಿ ಮುಗುಳ ಪೂವಸೆಯೊಳಲ್ಲಮಂ
ಸೊಂಪೆಸೆವ ಕೆಂದಳಿರ ತಾಣದೊಳಗಲ್ಲಮಂ
ಮಾಮರದ ಮಾಧವಿಯ ಮಂಟಪದೊಳಲ್ಲಮಂ
ತಾವರೆಯ ತಣ್ಣೆಳಲ ತಿಳಿ ಗೊಳದಲಲ್ಲಮಂ
ಮಲ್ಲಿಗೆಯ ಮಾಲತಿಯ ಪೊದಱಿನೊಳಗಲ್ಲಮಂ
ಪೊಲ್ಲ ಇರವಂತಿಗೆಯ ಮೊತ್ತದೊಳಗಲ್ಲಮಂ
ಮರದೊಳಗನಂತ ದಿನವಿರುತಿರ್ಪನಲ್ಲಮಂ
ಗಿರಿಯೊಳಗನೇಕ ಮಾಸವನಿಪ್ಪನಲ್ಲಮಂ
ನದಿಯೊಳಗೆ ನೂಱುವರುಷಮನಿಪ್ಪನಲ್ಲಮಂ
ಹೊದಱಿನೊಳಗೆ ಸಿಲುಕಿನಿಂದಿರುತಿರ್ಪನಲ್ಲಮಂ
ಶಿವನ ನೋೞ್ಪಂತೆಲ್ಲಮಂ ನೋೞ್ಪನಲ್ಲಮಂ
ಭವನೊಳಗಿರುತ್ತೆಲ್ಲರೊಳಗಿರ್ಪನಲ್ಲಮಂ
ಎಲ್ಲಿರ್ದನಲ್ಲಿಯೆ ವಸಂತಮಾಸಂ ನೋಡ
ಎಲ್ಲಿರ್ದನಲ್ಲಿ ದಿವ್ಯಕ್ಷೇತ್ರಮುಂ ನೋಡ

ಇಂತು ಶಿವ ಲಿಂಗವೆಂತಿರಿಸಿದಂದದೊಳಿರುತೆ
ಸಂತತಂ ಶಶಿ ಧರಂ ಬರಿಸಿದಂದದೆ ಬರುತೆ

ಬರುತೆ ಬಸವಣ್ಣನಂ ಕಂಡು ಮಾತಾಡುತುಂ
ಹರನ ನಿಲವಿನ ಪರಿಯನೊಲುಮೆಯಿಂ ತೋಱುತುಂ
ನಡೆತಂದು ಚೆನ್ನ ಸೊನ್ನಲಿಗೆಯ ಪುರಕೆ ಬಂದು
ವೃಡ ಮೂರ್ತಿ ಸಿದ್ಧರಾಮನನೊಲಿದು ಸಾರ್ತಂದು
ಕಲಿಯುಗಂ ಪೊಲ್ಲೆಂದು ಬುದ್ಧಿಯಂ ಪೇಳುತಂ
ಸಲೆ ಗುಹೆಗೆ ನಡೆವುದೆಂದೊಲುಮೆಯಂ ತೋಱುತಂ
ಶ್ರೀಪರ್ವತಾಭಿಮುಖನಾದನಲ್ಲಮ ದೇವ
ಆ ಪರ್ವತಂ ಮುಟ್ಟಿ ಬಂದನಲ್ಲಮ ದೇವ
ಅದಱೊಳಗೆ ಕೈ ಕಾಲ್ಗಳುಳ್ಳ ಸರ್ಪಂಗಳಂ
ಮುದದಿಂದ ಮಾತಾಡುತಿಪ್ಪ ವೃಕ್ಷಂಗಳಂ
ನಡೆವ ಗಿಡುಗಳನಷ್ಟವದನದ ಮೃಗಂಗಳಂ
ಅಡಿಗಡಿಗುರಿವುತಿರ್ಪ ದಿವ್ಯೌಷಧಂಗಳಂ
ಹಾಡುವ ಲತಾವಳಿಗಳಂ ಸುಳಿವ ಕಲ್ಗಳಂ
ನೋಡುವ ಮರಂಗಳಂ ಱೆಕ್ಕೆಯ ಗಜಂಗಳಂ
ಸೊಗಯಿಸುವ ದಸಿಯಿಂದಲೆಸೆವ ಪಲ ಗುಹೆಗಳಂ
ಬಗೆದುದಂ ಕುಡುತಿಪ್ಪ ಚೂತ ವೃಕ್ಷಂಗಳಂ
ಇವು ಮೊದಲನೇಕಾದ್ಭುತಂಗಳಂ ನೋಡುತಂ
ಶಿವ ಶಿವಯೆನುತ್ತ ಕೌತುಕವನುಱೆ ತಾಳುತಂ
ಕದಳೀ ಬನದ ಬಟ್ಟೆಗೊಂಡನಲ್ಲಮ ದೇವ
ಅದಿರದನಿಮಿಷ ಸಿದ್ಧ ಲಿಂಗನಲ್ಲಮ ದೇವ

ಅಲ್ಲಿ ಬರುತಿರೆ ಭೈರವಂ ಕಂಡು ಕೈಮುಗಿದು
ಅಲ್ಲಮಂ ಕಾರಣಿಕನೆಂದು ಮನದೊಳಗಱಿದು
ತೋಱಿದಂ ಶಿವನಲ್ಲಿಗೊಯ್ವ ಸೈವಟ್ಟೆಯಂ
ಏಱಿ ಬರುತಿರಲಲ್ಲಮಯ್ಯನತಿ ನಿಷ್ಠೆಯಿಂ
ಮುರಿದಿರ್ದ ಹಾವುಗಳ ಬಳ್ಳಿಯಂ ದಾಂಟುತುಂ
ಘುರಿಘುರಿಲನರಿವ ಬಾಳೆಗಳನಲ್ಲಾಡುತುಂ
ನೆರೆದಿರ್ದ ವಿಷ ಕನ್ನಿಕೆಯರುಮಂ ನೋಂಕುತುಂ

ಪರಿವ ಸಂಜಿನ ಗಾಳಿಗೆಳಸಿ ಮೆಯ್ಯೊಡ್ಡುತುಂ
ಉರಿಯು ಹಳ್ಳಂಗಳಂ ಹೊಕ್ಕು ನೆಱಿ ದಾಂಟುತುಂ
ಉರವಣಿಪ ಭೂತ ಭೇತಾಳರಂ ಸಿಲಿಸುತುಂ
ನಿಂದಲ್ಲಿ ತಪವಿರ್ದ ಹನುಮನಂ ನೋಡುತುಂ
ಬಂದೊಡ್ಡಿದಾಯುಧಂಗಳ ಮೆಟ್ಟಿ ನಡೆವುತುಂ
ಮಾನಿಸರ ಮೋಱಿಯಾನೆಯ ದೇಹದವರ್ಗಳಂ
ನಾನಾ ವಿಧದ ಕಣ್ಣು ಕೈ ಕಾಲ್ಗಳುಳ್ಳರಂ
ಗಾವುದಗಲದ ನೀಳದೊಂದೊಂದಿಱುಂಪೆಯುಂ
ಸಾವಿಲ್ಲದಿರ್ಪ ಸಿದ್ಧರ ಚೆಲುವು ಮೂರ್ತಿಯುಂ
ನೋಡುತಂ ಹರಿವ ಕೆಂಡದ ತೊಱಿಯ ದಾಂಟುತ್ತೆ
ಕೂಡಲರಳಿರ್ದ ವಿಷ ಪುಷ್ಪಮಂ ವಾಸಿಸುತೆ
ಪೇಳೆ ಪವಣಿಲ್ಲದದ್ಭುತಮುಮಂ ಕಾಣುತಂ
ಪೇಳ ಬಾರದ ಭಯಾನಕಮುಮಂ ಕಾಣುತಂ
ಪೊಸತೆಸುತ್ತಲ್ಲಮು ಪ್ರಭುವಲ್ಲಿ ಬರುತಮಿರೆ
ವಿಷಮಾಕ್ಷನವತಾರವೆಂಬಂತೆ ನಡೆವುತಿರೆ

ಇಂತು ಬರುತಿರೆ ಕಾಣಲಾಯ್ತು ಕೈಲಾಸವದು
ಶಾಂತಾರ್ಕ ಕೋಟಿ ಕಿರಣಂಗಳಂ ಬೆಳಗುತದು
ಶಶಿಯ ತಾಯ್ಮನೆಯಂತೆ ಇರ್ದುದಾ ರಜತ ಗಿರಿ
ಪೆಸರ ದೇವರ ಪುಣ್ಯದಂತಿರ್ದುದಭವ ಗಿರಿ
ಆ ಗಿರಿ ಸಾಲ್ಗೊಂಡ ಸುರರ ಸಂದಣಿಯೊಳಗೆ
ನಾಗೇಂದ್ರರಮರೇಂದ್ರ ದೇವ ತಿಂತಿಣಿಯೊಳಗೆ
ಕಿನ್ನರರ ಖೇಚರರ ಸಿದ್ಧರೊತ್ತೊತ್ತೆಯೊಳು
ಪನ್ನಗರ ಗಂಧರ್ವ ಕುಲದ ನಡುವಳ್ತಿಯೊಳು
ಹರನೋಲಗದ ಪಿರಿಯ ಬಾಗಿಲ್ಗೆ ನಡೆತಂದು
ಹರಿಯಜಸುರಾವಳಿಯ ಸಂದಣಿಯೊಳಗೆ ನಿಂದು
ಬರುತಿರಲು ದೂರದಿಂದಲ್ಲಮಯ್ಯನ ಕಂಡು
ಹರನಿತ್ತಬಾರಿತ್ತಬಾರೆನುತ ಕೈಕೊಂಡು

ಕರೆಯೆ ಲಿಂಗದ ನೋಟವಚ್ಚಳಿಯದೆಯ್ತಂದು
ಹರುಷದಿಂ ಹರ ಸಭಾ ಭವನದ ನಡುವೆ ನಿಂದು
ನ್ಮೈಯಿಕ್ಕಲೆಂದಲ್ಲಮಂ ಕೊಂಕಿ ಬಾಗುತಿರೆ
ಕೈಯು ಲಿಂಗಂ ಸಹಿತವಾಗದೆಂದೆನುತವಿರೆ
ಹರನ ಚರಣಕ್ಕೆಱಗಿ ಕುಳ್ಳಿರ್ದನಲ್ಲಮಂ

ಪರಮೇಶ್ವರಂ ಕೌತುಕಂ ಬಡುತ್ತೆಲ್ಲಮಂ
ಕೇಳ್ದು ನೆಱೆ ಹೋದ ಬಂದಾದ ವೃತ್ತಾಂತಮಂ
ತಾಳ್ದು ಮನದೊಳಗಕ್ಕಱಿಂದ ಸಂತೋಷಮಂ
ಮುನ್ನಿನಂದದೊಳು ನಿರ್ಮಾಯವೆಸರಂ ಸಲಿಸೆ
ಮನ್ನಿಸುತ್ತಲ್ಲಿ ಗಣ ಪದವಿಯೊಳು ಸ್ಥಿತಿರಿಸೆ
ಶಿವನ ಸಾರೂಪ್ಯದಿಂದೊಪ್ಪಿರ್ದನಲ್ಲಮಂ
ಭವನ ಸುಪ್ರಭೆಯೊಳಗೆ ಸಂದಿರ್ದನಲ್ಲಮಂ
ನಿರುಪಾಧಿಕ ಜ್ಯೋತಿಯೊಳಗಿದ್ದನಲ್ಲಮಂ
ಪರಮ ತತ್ವಾಕಾರನಾಗಿರ್ದನಲ್ಲಮಂ
ಇಂತು ಭಕ್ತರ ಪುಣ್ಯ ಲೀಲೆಯಂ ನೋಡುತುಂ
ಸಂತತಂ ನತ ಜನವನೊಲ್ದು ಕೊಂಡಾಡುತುಂ
ಕಾಮ ಕಾನನ ದವಾನಲರೂಪನೊಪ್ಪಿದಂ
ಸೋಮ ಸೂರ್ಯಾಗ್ನಿ ನೇತ್ರ ತ್ರಯನುವೊಪ್ಪಿದಂ
ಗಿರಿಜಾ ಮುಖಾಬ್ಜ ಭಾಸ್ಕರ ರೂಪನೊಪ್ಪಿದಂ
ಗುರು ಮೂರ್ತಿ ಹಂಪೆಯ ವಿರೂಪಾಕ್ಷನೊಪ್ಪಿದಂ

ಕಂ॥ ಧರೆ ಬೆಜಿಗಾಗಲು ಸುರ ಕುಲ।
ವರಿದರಿದೆನಲಲ್ಲಮಯ್ಯನಂ ಮೆಱೆದ ಮಹೇ
ಶ್ವರನೊಲಿದು ಭಕ್ತಿಯಂ ಸಾ।
ದರದಿಂದೆನ(ಗೀವುತಿರ್ಕೆ ಹಂಪೆಯ ರಾಯಂ)[1]॥

---

1. ಗಿರ್ಕೆ (ಗೀಗೆ?) ಹಂಪೆಯ ವಿರೂಪಾಕ್ಷಂ.

## ಕೆಲವು ಅಚ್ಚಿನ ತಪ್ಪುಗಳು

| ಪದ್ಯ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೬೫ | ೨ | ಹೊದೆದಲ್ಲಿ | ಹೊದೆದೊಲ್ಲಿ |
| ೭೮ | ೨ | ನಾನೆನುತ | ನಾನೆನುತ್ತ |
| ೧೧೪ | ೧ | ಕಂಡರೇಕೋ ಭಾವದಲಿ | ಕಂಡರೇಕೋ ಭಾವದಲಿ |
| ೨೪೬ | ೬ | ಲಿಂಗನೊಲಿದನ್ಯೋಪದೇಶದಲಿ | ಲಿಂಗನೊಲಿದನ್ಯಾಪದೇಶದಲಿ |
| ೩೩೯ | ೫ | ಭಕ್ತಿ ಯುಕ್ತ್ಯಾ | ಭಕ್ತಿ ಯುಕ್ತಾ |
| ೩೪೭ | ೩ | ನಿಲುಕದಿಹುದಜಿಃದಾ | ನಿಲುಕದಿಹುದರಿದಾ |

# ಪ್ರಭುಲಿಂಗಲೀಲೆಯ ಸಂಗ್ರಹ

ಈ ಪುಸ್ತಕದ ಪಾಠವನ್ನು ಮುಖ್ಯವಾಗಿ ನಾಲ್ಕು ಪ್ರತಿಗಳ ಆಧಾರದಿಂದ ಗೊತ್ತುಮಾಡಿದೆ. ಇವುಗಳಲ್ಲಿ ಮೂರು ಓಲೆಯ ಪ್ರತಿಗಳು; ಒಂದು ಮುದ್ರಿತವಾದ ಅಶುದ್ಧ ಪ್ರತಿ. ಮಡಿಕೇರಿಯಿಂದ ಶ್ರೀಮಾನ್ ಬಿ. ಎಸ್. ಕೃಷ್ಣಮೂರ್ತಿಗಳು ಕಳುಹಿಸಿದ ಓಲೆಯ ಪ್ರತಿ ಶುದ್ಧವಾದುದು. ಅದನ್ನೇ ಮೂಲವಾಗಿಟ್ಟುಕೊಂಡು ಮೈಸೂರು ಓರಿಯೆಂಟಲ್ ಲೈಬ್ರೆರಿಯ ಓಲೆಯ ಪ್ರತಿಗಳಲ್ಲಿ ಎರಡರ ಪಾಠಾಂತರಗಳನ್ನು ಪರಿಶೀಲಿಸಿ ಯುಕ್ತವಾದುವುಗಳನ್ನು ಸೇರಿಸಿಕೊಳ್ಳಲಾಯಿತು. ಹೀಗೆ ಸಂಗ್ರಹವನ್ನು ಮಾಡಿಕೊಂಡು, ಮೈಸೂರು ಓರಿಯಂಟಲ್ ಲೈಬ್ರೆರಿ, ಮದ್ರಾಸ್ ಓರಿಯಂಟಲ್ ಲೈಬ್ರೆರಿ ಮತ್ತು ಧಾರವಾಡದ ಲಿಂಗಾಯತ ಎಡ್ಯುಕೇಷನ್ ಅಸೋಸಿಯೇಷನ್ ಮುಂತಾದ ಸಂಸ್ಥೆಗಳಲ್ಲಿರುವ ಇತರ ಪ್ರಭುಲಿಂಗಲೀಲೆಯ ಪ್ರತಿಗಳನ್ನು ಪರೀಕ್ಷಿಸಿ ಅನುಮಾನ ಬಂದ ಕಡೆಗಳಲ್ಲಿ ಪಾಠಾಂತರಗಳನ್ನು ಉಪಯೋಗಿಸಕೊಳ್ಳಲಾಯಿತು. ಹೀಗೆ ಕವಿಯ ಆಶಯವನ್ನೇ ಮುಖ್ಯವಾಗಿ ಲಕ್ಷ್ಯದಲ್ಲಿಟ್ಟುಕೊಂಡು ಸಾಧ್ಯವಾದಮಟ್ಟಿಗೂ ಶುದ್ಧವಾದ ಪಾಠವನ್ನೇ ಈ ಪುಸ್ತಕದಲ್ಲಿ ಕೊಡಲಾಗಿದೆ. ಪಾಠಾಂತರಗಳನ್ನು ಅಡಿಟಿಪ್ಪಣಿಗಳಲ್ಲಿ ಕೊಡುವುದರಿಂದ ವಿದ್ಯಾರ್ಥಿಗಳಿಗೂ, ಸಾಮಾನ್ಯರಾದ ಓದುಗರಿಗೂ ಹೆಚ್ಚು ಪ್ರಯೋಜನವಾಗುವುದಿಲ್ಲವೆಂಬ ಅಭಿಪ್ರಾಯದಿಂದ ಅವುಗಳನ್ನು ಕೊಟ್ಟಿಲ್ಲ.

ಈ ಸಂಗ್ರಹ ಕಾರ್ಯದಲ್ಲಿ ಓಲೆಯ ಪ್ರತಿಗಳನ್ನು ದೊರಕಿಸಿಕೊಟ್ಟು ಉಪಕಾರಮಾಡಿದ ಶ್ರೀಮಾನ್ ಬಿ. ಎನ್. ಕೃಷ್ಣಮೂರ್ತಿಗಳು, ಧಾರ್ವಾಡದ ಲಿಂಗಾಯತ ಎಡ್ಯುಕೇಷನ್ ಅಸೋಸಿಯೇಷನ್ನಿನ ಶ್ರೀಮಾನ್ ಹಾಲಬಾವಿ ವೀರಭದ್ರಪ್ಪನವರು, ಮೈಸೂರು ಮತ್ತು ಮದ್ರಾಸ್ ಓರಿಯಂಟಲ್ ಲೈಬ್ರೆರಿಯ ಅಧಿಕಾರಿಗಳು ಇವರಿಗೆಲ್ಲ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಈ ಮೂಲಕ ಸಮರ್ಪಿಸಿದೆ.

ಎಂ. ಎಸ್. ಬ.



# ಪ್ರಭುಲಿಂಗಲೀಲೆಯ ಸಂಗ್ರಹ

ಗತಿ ೧

## ಪಾರ್ವತಿಯ ಪ್ರತಿಜ್ಞೆ

ಶ್ರೀಮದಮಲ ಜ್ಞಾನ ಭಕ್ತಿ
ಪ್ರೇಮ ವೇದ ಪುರಾಣ ಶಾಸ್ತ್ರ
ಸ್ತೋಮ ನುತ ಸತ ಚಾರು ಚರಣಾಂಭೋಜ ಘನ ಮಹಿಮ ।
ನಾಮ ರೂಪ ಕ್ರೀ ಕಳಾಪ ವಿ
ರಾಮನನುಪಮ ದಿವ್ಯ ತೇಜೋ
ವ್ಯೋಮ ಮೂರುತಿ ಗುರು ಗುಹೇಶ್ವರ ಲಿಂಗ ಶರಣಾರ್ಥಿ ॥ ೧ ॥

ಅಲ್ಲಮ ಪ್ರಭು ಸಂಪ್ರದಾಯದ
ಸಲ್ಲಲಿತ ಸನ್ಮಾರ್ಗವನು ನಾ
ನೆಲ್ಲರರಿವಂದದಲಿ ಪೇಳುವೆನುಚಿತ ವಚನದಲಿ ।
ಸೊಲ್ಲಿನೊಳಗಣ ಸೊಂಪನಿಂಪನು
ಬಲ್ಲವರು ಭಾವುಕರು ಭಕ್ತಿಯ
ಬಲ್ಲಿದರು ಲಾಲಿಸುವುದೀ ಪ್ರಭು ಲಿಂಗ ಲೀಲೆಯನು ॥ ೨ ॥

ದೇಗುಲವೆ ಮಾತಾಡುವಂದದೊ
ಳಾಗಿರದೆ ಒಳಗಿರ್ದು ನುಡಿದಡೆ
ಲೋಗರಿಗೆ ಪ್ರತಿಶಬ್ದದಿಂದಾ ಪರಿಯಲೆನ್ನೊಳಗೆ ।
ಲಾಗಿನಿಂದಲಿ ಗುರು ಗುಹೇಶ್ವರ
ನಾಗಳೆನ್ನನು ನುಡಿಸಿದಡೆ ನುಡಿ
ದಾಗುಮಾಡಿಯೆ ಪೇಳ್ದೆನೀ ಪ್ರಭು ಲಿಂಗ ಲೀಲೆಯನು ॥ ೩ ॥

ಬಾಯ ನುಡಿಗಳ ಕೇಳಿ ಕಿವಿಯೊಳ
ಗಾಯೆನುತ ಪರಿಣಮಿಸಿ ಹೋಹ ವಿ
ಡಾಯವಲ್ಲಿದು ತಮ್ಮ ತನು ಮನ ಧನವನೆಲ್ಲವನು ।
ಬೀಯ ಮಾಡಿಯೆ ಲಿಂಗದಲಿ ನಿಜ
ಕಾಯ ನಿಲುವಡೆ ನಿತ್ಯರಪ್ಪಡೆ
ದಾಯಿಗರು ಲಾಲಿಸುವುದೀ ಪ್ರಭು ಲಿಂಗ ಲೀಲೆಯನು ॥ ೪ ॥

ಸತ್ತವರ ಕಥೆಯಲ್ಲ ಜನನದ
ಕುತ್ತದಲಿ ಕುದಿಕುದಿದು ಕರ್ಮದ
ಕತ್ತಲೆಗೆ ಸಿಲುಕುವರ ಸೀಮೆಯ ಹೊಲಬು ತಾನಲ್ಲ ।
ಹೊತ್ತು ಹೋಗದೆ ಪುಂಡರಾಲಿಪ
ಮತ್ತ ಮತಿಗಳ ಗೋಷ್ಠಿಯಲ್ಲಿದು
ಸತ್ಯ ಶರಣರು ತಿಳಿವುದೀ ಪ್ರಭು ಲಿಂಗ ಲೀಲೆಯನು ॥ ೫ ॥

ಕುಱಿಗಳೋಪಾದಿಯಲಿ ಕಬ್ಬಿನ
ಹೊಱಗಣೆಲೆಯನು ಮೇದಕಟ ಮೆಲು
ಕಿಱಿವುತಲ್ಪ ಸುಖಕ್ಕೆ ಸೋಲದೆ ಕಬ್ಬಿನೊಳು ರಸವ ।
ನೆಱೆ ಸವಿವ ಗಜದಂತೆ ಭಕ್ತಿಯ
ತೆಱನ ತಿಳಿದಾಚರಿಸಬೇಕೆಂ
ದಱಿವವರು ಲಾಲಿಸುವುದೀ ಪ್ರಭು ಲಿಂಗ ಲೀಲೆಯನು ॥ ೬ ॥

ಮಿಸುಪ ಸತ್ವಗುಣ ಪ್ರಭಾವ
ಪ್ರಸರವೇ ರಜತಾದ್ರಿಯೆಂಬೀ
ಪೆಸರು ವೆತ್ತು ನವೀನ ವಿಮಲಾಕಾರ ವೃತ್ತಿಯಲಿ ।
ದೆಸೆದೆಸೆಗೆ ದೇದೀಪ್ಯಮಾನದ
ಲೆಸೆದುದಂತಿಂತೆಂದು ಮಿಗೆ ಬ
ಣ್ಣಿಸಲು ಬಲ್ಲವನಾವನಾ ಕೈಲಾಸ ಪರ್ವತವ ॥ ೭ ॥

ನಿಗಮ ನಿಕರದ ಸುತ್ತುವಳೆಯುದ
ಬಿಗಿದ ಕೋಟೆಯು ಶಾಸ್ತ್ರ ಸಂಚಯ
ದಗಳಿನಾಗಮ ಸಮುದಯಂಗಳ ದಾರವಟ್ಟಗಳ ।
ಹಗಲಿರುಳು ಹಂಗಿಲ್ಲದತಿ ಮಹಿ
ಮೆಗಳಿಗಾಸ್ಪದವಾಗಿ ಮಿಗೆ ಝಗ
ಝಗಿಸುತಿರ್ದುದು ರಮ್ಯವೆನೆ ರಜತಾದ್ರಿ ರಚನೆಯಲಿ ॥ ೮ ॥

ನಿರುತ ನಿಜ ಸುಖ ದೇವತಾ ಮಂ
ದಿರದ ಚಿತ್ತ ಸ್ಥಿರದ ಬಾಗಿಲ
ಪಿರಿದು ಪರಮಾನಂದದೊಡ್ಡೋಲಗದ ಚಾವಡಿಯು ।
ನೆರೆದು ಶೋಭಿಸುವಷ್ಟಮಹದೈ
ಶ್ವರಿಯ ಮೊದಲಾಗಿರ್ದ ನಾನಾ
ಪರಿಯ ಸಂಪದ ಸಂದಣಿಸಿದುದು ಶಿವನ ಭವನದಲಿ ॥ ೯ ॥

ಹೊಳೆವ ಸಮ್ಯಜ್ಞಾನ ಪೀಠ
ಸ್ಥಳದಲತ್ಯಾನಂದ ನಿಜ ನಿ
ಶ್ಚಳ ನಿರಾಕುಳ ನಿರ್ವಿಕಾರ ನಿರಾಳ ನಿಶ್ಚಿಂತ ।
ಬಳಸ ಬಾರದ ಪಿರಿಯ ಬೊಮ್ಮದ
ಹೊಳಹು ಸಾಕ್ಷಾತ್ಕರಿಸಿ ನೆಱೆತಿ ನಿ
ರ್ಮಳತೆ ಮೆತ್ತಾ ರುದ್ರನಿರುತಿರ್ಪನು ವಿನೋದದಲಿ ॥ ೧೦ ॥

ಉರಗನಾಭರಣದ ಲಸನ್ಮಣಿ
ವಿರಚಿಸುವ ಭೂಷಣದ ಕಾಯದ
ಪರಮ ಶುದ್ಧ ಸ್ಫಟಿಕ ಕಾಂತಿಯ ದಿವ್ಯ ತನು ರುಚಿಯ ।
ಗಿರಿಸುತೆಯನೀಕ್ಷಿಸುವ ನೋಟದ
ಹರನ ನೋಡುವ ವರ ಕಟಾಕ್ಷದ
ಚೆರಕೆಯು ಪ್ಪಿನ ದೇವ ದೇವಿಯರಿರ್ದರೊಲವಿನಲಿ ॥ ೧೧ ॥

ಶಶಿಯ ಶೀತಳದಂತೆ ಕರ್ಪುರ
ದೆಸೆವ ಕಂಪುಗಳಂತೆ ಕನಕದ
ಮಿಸುಪ ಕಾಂತಿಗಳಂತೆ ನವ್ಯಸುಧಾಂಶು ರುಚಿಯಂತೆ ।
ಲಸಿತ ಮಿಥುನಾಳಾಪ ಹೊಱಗಾ
ಣಿಸದೆ ಶಕ್ತಿ ಸಮೇತ ಶಂಕರ
ನೊಸೆದು ಕುಳ್ಳಿತು ಮೆಱೆವುತಿರ್ದನು ದಿವ್ಯತೇಜದಲಿ ॥ ೧೨ ॥

ಜಡೆಗಳೇ ಬೇರುಗಳು ಗಂಗೆಯು
ಮಡುವೆ ಬೆಳಸೀರಂಗವೇ ತರು
ತೊಡವೆ ಪರ್ಣಗಳಭಯವರದವೆ ಕುಸುಮ ಸತ್ಫಲವು ।
ಒಡಲನಪ್ಪಿದ ಮಡದಿಯೇ ಬಿಡ
ದಡರಿ ಹಬ್ಬಿದ ಲತೆಯೆನಲ್ಕಾ
ಮೃಡನೆನಿಪ ಮೂಲಾತ್ಮವೃಕ್ಷವಹಾ ವಿರಾಜಿಸಿತು ॥ ೧೩ ॥

ಬೆಳಗು ಮಣಿಭೂಷಣದಿನತಿ ಮೈ
ವೆಳಗು ಭೂಷಣ ಮೈವೆಳಗಿನಿಂ
ಬೆಳಗು ನಖನಯನಂಗಳಾಸ್ಥಾನದ ಮಹೋತ್ತಮರ ।
ಬೆಳಗು ಬೆಳೆದಾ ಶಿವನ ಮೂರ್ತಿಯ
ಬೆಳಗಿನೊಳು ಬೆರಸಿದಡೆ ಸಭೆಯದು
ಬೆಳಗುತಿರ್ದುದು ಶುದ್ಧಜ್ಯೋತಿರ್ಲೋಕವೆಂಬಂತೆ ॥ ೧೪ ॥

ಇರುತಲೊಂದಾನೊಂದು ದಿನ ವಿ
ಸ್ತರ ವಿನೋದಂಗಳಲಿ ಸಭೆಯೊಳು
ಪರಕಲಸಿ ದಂತಚ್ಛವಿಯ ಬೆಳುದಿಂಗಳನು ಸುರಿವ ।
ಕರ ಚೆಲುವ ಬಾಯ್ದೆರೆಯ ಪರಮೇ
ಶ್ವರಿ ನಿಜಾಂತಃಕರಣ ಜನಿತ
ಸ್ಫುರಣೆಯನು ಬಿನ್ನೈಸಲುದ್ಯೋಗಿಸಿದಳಭವಂಗೆ ॥ ೧೫ ॥

ಶಿವನೆ ನಿನ್ನೊಡ್ಡೋಲಗದೊಳೊ
ಪ್ಪುವ ಮಹಾ ಘನ ಮಹಿಮರೆಲ್ಲರು
ಭವಕೆ ಬಾರದೆ ನಿತ್ಯಸುಖದಿಂದಿಪ್ಪರೋ ಮೇಣು ।
ಇವರಿಗೆಯು ನೆಲೆಯಿಲ್ಲವೋ ಪೇ
ಳಿವರವಸ್ಥೆಯನೆನುತ ಕೇಳಲು
ಶಿವೆಗೆ ತಿಳಿವಂದದಲಿ ಬಳಿಕಾ ಶಂಭುವಿಂತೆಂದ ॥ ೧೬ ॥

ಗಿರಿಜೆ ಅಹುದೌ ನಿನ್ನ ಬುದ್ಧಿಯ
ಪರಿಯದೊಳ್ಳಿಯ ಪ್ರಶ್ನೆಯಾಯಿತು
ಹರಿ ವಿರಿಂಚಿಗಳಾದಿಯಾದವರಾದಡೆಯು ತುದಿಗೆ ।
ವಿರಚಿಸುತ್ತಿಹ ನಾಮ ರೂಪುಗ
ಳೊರೆದ ತತ್ಕ್ರಿಯೆ ಇದ್ದವಾದಡೆ
ದೊರಕಲರಿಯದು ನಿತ್ಯಸುಖವಗಜಾತೆ ಕೇಳೆಂದ ॥ ೧೭ ॥

ಆಗಲಾದಡೆ ನಾಮ ರೂಪ
ಕ್ರೀಗಳನು ಗೆಲಬಲ್ಲ ವಿಮಳೋ
ದ್ಯೋಗವಾವುದು ಕರುಣಿಸದ ಜ್ಞಾನರಿಯ ಬೇಕೆನಲು ।
ನಾಗಭೂಷಣ ದುರಿತ ಭೀಷಣ
ರಾಗ ಶೋಷಣ ಭಜಕ ಪೋಷಣ
ನಾಗಳಾ ಪಾರ್ವತಿಗೆ ಕರುಣಿಸಿ ಶಂಭುವಿಂತೆಂದ ॥ ೧೮ ॥

ಭೋಗ ಭೂಮಿಯ ಭೋಗ ತನುವಿನ
ಲಾಗದನುಪಮ ಸಿದ್ಧಿ ಕರ್ಮೋ
ದ್ಯೋಗ ಭೂಮಿಯು ಕರ್ಮ ತನುವಿನಲಲ್ಲದದರಿಂದ ।
ಯೋಗ ಯೋಗ್ಯರು ಯೋಚಿಸುತ ಭೂ
ಭಾಗದೊಳು ಮಾನವ ಶರೀರಿಗ
ಳಾಗಿ ಸಾಧಿಸಿ ನಿಜವನರಿವರು ಗಿರಿಜೆ ಕೇಳೆಂದ ॥ ೧೯ ॥

ಎನೆ ಹಸಾದವದಪ್ಪುದಾದಡೆ
ಮನುಜಲೋಕದೊಳಾವ ಪರಿಯಿಂ
ದನುಭವ ಸ್ಥಿತಿ ಗತಿಯನುಪದೇಶಿಸುವ ಗುರುವಾರು ।
ಎನಗೆ ತಿಳಿವಂದದಲಿ ಪೇಳೆನ
ಲೆನಿಯಳಿಗೆ ವಿಸ್ತರಿಸಬೇಕೆಂ
ದನುಕರಿಸಿದನು ಶಂಭು ತತ್ಪ್ರೋದ್ಯೋಗದಾಯಿಗನ ॥ ೨೦ ॥

ಏನ ಹೇಳುವೆನಾದಿಯಲಿ ಸು
ಜ್ಞಾನಿ ನಿರಹಂಕಾರರೆಂಬರ
ನೂನ ತಪವನು ಮಾಡಲೆನ್ನ ನಿಜಸ್ವರೂಪವರ ।
ಸೂನುವೆಂಬಂದದಲಿ ಸುಳಿದನು
ತಾನೆ ಅಲ್ಲಮನೆಂಬ ಪೆಸರಲಿ
ಮಾನಿನಿಯೆ ಕೇಳಾ ಮಹಾತ್ಮನಲಱೆವುದಱೆವುಗಳ ॥ ೨೧ ॥

ಅಲ್ಲಮ ಪ್ರಭುವೆನಿಪನಾತನ
ಬಲ್ಲೆ ನಾನೀಗಱೆದೆ ಬಳಿಕಿ
ನ್ನಲ್ಲಿ ನಿಜತತ್ವ ಸ್ವರೂಪವನಱೆವುದೇನರಿದು ।
ಒಳ್ಳಿತಾಯಿತು ತಿಳಿಯ ಬೇಕೆಂ
ಬೆಲ್ಲರಿಗೆ ಕರ ಸುಲಭವೆನುತಲಿ
ಬುಲ್ಲವಿಸಿ ಗಿರಿಜಾತೆ ನುಡಿಯಲು ಶಂಭುವಿಂತೆಂದ ॥ ೨೨ ॥

ಖಾತಿಗೊಳ್ಳದಿರಾಡಿ ತೋಱೆದ
ಡೀತ ನಿಷ್ಠುರನೆನ್ನದಿರು ಬಱೆ
ಮಾತು ಮಾತಿಗೆ ಸಿಕ್ಕನಾರಾರಾವ ಭಕ್ತಿಗಳ ।
ರೀತಿಗಳಲಿಹರವರಿಗವರ
ಪ್ರೀತಿಯಲಿ ರೂಪಾಗಿ ತೋಱುವ
ನಾತನನುಪಮನಗಜೆ ಕೇಳ್ ಸಾಮಾನ್ಯನಲ್ಲೆಂದ ॥ ೨೩ ॥

ಇದು ಯಥಾರ್ಥದ ವಾಕ್ಯವದು ತ
ಪ್ಪದು ವಿಚಾರಿಸಲುಳಿದವರಿಗಾ
ಗದು ಮಹಾ ದುಸ್ತರತೆ ಎನ್ನಯ ಚಾರು ಚತುರತೆಗೆ ।
ಹೃದಯವನು ತೋಱಿಸದೆ ಅಲ್ಲಮ
ಹದುಳ ಹೋಹನೆ ಕಾಬೆನೆನುತಲಿ
ಮದ ಮತಿಯಲಾ ಗಿರಿಜೆ ನುಡಿದಡೆ ಶಂಭುವಿಂತೆಂದ ॥ ೨೪ ॥

ರಾಣಿ ಅಹುದೌ ನಿನ್ನ ಬುದ್ಧಿಯ
ಕಾಣ ಬಹುದಿನ್ನಾದಡೀ ಪರಿ
ಹೂಣಿಕೆಯ ನುಡಿದಿನ್ನು ಹೋದಡೆ ಸೋಲ ನಿನಗೆನಲು ।
ಮಾಣು ಬಱಿ ಮಾತುಗಳನೆನುತಾ
ಪ್ರಾಣ ವಲ್ಲಭಗೆಂದಳಾ ಶ
ರ್ವಾಣಿ ಎನ್ನಯ ಪ್ರೈಜೆಯಿದೆ ಅಹುದೆಂದಳದಟಿನಲಿ ॥ ೨೫ ॥

ಬಳಿಕಲಂಬಿಕೆ ತನ್ನ ತಾಮಸ
ಕಳೆಯೆ ಮೂರುತಿಯಾದ ಮಾಯೆಯ
ನಿಳೆಯಲುದಯಿಸಿ ಅಲ್ಲಮನ ನೀನಱಿದು ಬಾರೆನಲು ।
ತಿಳಿವೆನಾತನ ನಿಜವಸಥವಾ
ಸೆಳೆದನಾದಡೆ ಮುಟ್ಟಿ ಹಿಡಿಕೊಂ
ಡೆಳೆದು ತಹೆ ನಾನೆನುತ ಪ್ರೈಜೆಯ ನುಡಿದಳಾ ಮಾಯೆ ॥ ೨೬ ॥

ಇಂತು ನುಡಿದುನ್ಮತ್ತ ವೃತ್ತಿ
ಭ್ರಾಂತಿನಲಿ ತನ್ನಳವನಱಿಯದೆ
ಕಂತು ಹರನಾಸ್ಥಾನದಲಿ ಬೀಳ್ಕೊಂಡು ಬಿಂಕದಲಿ ।
ಮುಂತೆ ಮಲೆವುತ ನಲಿದು ಭೂಲೋ
ಕಾಂತರವ ನಿಶ್ಚೈಸಿ ಮಾಯಾ
ಕಾಂತೆ ಕಡು ಭರವಸದಲೆಯ್ದಿದಳತಿ ವಿನೋದದಲಿ ॥ ೨೭ ॥

ಗತಿ ೨

## ಮಾಯಾ ದೇವಿಯ ಬಾಲ್ಯ

ಚಿತ್ತವಿಸುವುದು ಸಕಲ ಶಿವ ಭ
ಕ್ತೋತ್ತಮರು ಮುಂದಣ ಕಥಾ ಸ
ದ್ವಿತ್ತರವನಮರಾದ್ರಿಗೊಪ್ಪುವ ತೆಂಕ ದಿಕ್ಕಿನಲಿ ।
ಸತ್ಯದಲಿ ಸದ್ಭಕ್ತಿಯಲಿ ಸ
ದ್ವೃತ್ತಿಯಲಿ ಸಚ್ಚರಿತದಲಿ ಸಂ
ಪತ್ತಿನಲಿ ಸಲೆ ಸೊಗಸಿ ಬೆಳುವಲ ದೇಶ ಮೆಱೆದಿಹುದು ॥ ೨೮ ॥

ಅದಱೊಳವನೀ ಕಾಂತೆಗೊಪ್ಪುವ
ವದನವೋ ಶೃಂಗಾರ ಸಾರದ
ಸದನವೋ ಸೊಬಗಿನ ಸುಮಾನದ ಸುಖದ ಸೆಲೆ ವೀಡೊ ।
ಸುದತಿ ರತ್ನಗಳೊಗೆವ ಚೆಲುವಂ
ಬುಧಿಯೊ ಪೇಳೆನೆ ಸಕಲ ಸೌರಂ
ಭದಲಿ ಸೊಗಸಿಹುದಲ್ಲಿ ಬನವಸೆಯೆಂಬ ಪಟ್ಟಣವು ॥ ೨೯ ॥

ಆವ ಕಾಲದಲಾದಡೆಯು ಫಲ
ವೀವುತಿಹ ಪನಸುಗಳು ನೇಱಿಲು
ಮಾವು ದಾಡಿಮ ತೆಂಗು ನಾರಂಗಾದಿ ತರು ಲತೆಯು ।
ತೀವಿ ಚರಿಸುವ ಶುಕ ಪಿಕ ಭ್ರಮ
ರಾವಳಿಯ ನಾನಾ ವಿಧದ ಶೋ
ಭಾವಹವೆ ತಾನಾದುದಾ ಬನವಸೆಯಲುದ್ಯಾನ ॥ ೩೦ ॥

ಕೇರಿಕೇರಿಯು ತಳಿರಿಡಿದ ಗುಡಿ
ತೋರಣಂಗಳ ಪರಿಮಳಿಸುತಿಹ
ಸಾರಣೆಯು ಕಾರಣೆಯು ಗಂಧೋದಕದ ಚಳೆಯುಗಳ ।
ಸೌರಭದ ಪೂವಲಿಗಳಲಿ ಸಿಂ
ಗಾರಿಸಿದ ಬೀದಿಗಳ ಸೊಬಗಿನ
ಸಾರದಲಿ ಸಮನಿಸಿದುದತಿ ಸೌರಂಭ ಬನವಸೆಯು ॥ ೩೧ ॥

ವೇದ ಶಾಸ್ತ್ರಾಗಮ ಪುರಾಣವ
ನೋದುವಾ ದನಿಯಿಂದ ಕಳಸೊಳು
ಕಾದಿ ಗೆಲಿದತಿ ಬಳರ ಕೈವಾರಿಸುವ ದನಿಯಿಂದ ।
ಬೀದಿ ಬೀದಿಗಳಲ್ಲಿ ವಿಗಡ ವಿ
ರೋಧ ಮದ ಗಜ ತತಿಯ ಬೃಂಹಿತ
ನಾದದಲಿ ಕಳಕಳತೆ ವೆತ್ತಿಹುದಾಗಳಾ ಪುರವು ॥ ೩೨ ॥

ನುಡಿದು ಜಾಣರು ಸಕಲ ಶಬುದವ
ನಡೆದು ಜಾಣರು ನಿಖಿಳ ರೀತಿಯ
ಕುಡಲು ಜಾಣರು ಕುಂದದಂತಿರಲರ್ಥಿಗರ್ಥವನು ।
ಪೊಡವಿಗಿದು ಪೊಸತೆಂಬ ಜನ ಪದ
ವಿಡಿದು ಕಿಕ್ಕಿಱಿಗಿಱಿವ ಬನವಸೆ
ಗೊಡೆಯನಾಗಿರುತಿರ್ಪನಾ ಮಮಕಾರ ಭೂಪಾಲ ॥ ೩೩ ॥

ಆರು ಬಣ್ಣಿಸ ಬಲ್ಲರಾ ಮಮ
ಕಾರ ನೃಪನ ಮಹಾ ಪ್ರತಾಪವ
ಶೂರತೆಯು ಸಾಹಸವನಾತನ ಸಕಲ ಗುಣ ಗಣವ ।
ಧಾರಿಣಿಯೊಳಪ್ರತಿಮನಾಗಿ ಉ
ದಾರತೆಯಲಿರುತಿರ್ಪನಾತಗೆ
ನಾರಿಯಾಗಿಹಳೊಬ್ಬ ಮಾನಿನಿ ಮೋಹಿನೀ ದೇವಿ ॥ ೩೪ ॥

ಕುಸುಮ ಬಾಣನೊ ರತಿಯೊ ಮೇಣಾ
ಶಶಿಯೊ ರೋಹಿಣಿ ದೇವಿಯೋ ಮೇ
ಣೆಸೆವ ಸುರಪನೊ ಶಚಿಯೊ ಮೇಣ್ ಪುರುಷೋತ್ತಮನೊ ಸಿರಿಯೊ।
ಹೆಸರಿಡಲು ಹವಣಿಲ್ಲವೆಂಬೊಂ
ದಸಮ ಸಮ್ಮೇಳದ ಸಗಾಢದ
ಬೆಸುಗೆಯಲಿ ಮಮಕಾರ ನೃಪ ಮೋಹಿನಿಯರೆಸೆದಿಹರು ॥ ೩೫ ॥

ಅವರು ಮಕ್ಕಳ ಬಯಸಿ ಭರದಲಿ
ವಿವಿಧ ಗೌರೀ ವ್ರತವು ಮೊದಲಾ
ದವನು ನಾನಾ ಶಕ್ತಿ ದೇವತೆಯರ ಸಮೂಹವನು ।
ಶಿವ ಪದಪ್ರಾಂತವನು ಸಾರದೆ
ಕವಲು ವಟ್ಟೆಗಳಲ್ಲಿ ಜಡ ದೈ
ವವನು ಬಿಂಗೆ ಮಮಕಾರ ನೃಪ ಮೋಹಿನಿಯರರ್ಚಿಪರು ॥ ೩೬ ॥

ಭಾವಿಸಲು ಮಮಕಾರ ಮೋಹಿನಿ
ದೇವಿಯರ ಬಸಿಱಿನಲಿ ವರ ರಾ
ಜೀವ ಲೋಚನೆ ಚಿತ್ತ ರಂಜನೆ ಸಕಲ ಸಂಪನ್ನೆ ।
ದೇವ ದಾನವ ಮಾನವರುಗಳ
ಡಾವಣಿಯ ದನ ಮಾಡಿ ಕಟ್ಟುವ
ಭಾವೆ ಮಾಯಾ ದೇವಿ ಹುಟ್ಟಿದಳಖಿಳ ವಿಭವದಲಿ ॥ ೩೭ ॥

ಇತ್ತಲಿಂತೀ ಮಾಯೆ ಹುಟ್ಟಿದ
ಡತ್ತಲಖಿಳ ಬುಧ ಪ್ರಜಂಗಳ
ಚಿತ್ತಗಳು ಪಲ್ಲಟಿಸಿ ಆಶಾ ಪಾಶ ವೆಗ್ಗಳಿಸಿ ।
ಮುತ್ತು ನರೆತಿಹ ಜೀವ ಜಾಳರಿ
ಗೆತ್ತಿ ಕಾಮ ಗ್ರಹ ವಿಕಾರತೆ
ಮುತ್ತಿ ಮುರುಟಿಸುತಿರ್ದುದೇನೆಂದೆಂಬೆನಚ್ಚರಿಯ ॥ ೩೮ ॥

ಊರ ತೊಱೆದಡವಿಯೊಳು ಗಂಗಾ
ತೀರದೊಳು ಗಿರಿಗಹ್ವರಂಗಳ
ಘೋರತರ ಗುಹೆಗಳೊಳು ಜಲಪಂಚಾಗ್ನಿ ಮಧ್ಯದೊಳು ।
ಧೀರ ಮುನಿಗಳು ದಿಟ್ಟ ಸಿದ್ಧರು
ದಾರಯೋಗೀಶ್ವರರು ಭಯದಲಿ
ಭೋರನೆದೆಗುಂದಿದರು ಮಾಯೆಯ ಜನನ ಕಾಲದಲಿ ॥ ೩೯ ॥

ಬೆತ್ತ ಬಿದಿರಿಡಿದಿರ್ದ ತರುಲತೆ
ಹುತ್ತ ಬೆಳೆದ ಸಮಾಧಿವಂತರ
ಚಿತ್ತ ಸಂಚಲವಾಗಿ ನೆನಹಿನ ನೇಮ ನೆಲೆಗೆಡಲು ।
ಎತ್ತಣಿಂದೀ ಮಾಯೆ ಹುಟ್ಟಿತೆ
ನುತ್ತೆ ಚಿಂತಾಕ್ರಾಂತರಾಗಿರೆ
ಸತ್ಯನಿಧಿ ದುರ್ವಾಸನಾ ಪ್ರಸ್ತಾವದಲಿ ಸುಳಿದ ॥ ೪೦ ॥

ವಿನಯ ಮಿಗೆ ಬಳಿಕರ್ಘ್ಯ ಪಾದ್ಯಾ
ಸನಗಳಿಂ ಸತ್ಕರಿಸಿ ಮುದದಲಿ
ತನತನಗೆ ಸಾಧಕರು ಸಿದ್ಧರು ವರ ತಪೋಧನರು ।
ಇನಿತು ಕಾಲದೊಳಿಲ್ಲದೀಗಳು
ಮನಸು ಸಂಚಲವಾದುವೆಮಗೆಂ
ದೆನುತ ಪೇಳಿದರವರುಗಳು ದುರ್ವಾಸ ಮುನಿಪತಿಗೆ ॥ ೪೧ ॥

ಹೂಣಿಸಿಯೆ ಹುರಿಗೊಂಡು ನೆಱೆ ಗೀ
ರ್ವಾಣರೆಲ್ಲರ ಮುಂದೆ ಮಿಗೆ ರು
ದ್ರಾಣಿ ತನ್ನಯ ತಾಮಸಾಂಗದ ಮಾಯೆಯನು ಕಳುಹೆ ।
ಮಾಣದಿಳೆಯೊಳು ಜನಿಸಿ ಬಂದಳು
ಕಾಣಿರೇ ಬಳಿಕಲಿ ಸಮಾಧಿ
ತ್ರಾಣಿಗಳಿಗೆಲ್ಲಿಯದು ತರಹರವೆಂದನಾ ಮುನಿಪ ॥ ೪೨ ॥

ಅಲ್ಲದಿರ್ದಡೆ ನಮಗಿದೆತ್ತಣ
ತಲ್ಲಣವು ಬರಲೇನು ಕಾರಣ
ವಿಲ್ಲ ನಿಮ್ಮ ನಿರೂಪವಿದು ದಿಟವೆನುತ ಮುನಿನಿಕರ ।
ಒಳ್ಳಿತಾಯಿತು ನೀವು ಕೃಪೆಯಿಂ
ದಿಲ್ಲಿಗೆಯ್ತಂದುದು ನಿಮಿತ್ತದ
ಲೆಲ್ಲ ಸಂಶಯುವಳಿದುದೆಂದರು ಮುನಿಗಳಾತಂಗೆ ॥ ೪೩ ॥

ಮತ್ತೆ ಮಾಣದೆ ಕೇಳಿದರು ಮುನಿ
ಪೋತ್ತಮರು ದುರ್ವಾಸಮುನಿಯುನು
ಚಿತ್ತವಿಸು ತನ್ಮಾಯೆ ಹುಟ್ಟಿದಳೇನು ಕಾರಣವು ।
ಎತ್ತಣದು ಸಾಂಗತ್ಯ ನಮಗೀ
ಬಿತ್ತರವನಱಪೆಂದಡವರಿಗೆ
ತಥ್ಯವನು ವರಮುನಿಗಳಿಗೆ ದುರ್ವಾಸನಿಂತೆಂದ ॥ ೪೪ ॥

ಮಾತು ಮಾತಿನೊಳೋಲಗದಲಗ
ಜಾತೆ ಶಿವನೊಳು ಗೋಷ್ಠಿ ಮಾಡುತ
ಲಾತನನು ನಿಜರೂಪ ಕೇಳಿದಡಲ್ಲಮು ಪ್ರಭುವ ।
ಭೂತಳದೊಳಱದಲ್ಲಿ ತಿಳಿಯೆನೆ
ಭೂತನಾಥನು ಬಳಿಕ ಪಾರ್ವತಿ
ಪ್ರೀತಿಯಿಂದಟ್ಟಿದಳು ನಿಜತಾಮಸದ ಮಾಯೆಯನು ॥ ೪೫ ॥

ಇದುವೆ ಕಾರಣ ಮಾಯೆ ತಾ ಹು
ಟ್ಟಿದಳು ಬಳಿಕಿನ್ನಾರಿಗಾದಡೆ
ವಿದಿತವಾಗಿಹುದಲ್ಲಮು ಪ್ರಭು ಲಿಂಗ ಸಂಗವನು ।
ಹೃದಯದೊಳು ಹುರಿಗೊಳಿಸುವಡೆ ಬಳಿ
ಕದಱ ಮಹಿಮೆಯನೇನ ಹೇಳುವೆ
ಸದಮಲ ಸ್ವಾತಂತ್ರ ನಿಜವಹರೆಂದನಾ ಮುನಿಪ ॥ ೪೬ ॥

ಎಂದು ಪೇಳ್ದೆಲ್ಲರಿಗೆ ಮನದ ತ
ಮಂಧವನು ಪರಿಹರಿಸಿ ಬಳಿಕಾ
ನಂದದಲಿ ದುರ್ವಾಸ ಮುನಿ ಹೋದನು ನಿಜಾಶ್ರಮಕೆ ।
ಅಂದು ಮೊದಲಾಗವರುಗಳು ಮನ
ಬಂದ ಪರಿಯಲಿ ಭಕ್ತಿಯುಕ್ತಿಗ
ಳಿಂದ ಸಾಧಿಸುತಿರ್ದರೆಮ್ಮಯ ಗುರು ಗುಹೇಶ್ವರನ ॥ ೪೭ ॥

ಮತ್ತೆ ಮುದದಲಿ ತಮ್ಮ ತಮ್ಮಯ
ಚಿತ್ತದೊಳಗಲ್ಲಮನ ನೆನೆವುತ
ಸುತ್ತ ಸುಳಿಯದೆ ಮುನ್ನಿನಂತಿರ್ದರು ತಪೋಧನರು ।
ಇತ್ತಲೀ ಮಮಕಾರನೆಂಬ ನೃ
ಪೋತ್ತಮನ ಸುಕುಮಾರಿ ದಿಗೆ ಬೆಳೆ
ವುತ್ತಲಿರ್ದಳು ಘಳಿಗೆ ಸಂಖ್ಯೆಗೆ ಸಕಲ ಸುಖದಿಂದ ॥ ೪೮ ॥

ಶಿಶುವ ನೋಡಿದ ಕಣ್ಗೆ ಮಾಯವೆ
ಮುಸುಕುವುದು ಮನ ಮೆಚ್ಚುವುದು ಮೋ
ಹಿಸುವುದೀ ಪರಿ ಜನನಿ ಜನಕಾದ್ಯರುಗಳೆಲ್ಲರಿಗೆ ।
ವಸುಮತೀ ಪತಿ ಬಳಿಕಲತಿ ಸಂ
ತಸದೊಳಾತ್ಮಜೆಗಖಿಳ ವಿಭವದಿ
ಹೆಸರನಿಟ್ಟನು ಮಾಯೆಯೆಂಬ ನವೀನ ನಾಮವನು ॥ ೪೯ ॥

ಹಲಗೆ ಮಾಣಿಕದೊಟ್ಟಿಲಲಿ ಮ
ಗ್ಗುಲಿಸಿ ಮಲಗಿ ನಿರೀಕ್ಷಿಸುತ ಮಾ
ರ್ಪೊಳೆವ ತನ್ನನೆ ಕಂಡು ನಲಿವುತ ನಗುತ ಕೈ ದುಡುಕಿ ।
ಸೆಳೆದು ತೆಗೆದಡೆ ಬಾರದಿರಲಾ
ನೆಳಲನೊದೆವುತ ಕಾಲ ಗೆಜ್ಜೆಗ
ಳುಲುಹನಾಲಿಪ ಮಾಯೆ ಮೆರೆದಳು ಬಾಲಲೀಲೆಯಲಿ ॥ ೫೦ ॥

ಆಡಿಸುವ ದಾದಿಯರ ಸೈಗೆಯ
ಲಾಡಿ ಪರಿದಪ್ಪಪ್ಪೆನುತ್ತಲಿ
ಓಡಿ ಬಂದವುರ್ದಪ್ಪಿ ಮೇಲುದ ಸೆಱಗಿನೊಳಗಡಗಿ ।
ನೋಡುತಲಿ ದಾ ಎನುತ ಕೈ ಮು
ದ್ದಾಡಿ ಮುಂದಲೆ ವಿಡಿದು ಕುಣಿಕುಣಿ
ದಾಡಿ ಸೌಖ್ಯವನೀವುತಿರ್ದಳು ಮಾಯೆ ಮೋಹಿನಿಗೆ ॥ ೫೧ ॥

ಒಮ್ಮೆ ಮಮಕಾರಾವನೀಪನ
ನೊಮ್ಮೆ ಮೋಹಿನಿ ದೇವಿಯನು ಮ
ತ್ತೊಮ್ಮೆ ತನ್ನುವನಾಡಿಸುವ ತರುಣಿಯರ ತಂಡವನು ।
ಹೆಮ್ಮೆಗೊಳಿಸುತ ಸುಖ ಮುಖವ ಹೊಱ
ಹೊಮ್ಮಿಸುತ ನೆಱೆ ಬಾಲಲೀಲೆಯ
ಸೊಮ್ಮ ಸೂಱೆಯ ಕೊಡುತಲಿರ್ದಳು ಮಾಯೆ ಮೋಹಿನಿಗೆ ॥೫೨॥

ಬೀಱುತಿರ್ದಳು ಮುದ್ದುತನವನು
ಹೇಱುತಿರ್ದಳು ಸಕಲ ಚೆಲುವನು
ತೋಱುತಿರ್ದಳು ಜಗದ ಜಂಗುಳಿಗಾಡು ವೊಲನಾಗಿ ।
ಸಾಱುತಿರ್ದಳು ಸಕಲ ಸೊಬಗನು
ಮಿಾಱುತಿರ್ದಳು ದಿನದಿನಕೆ ಕಳೆ
ಯೇಱುತಿರ್ದಳು ಮಾಯೆ ವಿವಿಧ ವಿಲಾಸ ವೃತ್ತಿಯಲಿ ॥ ೫೩ ॥

ಹಿಡಿಹಿಡಿದು ಕೊಂಡರ್ತಿಯಲಿ ಬೆಂ
ಬಿಡದೆ ಶಿಕ್ಷಾಚಾರ್ಯತನದಲಿ
ಜಡಿದು ಝುಂಕಿಸಿ ಮುದ್ದುತನ ಮಿಗೆ ಮಾಯೆ ತನ್ನಂತೆ ।
ನಡೆಯ ಕಲಿಸಿದಳಂಚೆವಿಂಡಿಗೆ
ನುಡಿಯ ಕಲಿಸಿದಳರಗಿಳಿಗೆ ಸರ
ವಿಡಲು ಕಲಿಸಿದಳಾಕೆ ತನ್ನರಮನೆಯ ಕೋಗಿಲೆಗೆ ॥ ೫೪ ॥

ಆಕೆ ಕನ್ಯಾಮಾಡದೊಳು ನಾ
ನಾಕುಶಲ ಶಾಸ್ತ್ರವನು ವಿದ್ಯಾ
ನೀಕವನು ಪರಿಚರಿಸಿ ಪರಿಣತೆಯಾಗಿ ಸುಖದಿಂದ ।
ಆ ಕುಮಾರಿತಿ ಇರುತಿರಲು ಬಳಿ
ಕಾ ಕಳಾನಿಧಿ ನೃಪತಿ ಮಾಯೆಗೆ
ಬೇಕೆನುತಲಾಳಾಪಿಸಿದ ಮದುವೆಯನು ಮನದೊಳಗೆ ॥ ೫೫ ॥

ಇರುತಿರಲು ಮಮಕಾರಭೂಮಿಾ
ಶ್ವರನ ವಿಮಲಾನ್ವಯಕೆ ನೆಟ್ಟನೆ
ಗುರುವೆನಿಪಹಂಕಾರನೆಂಬಾಚಾರ್ಯನೆಯ್ತಂದು ।
ಅರಸ ಮಾಡುವ ವಂದನೆಯನಾ
ದರಣೆಯನು ಕೈಕೊಳುತ ಕೇಳಿದ
ಕರುಣದಿಂದಲಿ ಭೂಮಿಪನ ಸುಕ್ಷೇಮ ಕುಶಲವನು ॥ ೫೬ ॥

ಕೇಳಿ ಹರುಷಿತನಾದನಾ ಭೂ
ಪಾಲಕನ ಸುಕ್ಷೇಮ ಕುಶಲವ
ನಾಲಿಸುತಲವನಿಪನ ಕೆಲದ ಕುಮಾರಿಯನು ಕಂಡು ।
ಆ ಲತಾಂಗಿಯ ರೂಪು ರೇಖಾ
ಜಾಳವನು ಚೆನ್ನಾಗಿ ತಿಳಿದು ಕೃ
ಪಾಳು ನಿಶ್ಚೈಸಿದನು ಕಾರಣಕನ್ಯೆಯಿವಳೆಂದು ॥ ೫೭ ॥

ಫಲಿತ ಚೂತದ ಮರನ ಸಿರಿ ಕೋ
ಗಿಲೆಗೆ ನೆಟ್ಟನೆ ಹಾಲು ಹಂಸೆಗೆ
ಲಲಿತ ಕುಸುಮದ ಕಂಪು ತುಂಬಿಗೆ ಸವಿಯನೀವಂತೆ ।
ಉಳಿದ ಖಗ ಕಡದುಋಗಳಿಗೆ ಸುಖ
ವಳವಡುವುದೆ ಸದಾಶಿವಂಗೀ
ಲಲನೆಯಲ್ಲದೆ ನರರಿಗುಚಿತವೆ ಭೂಪ ಕೇಳೆಂದ ॥ ೫೮ ॥

ಶಿವನೆ ಪತಿಯಹನೆಂದು ನೀವ್ ಚಿ
ತ್ರವಿಸಿದಿರಿ ಆ ಶಿವನು ದಿಟ ಮಾ
ನವ ಶರೀರಿಗಳಿಗೆ ಸುಸಾಧ್ಯವೆ ದೇವ ಪೇಳೆಸಲು ।
ಶಿವನು ಶಿವಭಕ್ತಿಯನು ಸಲೆ ಮಾ
ಡುವರಿಗವರವರಿಚ್ಛೆಯನು ಸಲಿ
ಸುವನು ಸತ್ಯವಿದೆಂದನೊಲಿದಾಚಾರ್ಯ ಶಿಷ್ಯಂಗೆ ॥ ೫೯ ॥

ಎನುತ ಸಂಭ್ರಮದಿಂದ ಮಾಯಾಂ
ಗನೆಗೆ ಉಪದೇಶವನು ಮಾಡಿದ
ಡನುಕರಿಸಿ ಮಾಡುತ್ತಲಿರ್ದಳು ಭಕ್ತಿಯನು ಬಳಿಕ ।
ಜನ ಪತಿಯೆ ಸುಖದಿಂದಲಿರಿ ಎಂ
ದೆನುತಹಂಕಾರಾರ್ಯ ಬೀಳ್ಕೊ
ಟ್ಟನುಗತಿಯಲೆಯ್ದಿದನು ತನ್ನಯ ನಿಜ ನಿವಾಸವನು ॥ ೬೦ ॥

ಧರಣಿ ಪಾಲಕನಿತ್ತ ಸುಖದಿಂ
ದಿರುತಲಿರ್ದನು ಈ ಕುಮಾರಿತಿ
ಹರುಷದಿಂದಲಿ ನಿತ್ಯನೇಮವ ಹಿಡಿದು ಛಲದಿಂದ ।
ಪುರಕೆ ಘಟಿಕಾ ಸ್ಥಾನವೆನಿಸುವ
ಪರಮ ಸಿದ್ಧಿಯನೀವ ಮಧುಕೇ
ಶ್ವರನ ಪೂಜಿಸುತಿರ್ದಳಿನಿಯನ ಬಯಸಿ ಭಕ್ತಿಯಲಿ ॥ ೬೧ ॥

ಅಷ್ಟ ವಿಧದರ್ಚನೆಗಳಿಂದುಭ
ಯಾಷ್ಟ ವಿಧದುಪಚಾರದಿಂದಲ
ಭೀಷ್ಟವೆನಿಸುವ ನಿಜಮನೋವಲ್ಲಭನ ಬಯಕೆಯಲಿ ।
ಶ್ರೇಷ್ಠವೆನಿಸುವ ಮಧುಕ ನಾಥನ
ತುಷ್ಟಿ ಪಡುವಂತರ್ಚಿಸಿದಳೀ
ಸೃಷ್ಟಿಯೊಳು ಸಾಂಗದಲಿ ಮಾಯಾ ದೇವಿ ಮನವೊಲಿದು ॥ ೬೨ ॥

## ಗತಿ ೩

# ಅಲ್ಲಮನಲ್ಲಿ ಮಾಯೆಗೆ ಮೋಹ

ಕಾಮಿತಾರ್ಥವನೀಯು ಬೇಹುದು
ಕಾಮಿನಿಗೆ ತಾನವಳು ಕಾಮ
ಪ್ರೇಮ ಭಕ್ತಿಯ ಮಾಡಿದದು ಕಾರಣದಲೆಂದೆನುತ ।
ಆ ಮಹಾ ಮಹಿಮ ಸ್ವರೂಪ ಸ
ನಾಮವನು ಮಱೆಮಾಡಿ ಅಭಿನವ
ಕಾಮ ರೂಪಿನ ಪರಿಯನಲ್ಲಮ ಲಿಂಗ ಧರಿಸಿದನು ॥ ೬೩ ॥

ಕಂಗಳಲಿ ನೆಱೆ ನೋಡಿದಡೆ ಹೆಱೆ
ಹಿಂಗ ಬಾರದ ಚೆಲುವ ಮುಖದ ಸು
ರಂಗು ಸೂಸುವ ದಂತಪಂಕ್ತಿಯು ತೊಳಪ ಕಣ್ಣುಗಳ ।
ಅಂಗವಟ್ಟದ ಸರಳಿಕೆಯ ಹ
ಸ್ತಂಗಳಂಘ್ರಿಯ ಕೋಮಳದ ಸ
ರ್ವಾಂಗ ಭಂಗಿಯ ಸೌಮ್ಯತೆಯ ಧರಿಸಿದನು ಪ್ರಭು ರಾಯ ॥ ೬೪ ॥

ತುಱುಬು ಚಿಮ್ಮುಱಿ ಚೆಂದಿ ಕಾಸೆಯ
ಸೆಱಗು ನಸು ಹೊದೆದಲ್ಲಿ ಮಿಂಚುವ
ಮಿಱುಪ ಸುಲಿ ಪಲ್ಲಸಿಯ ಸೆಳ್ಳುಗುರುಲಿವ ಹೊಂದೊಡರು ।
ಉಱುವ ಗಂಧದ ಲೇಪ ಬೆನ್ನೊಳು
ಮೆಱೆವ ಮದ್ದಳೆ ಸಹಿತ ಬಂದೀ
ತೆಱನನಲ್ಲಮ ನಟಿಸಿ ನಿಂದನು ವಿಕೃತ ವೇಷದಲಿ ॥ ೬೫ ॥

ನಿಂದು ನಾನಾ ಪರಿಯ ವಹಣಿಗ
ಳಿಂದ ತಾಳ ಸಮೇಳ ಪದ್ಧತಿ
ಯಿಂದಲುಗ್ಘಡಣೆಯ ಘಡಾವಣೆಯಿಂದಲಲ್ಲಮನು ।
ಅಂದು ಮಧುಕೇಶ್ವರನ ಬಾಗಿಲ
ಮುಂದೆ ಬಾರಿಸುತಿರ್ದನೈ ಹಲ
ವಂದದಲಿ ಮದ್ದಳೆಯ ಕೇಳುವರೆಲ್ಲ ಬೆಱಗಾಗೆ ॥ ೬೬ ॥

ಕಾರಮುಗಿಲಿನ ಗರ್ಜನೆಯ ಕಿವಿ
ಯಾರೆ ಕೇಳಿದ ಸೋಗೆಯಂತಿರೆ
ಹಾರವಿಸುತಲಿ ಅಲ್ಲಮನ ಮದ್ದಳೆಯ ಧ್ವನಿ ಗೇಳ್ದು ।
ನಾರಿ ಮಾಯಾ ದೇವಿ ಸಲಿವುತಿ
ದಾರು ಹೊಱ ಕಡೆಯಲ್ಲಿ ತೂರ್ಯೋ
ದ್ಧಾರವನು ಮಾಡುವರೆನುತ ಕೇಳಿದಳು ಕೆಳದಿಯರ ॥ ೬೭ ॥

ಕೆಳದಿಯರು ತಾವಱಿದು ಬಂದಾ
ಗಳೆ ವಿಚಾರಿಸಿ ಹೇಳಿದಡೆ ಕೋ
ಮಳೆ ಮನೋಮುದದಿಂದ ಕರಸಿಯೆ ಕಂಡಳಲ್ಲಮನ ।
ಮೊಳೆತುವಾ ಕ್ಷಣ ಕಾಮ ಬಾಣದ
ಹಿಳುಕುಗಳು ಹಿರಿದಾಗಿ ಚಿತ್ತಜ
ನಳವಿಯಲಿ ಬೆಂಬಿದ್ದು ಮೌನದೊಳಿರ್ದಳಾ ಮಾಯೆ ॥ ೬೮ ॥

ಆವ ದೇಶದ ಪುರುಷನೈ ಸಿನ
ಗಾವ ಹೆಸರೈ ನೀನು ನೆಲೆಗೊಂ
ಡಾವ ಠಾವಿನಲಿಪ್ಪೆಯೈ ಎಂದೆನುತ ವಿನಯದಲಿ ।
ಭಾವೆಯರು ಬಳಿಕಾತನನು ಸಂ
ಭಾವಿಸುತ ಕೇಳಿದಡೆ ಅಲ್ಲಮ
ದೇವನೊಲಿದಾ ಸತಿಯರಿಗೆ ನಸುನಗುತಲಿಂತೆಂದ ॥ ೬೯ ॥

ದೇಶವೆಮ್ಮದು ಹೇಳುವಡೆ ಪರ
ದೇಶ ಬಿರುದಿನ ಬಿಂಕಕಾಣಿರ
ವಾಸಿಗರನಲ್ಲೆನಿಸುವಲ್ಲಮನೆಂಬ ಪೆಸರೆಸಗೆ ।
ಲೇಸು ಮಾಡುವ ಠಾವುಗಳಲಭಿ
ಲಾಷೆಯಿಲ್ಲದೆ ಹೊದ್ದುವೆವು ಸುಖ
ವಾಸಿಗಳು ನಾವೆಂದನಲ್ಲಮನೊಲಿದು ಸಖಿಯರಿಗೆ ॥ ೭೦ ॥

ಒಳ್ಳಿತಾಯಿತು ಕಾರ್ಯ ನೀನಿ
ನ್ನಲ್ಲಿಗಲ್ಲಿಗೆ ಹೋಹ ಬುದ್ಧಿಯ
ನಲ್ಲವಿಡು ಸುಖದಿಂದಲೆಮ್ಮೊಡತಿಯ ಸಮೀಪದಲಿ ।
ಬಲ್ಲ ವಿದ್ಯಾವಸ್ತುಗಳೊಳೆ
ಮ್ಮೆಲ್ಲರೋಪಾದಿಯಲಿ ಮನ ಬಂ
ದಲ್ಲಿ ನೀನಿಹುದೆಂದರಾ ಕಾಮಿನಿಯರಲ್ಲಮಗೆ ॥ ೭೧ ॥

ಶರಣೆನುತಲಾ ಮಾಯೆ ಮಧುಕೇ
ಶ್ವರನ ಬೀಳ್ಕೊಂಡಾಗಳಾತನ
ಕರೆದು ಕೊಂಡೆಯ್ತಂದು ತಂದೆಯ ಸಮ್ಮುಖವ ಮಾಡಿ ।
ಅರಸನಱಿಕೆಯ ಮಾಡಿ ಮಿಗೆ ಬಳಿ
ಕಿರಿಸಿಕೊಂಡಳು ನಾಗವಾಸದ
ನೆರವಿಗೊಪ್ಪುವ ಮೋವಗಾಱಿಕೆತನದಲಲ್ಲಮನ ॥ ೭೨ ॥

ಹರುಷದಿಂದಲಿ ಕನ್ನೆ ಮಾಡದ
ಪಿರಿಯ ಚೌಪಾಳಿಗೆಯಲತಿ ವಿ
ಸ್ತರದಲೋಲಗಗೊಟ್ಟು ಕುಳ್ಳಿತು ಸಕಲ ವಿಭವದಲಿ ।
ಭರತವಿದ್ಯಾದ್ಯಖಿಳ ಕಳೆಗಳ
ಪರಿಚರಿಯ ನೆವದಿಂದ ಮಾಯಾ
ತರುಣಿ ಮನದೊಳು ಸೊಗಸಿ ಮಾತಾಡಿಸುವಳಲ್ಲಮನ ॥ ೭೩ ॥

ಸುಧೆಯ ಸೋನೆಯ ಸುರಿವುತಿಹ ಕಾ
ಲದಲಿ ತೃಪ್ತಿಯನೆಯ್ದಲಱಿಯದೆ
ಕ್ಷುಧೆಗೆ ಕೃಷಿಗಳ ಮಾಡಿ ಕೋಟಲೆಗೊಂಬ ಮರುಳಂತೆ ।
ಮುದದಲಲ್ಲಮ ಕರುಣಿಸುವ ಕಾ
ಲದಲಿ ನಿತ್ಯವನಱಿಯಲಱಿಯದೆ
ಕುದಿದು ಕೋಟಲೆಗೊಳುತಲಿರ್ದಳು ಮಾಯೆ ಬೇಟದಲಿ ॥ ೭೪ ॥

ಮಡದಿ ಮದನನ ಬಲೆಯ ಬಾಯಲಿ
ತೊಡರಿ ಬಿದ್ದುದನಱಿದರಾಗಳೆ
ಒಡತಿ ನಿನ್ನಯ ಬಗೆಯ ಬಯಕೆಯ ನಾಚದೆಮ್ಮೊಡನೆ ।
ನುಡಿದೆಯಾದಡೆ ಬಳಿಕಲಲ್ಲಮ
ಗೆಡೆಗುಡುವ ಒಂದೆಡೆಯ ಬೀಡಿನ
ಗುಡಿಯನೆಸುತಾ ಮಾಯೆಗಿಂತೆಂದರು ಏದಗ್ಧೆಯರು ॥ ೭೫ ॥

ಎನಲು ಕನ್ಯಾಭಾವಭಂಗಿಯ
ಮನದ ನಾಚಿಕೆಯೊಂದು ನೆಟ್ಟನೆ
ಜನಪತಿಯ ಮಗಳೆಂಬ ಹೆಕ್ಕಳ ಹೆಮ್ಮೆ ತಾನೆರಡು ।
ತನಗೆ ಸಮ ಸಂಪ್ರಾಪ್ತನಲ್ಲದ
ಮನುಜಗಳುಪಿದೆನೆಂಬ ಮಱವೆಯ
ಘನತೆ ಮೂಱವಕಳುಕಿ ನಾಚುತಲಿರ್ದಳಾ ಮಾಯೆ ॥ ೭೬ ॥

ಈ ಕುಮಾರಿಯ ತಿಳಿವೆವೆಂಬುದ
ದೇಕೆ ಕಾಣಲಿ ಬಂದ ಕಾರ್ಯವ
ನಾ ಕಳಾವಿದನನು ವಿಚಾರಿಸಬೇಕು ನಾವೆನುತ ।
ಆಕೆಯರು ಮದಮಾನಿಯೆಂಬ ವಿ
ವೇಕಿಯನು ಕಳುಹಿದಡೆ ಬಂದಳ
ನೇಕ ಚದುರಿನ ಚಪಳತನದಲಿ ಅಲ್ಲಮನ ಬಳಿಗೆ ॥ ೭೭ ॥

ನಾರಿ ಬಂದುದನಱಿದು ಮೊದಲೇ
ದಾರಿದೋಱುವೆ ನಾನೆನುತ ಬಿ
ಡಾರಕಾಪಿನ್ನೆಯ್ದ ಬೇಹುದು ನಮ್ಮ ನಱಿಸಿದಡೆ ।
ನಾರಿ ನೀನೀ ಹದನ ಹೇಳು ಕು
ಮಾರಿಗೆನುತವೆ ನಿಜ ವಿನೋದ ವಿ
ಚಾರದಿಂದಲಿ ನುಡಿದನಾ ಮದಮಾನಿಗಲ್ಲಮನು ॥ ೭೮ ॥

ನಿನಗೆ ಸಾಕಿನ್ನೇಕೆ ಬೀಡಿನ
ಮನೆ ವೃಥಾ ಬೇಱಿಕೊಂದು ಸಂಕ
ಲ್ಪನೆಯ ಬಿಡು ನಮ್ಮೊಡತಿಯಾದಡೆ ಮುಟ್ಟಿ ಮೋಹದಲಿ ।
ನಿನಗೆ ಕೃಪೆಯಾಗಿರ್ದಳೆಮ್ಮರ
ಮನೆಯೊಳಿರು ಸುಖಿಯಾಗಿ ನೀನೆಂ
ದೆನುತ ನಯದಲಿ ನುಡಿದಳಾ ಮದಮಾನಿಯಲ್ಲಮಗೆ ॥ ೭೯ ॥

ನಾವು ಪರದೇಶಿಗಳು ಬಡವರು
ನೀವು ದೊರೆಗಳು ಮೇಲೆ ನಿಮ್ಮಯ
ದೇವಿ ರಾಜಕುಮಾರಿ ನಾವೇ ಪುರುಷವೇಷಿಗಳು ।
ನೀವು ಸತಿಯರು ನಿಮ್ಮೊಳಿಹುದೆಮ
ಗಾವ ಮರಿಯಾದೆಗಳು ದೂರದ
ಸೇವೆ ತಾನೆಮಗುಚಿತವೆಂದನು ನಗುತಲಲ್ಲಮನು ॥ ೮೦ ॥

ನಗೆಯ ಮಾತಲ್ಲಣ್ಣ ಮಾಯೆಯ
ಬಗೆಗೆ ನಿನ್ನನು ಸೇವಕಾವೃ
ತ್ತಿಗಳೊಳೆಣಿಸುವ ಪರಿಯು ಕಾಣೆನು ನಿನ್ನ ತನ್ನಿಂದ ।
ಮಿಗಿಲು ಮಾಡುವ ಪರಿಯಲಿರ್ದಳು
ಹಗಲಿರುಳು ಹಂಬಲಿಸಿ ಕೇಳೈ
ಜಿಗಡುಗೊಳ್ಳದಿರೆನುತ ಜೋಳೈಸಿದಳು ಮದಮಾನಿ ॥ ೮೧ ॥

ಸೇವಕರ ಮೇಲೆಱಕವಿರ್ದಡೆ
ಭಾವೆ ತಪ್ಪೇನೊಡತಿಯಾದವ
ರೋಪಿ ಸಲಹುತ ಮೋಹ ಮಾಡುವರವರಿಗದು ಸಹಜ ।
ನಾವು ನಮ್ಮಯ ಸೇವಕಾಂಗದ
ಭಾವದಿಂದಿರ ಬೇಕೆನುತ ನಾ
ನಾ ವಿಧದ ಘಾಳಕತನಂಗಳ ನುಡಿದನಲ್ಲಮನು ॥ ೮೨ ॥

ಸಾಕು ಜಾಣಿನ ಮಾತ ಮಱೆಯಿ
ನ್ನೇಕೆ ನಿನ್ನೊಳು ಮಾಯೆ ಕಾಮೋ
ದ್ರೇಕದಲಿ ನೆಱೆ ನಿನಗೆ ಸೋತಳು ಹಲವು ಮಾತೇನು ।
ಲೋಕದೊಳು ನರ ದನುಜ ದಿವಿಜರ
ನೇಕರನು ಬಗೆಗೊಂಡು ಲೆಕ್ಕಿಸ
ದಾಕೆ ತಾನೇ ಸೋತಳೈ ನಿನಗೆಂದಳಲ್ಲಮಗೆ ॥ ೮೩ ॥

ನೀವೆ ಬಲ್ಲಿರಿ ನಿಮ್ಮ ಮಾಯಾ
ದೇವಿಯಂತಸ್ಥವನು ಹೊಸಬರು
ನಾವು ಬಲ್ಲೆವೆ ಅಂತು ಕಾರಣ ಮನಸು ಬಂದಂತೆ ।
ನೀವೆ ಮಾಡುವುದೆಮ್ಮ ಕೇಳುವ
ದಾವುದುಂಟೆಂದೆನುತಲಲ್ಲಮ
ದೇವನಾ ಮುದಮಾಸಿಗೆಂದನು ಬಳಿಕ ನಸುನಗುತ ॥ ೮೪ ॥

ಆವ ಶಕುನವ ತಿದ್ದಿಕೊಂಡೆಲೆ
ಭಾವ ಬಂದೆಯೊ ಅಲ್ಲದಿರ್ದಡ
ದಾವ ಮೋಹನವಶ್ಯವಿದ್ಯವ ಕಲಿತೆಯೋ ದಿಟಕೆ ।
ದೇವಿಯನು ನೀ ಮರುಳು ಮಾಡಿದೆ
ಜಾವಳಿಗನಲ್ಲೆನುತ ಬಂದಳು
ಭಾವೆ ಬಳಿಕಲ್ಲಮನ ಬಳಿಯಿಂದೊಡತಿಯಿದ್ದೆಡೆಗೆ ॥ ೮೫ ॥

ಅಂದಿನಿರುಳಿಸಲಾರುವರ್ಜಿಯದ
ಚಂದದಿಂದಲಿ ಬಳಿಕ ಸೆಜ್ಜೆಯ
ಮಂದಿರಕೆ ಸಡಗರಿಸಿ ಮಾಯೆಯನಲ್ಲಮನನೊಲಿದು ।
ತಂದು ಬಿಜಯಂಗೆಯ್ಸಿದರು ಬಳಿ
ಕಿಂದು ಮುಖಿಯರು ತಮವ ತರಣಿಯ
ನೊಂದು ಗೂಡುವೆವೆಂಬ ಭಾವ ಭ್ರಮಿತ ಬುದ್ಧಿಯಲಿ ॥ ೮೬ ॥

ಮಳೆಗೆ ನೆನೆವುದೆ ಗಾಳಿ ಬೀಸಿದ
ಡೊಲೆವುದೇ ಬಲು ಗಿಚ್ಚಿನುರಿಯಿಂ
ದಳಿವುದೇ ಸಭವಾ ಪರಿಯ ಬಯಲಿಗನು ತಾನಾಗಿ ।
ಕಳವಳದ ವಿಷಯಗಳ ವೆಸನಗ
ಳೊಳಗೆ ಸಿಕ್ಕುವನಲ್ಲವಾತನ
ಹೊಲಬು ತಾ ಬೇಱೊಂದು ಪರಿ ಏನೆಂಬೆನಲ್ಲಮನ ॥ ೮೭ ॥

ಅಂದು ಬಳಿಕಾ ಹದನನಾಗಳೆ
ತಂದು ನೆರಹಲು ಕೇಳಿ ಭರವಸ
ದಿಂದ ಮೋಹಿನಿ ದೇವಿ ತನ್ನಯ ಮಗಳ ಮಂದಿರಕೆ ।
ಬಂದು ತಾನೇಕಾಂತದಲಿ ನಿಜ
ನಂದನೆಯನಾಪ್ತೆಯರ ಕರೆದಿಂ
ತೆಂದು ನುಡಿದಳು ತಾನು ಕೇಳಿದ ಗುಪ್ತ ವಾರ್ತೆಯನು ॥ ೮೮ ॥

ಮಗಳೆ ನೀ ನಿನಗಲ್ಲದಿರ್ದೊಡೆ
ಜಗಳ ನೆನೆವರೆ ರಾಜಕುಲದಲಿ
ನಗೆಗಡೆಯ ಮಾಡುವರೆ ನಿನ್ನಯ ತಂದೆ ಕೇಳಿದಡೆ ।
ಸೊಗಸುವನೆ ಮಿಗೆ ಮುನಿವನಾ ಮಾ
ತುಗಳಿಗಾಸ್ಪದವಹರೆ ಅಕಟಾ
ನೆಗಳಲಹುದೇ ಪುರುಷ ಸಂಗವನೆಂದಳಾ ಜನನಿ ॥ ೮೯ ॥

ತರಳೆ ನೀನಕಟೇನ ಮಾಡುವೆ
ದುರುಳರಿವದಿರು ನಿನ್ನ ತೊತ್ತಿರು
ಮರುಳು ಮಾಡಿದಡೊಲಿದೆಯೈಸಲೆ ಎಸುತ ನಿಜ ಸುತೆಯ ।
ಕರುಣದಲಿ ಮೋಹದಲುಪೇಕ್ಷೆಯ
ಭರದಲಾಕೆಯನೇನುವೆನ್ನದೆ
ಮುರಿದು ಮೋಹಿಸಿ ದೇವಿ ನೆಱೆ ನೋಡಿದಳು ಕೆಳದಿಯರ ॥ ೯೦ ॥

ಅರಸಿ ನುಡಿದಡೆ ನಾವು ಪ್ರತ್ಯು
ತ್ತರವ ಬಿನ್ನಹ ಮಾಡಬಾರದು
ತರುಣಿ ತಾನಲ್ಲಮನ ಕಾಣುತ ಕಾಮ ತಾಪದಲಿ ।
ಮರುಳುಗೊಂಡಾತಂಗೆ ಮೋಹಿಸಿ
ಹರಣ ಮಾತ್ರವನುಳುಹಿಕೊಂಡಳು
ಹಿರಿದು ಮಾತಿನ್ನೇತಕೆಂದರು ಕೂಡೆ ಕೆಳದಿಯರು ॥ ೯೧ ॥

ಅಕಟ ಮಗಳಿಗಿದಾವ ದೆಸೆಯಣ
ವಿಕಳ ಬಂದುದೊ ಬಱಿದೆ ಬಹು ಸೇ
ವಕರಿರಲು ಸಲೆ ಸಂತವಿಟ್ಟಿರದೆತ್ತಣಲ್ಲಮನು ।
ಸಕಳೆ ಬುದ್ಧಿಯ ಬಲ್ಲೆ ನೀನೇ
ತಕೆ ವಿಚಾರಿಸದಾದೆ ಎನುತಾ
ಸಕಳೆಯನು ಮರುಳಾಡುತಿರ್ದಳು ಮೋಹಿನೀ ದೇವಿ ॥ ೯೨ ॥

ಮನುಜ ದೇಹವಪೂರ್ವವದಱೊಳು
ಜನ ಪತಿಯ ಸುತೆಯಹುದಪೂರ್ವತೆ
ಇನಿತಱೊಳು ಪಟುವಾಗಿ ಸಕಲ ಸುಖಂಗಳನು ತಿಳಿದು ।
ಅನುಭವಿಸುವುದಪೂರ್ವವದಱಿಂ
ಮನಸು ಬಂದಂತಿರಲಿ ಮಾಯಾಂ
ಗನೆಗದೇತಕೆ ಕಾಹು ಕಟ್ಟಳೆ ಎಂದಳಾ ಸಕಳೆ ॥ ೯೩ ॥

ಅಹುದು ತನುವುಳ್ಳಲ್ಲಿ ಸುಖದಿಂ
ದಿಹುದು ಬಳಿಕಲಿ ಬಯಸಿ ಬಾತಡೆ
ಬಹವೆ ಅದು ಕಾರಣದಲಾತ್ಮಜೆ ಮನಸು ಬಂದಂತೆ ।
ಬಹಳ ಭೋಗವ ಕೊಳಲಿ ಎನುತಾ
ಗ್ರಹವನೀಡಾಡಿದಳು ನೀವೇ
ಸಹಿತರೇ ಎನುತವರನುಪಚರಿಸಿದಳು ನೃಪ ರಾಣಿ ॥ ೯೪ ॥

ಅರಸನಱಿಯದ ತೆಱದಲಿದನಾ
ಚರಿಸುವುದು ನೀವೆನುತ ಭಾವಿಸೆ
ಮರುಳರೇ ನಿಮ್ಮಿಂದ ಬಲ್ಲವರಾರು ಧಾತ್ರಿಯಲಿ ।
ಇರುತಲಿರಿ ನಿಮ್ಮಿಚ್ಛೆ ಬಂದಾ
ಪರಿಯಲೆನುತಾ ರಾಣಿ ತಾ ತ
ನ್ನರಮನೆಗೆ ಹೋದಳು ಕುಮಾರಿಯನೊಲಿದು ಮನ್ನಿಸುತ ॥ ೯೫ ॥

ನೀಱಿ ಕೇಳೌ ನಾವು ಮಾಡಿದ
ದೂಱಿ ನಮ್ಮಯ ರಾಣಿ ಕೇಳಿದ
ಕಾರಣದಲಿದು ಜಾಱಿತಲ್ಲದೆ ರಾಯ ಕೇಳಿದಡೆ ।
ಗಾಱಿಹೆವು ನಾವಿನ್ನು ನೀತಿಯ
ವಿಱಾದಿರ ಬೇಕಂತು ಕಾರಣ
ಬೇಱಿ ಬೀಡಿನಲಿರಲಿ ಅಲ್ಲಮನೆಂದಳಾ ಸಕಳೆ ॥ ೯೬ ॥

ಕೆಳದಿಯರು ತಮತಮಗೆ ಬುದ್ಧಿಯ
ಕಲಿಸುತಿರಲಾ ಮಾಯೆ ಚಿಂತಾ
ಕುಳತೆಯಿಂದಲಿ ಬೆಱಗು ಹೊಡೆದಿರಲಾಗಳೆಯ್ತಂದು ।
ಲಲನೆಗೇತಕೆ ದುಗುಡವಾರು
ಮ್ಮಳಿಕೆಯನು ಮಾಡಿದರು ಹೇಳೆನು
ತೊಲಿದು ಕೇಳಿದನಂದು ಸಕಳೆಯನಲ್ಲಮನು ಬಳಿಕ ॥ ೯೭ ॥

ಅಣ್ಣ ಕೇಳುದಕದಲಿ ಮುಳುಗಿದ
ಸುಣ್ಣಕಲ್ಲಂತಾಗಿ ಕುದಿವುತ
ಬಣ್ಣ ಬಟ್ಟಳು ಮಾಯೆ ಕಾಣುತ ನಿನ್ನ ಬೇಟದಲಿ ।
ಕಣ್ಣು ಕಾಣದೆ ಕಾಮನೇಱಿನ
ಹುಣ್ಣಿನಲಿ ಹೊರಳಿದಡೆ ಆ ಸ್ಥಿತಿ
ಹಣ್ಣಿ ಹಬ್ಬಿತು ಪುರದೊಳೆಂದಳು ಸಕಳೆಯಲ್ಲಮಗೆ ॥ ೯೮ ॥

ಒಡತಿ ಮುಂತಾದರಮನೆಯಲಿಹ
ಮಡದಿಯರು ತಾವಱಿದರೊಬ್ಬಸೆ
ಪೊಡವಿ ಪಾಲಕನಱಿಯನಲ್ಲದೆ ನಮ್ಮ ಪುಣ್ಯದಲಿ ।
ತೊಡಗಿತೀ ಪರಿ ಱಿಟ್ಟು ಸಾಕಿ
ನ್ನಡೆಯ ಮಾಡ್ಯೆ ನಿನಗೆ ಬೇಡಿಸ
ಗುಡಿಯ ಹೊಱಗೊಂದೆಡೆಯಲೆಂದಳು ಸಕಳೆಯಲ್ಲಮಗೆ ॥ ೯೯ ॥

ಮಾಯೆಯುಗಲಿದ ಬಳಿಕ ಭಾವಿಸೆ
ಕಾಯವುಂಟೇ ಪ್ರಾಣವಾಗಿಹ
ವಾಯು ನಡೆವುದೆ ಕಾಲು ಕೈ ಕಣ್ಣುಗಳು ಮಿಡುಕುವುವೆ ।
ಬಾಯ ನುಡಿ ವೆವಹಾರ ಬೆಸನಗ
ಳಾಯತವು ಬಳಿಕುಂಟೆ ಮರುಳೇ
ಸಾಯದಂತಿರೆ ಸತ್ತೆ ನಾಸಕಟೆಂದನಲ್ಲಮನು ॥ ೧೦೦ ॥

ಎಂದ ಮಾತಿನ ಮಱೆಯ ಬೆಡಗಿನ
ಸಂದಿಯಲಿ ಶಿವ ಕಾಮ ತತ್ವ
ದ್ವಂದ್ವಮಿಪ್ಪುದನಱಿಯಲಱಿಯದೆ ಈಗಳೇನಾಯ್ತು ।
ಮುಂದೆ ಮಾಯೆಯ ನಿನ್ನ ರಿಣ ಸಂ
ಬಂಧವುಳ್ಳಡೆ ತಾನೆ ಕೂಡಿ
ತ್ತೆಂದು ಮೆಲ್ಲನೆ ಜಾಱಿ ನುಡಿದಳು ಸಕಳೆಯಲ್ಲಮಗೆ ॥ ೧೦೧ ॥

ಆಗಲೆನುತಲಿ ಬಳಿಕ ಪಾತ್ರದ
ಭೋಗದವರೊಳು ಮಧುಕ ನಾಥಗೆ
ಹೋಗಿ ಮಾಯಾಂಗನೆಯ ಲಾಸ್ಯದ ಕೇಳಿಯುಳಿಗವ ।
ಜೋಗವಿಸುತಿರುತಿರ್ದ ಭಕ್ತಿಯ
ಭಾಗದಲಿ ತಾನೊಲಿದ ಕಾರಣ
ವಾ ಗರುವನೆಮ್ಮಲ್ಲಮ ಪ್ರಭು ಲಿಂಗ ಲೀಲೆಯೊಳು ॥ ೧೦೨ ॥

ಗತಿ ೪

## ಅಲ್ಲಮನ ವೃತ್ತಾಂತ

ಧರಣಿ ತಳದೊಳು ನಿಚ್ಚ ಮಧುಕೇ
ಶ್ವರನನಭಿವಂದಿಸುತ ಕಾಮಾ
ತುರದಲಲ್ಲಮಗೋತು ಮಾಯಾ ದೇವಿಯಿರುತಿರಲು ।
ಹಿರಿದು ದಿನಗಳು ಹೋದವೆನುತಲಿ
ಗಿರಿಜೆ ಮಾಯೆಯ ಹದನನೀಕ್ಷಿಸಿ
ಕರೆದು ತರಲಿಕೆ ಕಳುಹಿದಳು ಬೆಸನಿತ್ತು ವಿಮಳೆಯನು ॥ ೧೦೩ ॥

ಬಂದು ಭರವಸದಿಂದ ಕನ್ನೆಯ
ಮಂದಿರವನೊಳ ಹೊಕ್ಕು ಭೋಂಕನೆ
ಮುಂದೆ ನಿಂದಿರೆ ಕಾಣುತವೆ ಸತ್ಕರಿಸಿ ಕುಳ್ಳಿರಿಸಿ ।
ಇಂದು ಮುಖಿ ನೀನೆತ್ತಣಿಂದೆ
ಯ್ತಂದೆ ಏತಕೆ ನಿನ್ನ ಹೆಸರೇ
ನೆಂದು ಮಾಯಾ ದೇವಿ ಕೇಳಿದಳೊಲಿದು ವಿಮಳೆಯನು ॥ ೧೦೪ ॥

ಕೆಳದಿ ನಿನ್ನನು ನೋಡಲಂಬಿಕೆ
ಕಳುಹಿದಡೆ ರಜತಾದ್ರಿಯಿಂದಾ
ನಿಳಿದು ಬಂದೆನು ವಿಮಳೆಯೆಂಬವಳಾನು ನೀನೀಗ ।
ಇಳೆಯಲುದಯಿಸಿ ಮಱವೆಯಾದಡೆ
ತಿಳುಹುವೆನು ನಾ ನಿನಗದೆಲ್ಲವ
ನೊಲಿದು ಕಾರಣ ಕಥನವನು ಕೇಳೆಂದಳಾ ವಿಮಳೆ ॥ ೧೦೫ ॥

ಹರನ ನಿಷ್ಕಲ ರೂಪನಲ್ಲಮ
ನಿರವಿನಿಂದಲಿ ತಾನು ತಿಳಿವಾ
ತುರಕೆ ತನ್ನ ಗುಣಸ್ವರೂಪದ ಮಾಯೆ ನಿನ್ನುವನು ।
ಧರೆಗೆ ಕಳುಹಲು ನೀನು ತಡೆದಿರು
ತಿರಲು ನಿನ್ನನು ತಿಳುಹಿ ತರಲಿಕೆ
ಗಿರಿಜೆ ಬಳಿಕಿಂತೆನ್ನ ಕಳುಹಿದಳೆಂದಳಾ ವಿಮಳೆ ॥ ೧೦೬ ॥

ಬಳಿಕ ಮಾಯಾಂಗನೆಯ ಮನಸಿಗೆ
ತಿಳಿವು ತಿಣ್ಣನೆ ತಿಟ್ಟವಿಟ್ಟಿತು
ಹೊಳಹು ಹೊಮ್ಮಿತು ತನ್ನ ಪೂರ್ವದ ಕಥನ ಕಾರಣದ ।
ಬೆಳವಿಗೆಗೆ ಬೆಡೆಯಾಯ್ತು ನೆನಹಿನ
ನೆಳಲು ಮಿಂಚಿದುದೊಳಗೊಳಗೆ ನಿ
ರ್ಮಳರ ಸಂಗವು ಕಳೆಯದಿಹುದೇ ಮನದ ಮೈಲಿಗೆಯ ॥ ೧೦೭ ॥

ಹರಿ ಹರ ಬ್ರಹ್ಮಾದಿ ದೇವಾ
ಸುರರು ಜನನಕೆ ಬರಲು ಜಾತಿ
ಸ್ಮರಣೆಯಿಲ್ಲೆನಲಾವು ಸತಿಯರು ನಮ್ಮ ಪಾಡೇನು ।
ಪಿರಿದು ಪೂರ್ವಸ್ಥಿತಿಯ ಭಾವಿಸ
ಲರಿದು ನೀನದಱಿಂದಲಲ್ಲಮ
ನಿರವನೆಲ್ಲವ ವಿವರಿಸೆಂದಳು ವಿಮಳೆಗಾ ಮಾಯೆ ॥ ೧೦೮ ॥

ಆದಡಾಲಿಸು ಒಂದು ಬುದ್ಧಿಯ
ಲಾದರಿಸಿ ಕೇಳಭವ ತನ್ನ ವಿ
ನೋದದಿಂದಾ ಗಿರಿಜೆಗಱುಹಿದ ಕಥನ ಕೌತುಕವ ।
ಆದಿಯಲಿ ಸಾಕ್ಷಾತವಾಗಿಯೆ
ಮೇದಿನಿಯಲಿರುತಿರ್ದರಮಲ ಗು
ಣಾಧಿಕರು ಸುಜ್ಞಾನಿ ನಿರಹಂಕಾರರೆಂಬವರು ॥ ೧೦೯ ॥

ಬಳ್ಳಿತಾಗಿಯೆ ಚೆಲುವ ಬನವಸಿ
ಬಳ್ಳಿಗಾವೆಯ ಭಕ್ತಿ ಭಾವುಕ
ರೆಲ್ಲರೊಳಗಭಿವಂದ್ಯನಾಗಿ ಸಮಸ್ತ ಭಾಗ್ಯದಲಿ ।
ಬಲ್ಲಿದನು ತಾನೆನಿಸಿ ತನಗೊಂ
ದಿಲ್ಲವೆನುತಲಿ ಪುತ್ರಕಾಮ್ಯದ
ಭುಲ್ಲವಣೆಯಲಿ ಬಳಿಕ ನಿರಹಂಕಾರನಿಂತೆಂದ ॥ ೧೧೦ ॥

ದಾನವಿಲ್ಲದ ಧನವು ಈಶ
ಧ್ಯಾನವಿಲ್ಲದ ತಪವು ಜೀವ
ಸ್ಥಾನದನುಸಂಧಾನವಿಲ್ಲದ ಯೋಗದಭ್ಯಾಸ ।
ಜ್ಞಾನವಿಲ್ಲದ ಸಿದ್ಧಿ ವರಸಂ
ತಾನವಿಲ್ಲದ ಬಾಳ್ಕೆಯಲಿ ಫಲ
ವೇನು ದೊರಕುವುದೆನುತ ನಿರಹಂಕಾರ ಚಿಂತಿಸಿದ ॥ ೧೧೧ ॥

ಸತಿ ಸಹಿತ ಸಂಕಲ್ಪ ಸಾಧನ
ಗತಿಯ ಮೇಳಾಪದಲಿ ನೆಜಿಕೆ ನಿ
ಶ್ಚಿತವ ಮಾಡಿ ಮನಸ್ಸನೇಕೋ ಭಾವನಿಷ್ಠೆಯಲಿ ।
ಪ್ರತಿಯಿಡುವ ಪಂಚೇಂದ್ರಿಯಂಗಳ
ನತಿಗಳೆವ ನಂದನನ ಬಯಕೆಯ
ಮತಿಗಳಲಿ ಸುಜ್ಞಾನಿ ನಿರಹಂಕಾರರೊಪ್ಪಿದರು ॥ ೧೧೨ ॥

ಆ ಸಮಾಧಿಯ ಭಾವದಲಿ ನವ
ಮಾಸ ಪೂರಿತವಾಗಿ ನೆನಹಿನ
ನೇಸಜಿನ ಬಲು ಬಿಸಿಲು ಬೆಳಗಿದುದಂತರಂಗದಲಿ ।
ಲೇಸೆನಿಸಿ ಕಾಣಿಸಿದುದೊಯ್ಯನೆ
ಭಾಸುರ ಶ್ರೀ ಮೂರ್ತಿಯೊಂದು ವಿ
ಳಾಸ ನಿರಹಂಕಾರ ಸುಜ್ಞಾನಿಗಳ ಮನದೊಳಗೆ ॥ ೧೧೩ ॥



ಕಂಡರೇಕೋ ಭಾವದಲಿ ನಿ
ಷ್ಖಂಡ ಮಹಿಮನನಖಿಳ ಭವ ಭಯ
ಖಂಡನನನಾದ್ಯಂತ ರಹಿತನನಪ್ರಮೇಯನನು ।
ಚಂಡ ಕರ ಕೋಟಿ ಪ್ರಕಾಶೋ
ದ್ದಂಡ ಮಯನ ಸುಹೃನ್ಮನೋಂಬುಜ
ಮಂಡಿತನನಾ ದಂಪತಿಗಳೊಲಿದಂತರಂಗದಲಿ ॥ ೧೧೪ ॥

ಕರಣಗಳು ಕಾಲಿಡಲು ನೇತ್ರದ
ಬಿರಿ ಮುಗುಳು ಬಿಚ್ಚಿದವು ನಾಡಿಯು
ಹೊರಳಿ ಹುರಿ ಗೊಳಿಸಿದವು ಚೇಷ್ಟಿಸಿ ಬಾಹಿರಂಗದಲಿ ।
ಅರಳಿದುದು ಮನದಟ್ಟೆಕೆ ಭೋಂಕನೆ
ಹೊರೆಯಲಿಹ ಬಾಲಕನ ಕಂಡರು
ಪರಮ ನಿರಹಂಕಾರ ಸುಜ್ಞಾನಿಗಳು ಹರುಷದಲಿ ॥ ೧೧೫ ॥

ಬಿಸಿಲ ಬೇಟ್ಟೆಳಗಿಳಿದು ಶೋ
ಭಿಸುವ ಸೂರ‍್ಯನೊ ಹಿಮವನತಿಗಳೆ
ದೆಸೆವ ಚಂದ್ರನೊ ನೆಟ್ಟನಾಶ್ರಿತ ಭಕ್ಷ ಗುಣವಳಿದು ।
ಮಿಸುಪ ವಹ್ನಿಯೊ ಪೇಳೆನಲು ರಂ
ಜಿಸುವ ತೇಜೋಮಯದ ಬಾಲಕ
ನೆಸೆದನಾ ಸುಜ್ಞಾನಿ ನಿರಹಂಕಾರರಿದಿರಿನಲಿ ॥ ೧೧೬ ॥

ಹೊಗಳಿ ಹೋರುವ ವೇದ ಶಾಸ್ತ್ರದ
ಬಗೆಗೆ ಬಾರದ ಹರಿ ವಿರಿಂಚ್ಯಾ
ದಿಗಳು ಸಾಧಿಸಿ ಕಾಣಲಱಿಯದ ಪರಮ ಮುನಿ ನಿಕರ ।
ಮೊಗಸಿ ಮಾಡುವ ತಪಕೆ ಸಿಲುಕದ
ಸಗುಣ ನಿರ್ಗುಣ ಮೂರ್ತಿಯಲ್ಲದ
ವಿಗಡ ಶಿಶುವನು ಕಂಡರಾ ದಂಪತಿಗಳರ್ತಿಯಲಿ ॥ ೧೧೭ ॥

ಹಾರವಿಸಿ ನಲಿದೆತ್ತಿ ಕಿಂಚಿತು
ಭಾರವಿಲ್ಲದೆ ಕೈಗೆ ಸೋಂಕದೆ
ಸಾರ ತೇಜಃಪುಂಜ ತನು ಶಿಶು ತನ್ನ ಕೈಯೊಳಗೆ ।
ಪೂರವಿಸಿಕೊಂಡಿರಲು ಬಳಿಕಾ
ನಾರಿ ವಿಸ್ಮಯವಾಗಿ ನಿರಹಂ
ಕಾರನನು ಕೇಳಿದಳಿದೇನೆನುತಾತ್ಮಜನ ಪರಿಯ ॥ ೧೧೮ ॥

ಈತನಾರೆಂಬಡೆ ಸದಾ ಸಾ
ಕ್ಷಾತನವನಿ ಜಲಾನಲಾನಿಲ
ಭೂತ ತತ್ವವಿದೂರ ಪರಮಾನಂದ ರಸ ಭರಿತ ।
ಜಾತನಲ್ಲ ವಿಚಾರಿಸುವಡೆ ಅ
ಜಾತನಲ್ಲೆಂದೆನುತಲುಪಮಾ
ತೀತನೀ ಶಿಶುವೆಂದ ನಿರಹಂಕಾರ ನಿಜಸತಿಗೆ ॥ ೧೧೯ ॥

ಬಲ್ಲಡೀ ಶಿಶುವೇತಱೊಳಗಿಹ
ಸಲ್ಲ ಹೊಱಗಿಹನಲ್ಲ ಭಾವಿಸ
ಲಿಲ್ಲದಿರುತಿಹನಲ್ಲವೆನುತಾ ತಂದೆ ತಾಯಿಗಳು ।
ಎಲ್ಲ ಜಾಡ್ಯದ ಜಂಜಡಂಗಳ
ನಲ್ಲವೆನಿಸುವ ಬಾಲಕಗೆ ಬಳಿ
ಕಲ್ಲಮ ಪ್ರಭುವೆಂದು ಹೆಸರನು ಕೊಟ್ಟರರ್ತಿಯಲಿ ॥ ೧೨೦ ॥

ಗಳಿಗೆ ಸಂಖ್ಯೆಗೆ ನುಡಿಯ ಕಲಿತನು
ಗಳಿಗೆ ಸಂಖ್ಯೆಗೆ ನಡೆಯ ಕಲಿತನು
ಗಳಿಗೆ ಸಂಖ್ಯೆಗೆ ಬೆಳೆದನವರ ಮನೋರಥದ ಕೂಡೆ ।
ಗಳಿಗೆ ಸಂಖ್ಯೆಗೆ ಬಾಲ ಲೀಲೆಯ
ನಳವಡಿಸಿ ಕೊಂಡಾಡುತಿಹ ಮ
ಕ್ಕಳಲಿ ಮೆಱೆವುತಲಿರ್ದನಲ್ಲಮ ತನ್ನ ಲೀಲೆಯಲಿ ॥ ೧೨೧ ॥

ಆತನೋದಡೆ ವೇದ ಶಾಸ್ತ್ರ ಸ
ಮೇತವಾತನ ನಾಲಗೆಯ ತುದಿ
ಗಾತು ಬೆಸಸನು ಬೇಡುತಿಹವಾತನ ಪದಾಬ್ಜದಲಿ ।
ಓತು ಸತ್ಕ್ರಿಯೆ ನಿಕರಗಳು ಕ
ಯ್ಯಾತು ನೇಮವ ಹಾರುತಿರ್ಪವು
ಭೂ ತಳದೊಳಲ್ಲಮನ ಬೆಳವಿಗೆ ಬೆಳಸಿತಚ್ಚರಿಯ ॥ ೧೨೨ ॥

ರೂಢಿಗಚ್ಚರಿಯಾದ ಬಾಲ
ಕ್ರೀಡೆಗಕ್ಕಜ ಗೊಂಡು ಕಂಡವ
ರಾಡಿಕೊಳುತಿರೆ ಕಣ್ಣುಗಿಸುರಹುದೆಂದು ಮೋಹದಲಿ ।
ನೋಡಿ ತೂಪಿಱಿಡಕ್ಕಜಿಲಿ ಕೊಂ
ಡಾಡಿ ಕರ ಸಂತೋಷದಲಿ ಕೈ
ಗೂಡಿ ಬಣ್ಣಿಸಿ ಜನನಿ ಜನಕರು ಕರೆದರಲ್ಲಮನ ॥ ೧೨೩ ॥

ವಿಮಲ ಮುನಿಗಳ ವರ ಸಮಾಧಿಗೆ
ಸಮಯವಿಲ್ಲದ ದೇವ ಬಾರೈ
ದ್ಯುಮಣಿ ಶಿಖಿ ಶಶಿ ಕೋಟಿ ತೇಜೋಮೂರ್ತಿ ಮಯ ಬಾರೈ ।
ಕಮಲ ಸಂಭವ ವಿಷ್ಣು ಮೊದಲಾ
ದಮರರಱಿವಿಗೆ ನಿಲುಕದಿಹ ನಿರು
ಪಮನೆ ಬಾರೆನುತವರು ಬಣ್ಣಿಸಿ ಕರೆದರಲ್ಲಮನ ॥ ೧೨೪ ॥

ಹರುಷದಿಂದಲಿ ಜನನಿ ಜನಕರು
ಕರೆವುತಿರಲಾ ಬಾಲ ಭಾವದ
ಪರಿಯನಾಗಳೆ ಬಿಸುಟು ಸಾಕಿನ್ನೆನುತ ನಡೆತಂದು ।
ವರ ಗುರು ಶ್ರೀ ಮೂರ್ತಿಯಾಗಿಯೆ
ಪರಮ ತತ್ವ ನಿರೂಪಣೆಯ ವಿ
ಸ್ತರಿಸಲುದ್ಯೋಗಿಸಿದನಲ್ಲಮ ತನ್ನ ಲೀಲೆಯಲಿ ॥ ೧೨೫ ॥

ಕೇಳಿರೇ ನಿಮ್ಮಯ ಸಮಾಧಿಯ
ಕೇಳಿಗೋಸುಗವಾನು ರೂಪಿಸಿ
ಬಾಲ ಭಾವ ಚೇಷ್ಟೆಯ ತೋಱಿದೆನಿನ್ನು ಸಾಕೆನಗೆ ।
ಲೀಲೆಯಿಂದಾನೆನ್ನ ನಿಜದ ನಿ
ರಾಳ ನಿಶ್ಚಳ ನಿತ್ಯ ಸುಖ ಸ
ಮ್ಮೇಳದಲಿ ನಾನಾಡುತಿಹೆನೆನುತಿರ್ದನಲ್ಲಮನು ॥ ೧೨೬ ॥

ಆವ ತೆಱದಿಂದಾದಡೆಯು ಮ
ತ್ಸೇವೆಗೊಲಿದೀ ಪರಿಯಲಾ ಪರ
ದೈವವೇ ಪ್ರತ್ಯಕ್ಷವಾಗಿಯೆ ತೋಱಿಯುಗಲಿದಡೆ ।
ನಾವು ನಮ್ಮಯ ಸದ್ಗತಿಯ ನಂ
ಭಾವಿಸುವೆವೆಂದೆನುತಲಲ್ಲಮ
ದೇವಗೊಲಿದಾ ಜನನಿ ಜನಕರು ನುಡಿದರಭಿಮತವ ॥ ೧೨೭ ॥

ಬಗೆಯೆ ನಿರಹಂಕಾರ ಸುಜ್ಞಾ
ನಿಗಳ ಮೇಳವನೊಲ್ಲದಾ ಪ್ರಭು
ವಗಲಿ ತಾನಿರಬಲ್ಲನೇ ಬೇಕಾದಡೀ ಹದನ ।
ನಿಗಮದಲಿ ಶಾಸ್ತ್ರದಲಿ ಅನುಭಾ
ವಿಗಳ ನುಡಿಯಲಿ ಕೇಳುವುದು ನಾ
ನಗಲೆ ನಿಮ್ಮುಮವನೆಂದನಲ್ಲಮ ಜನನಿ ಜನಕರಿಗೆ ॥ ೧೨೮ ॥

ಬಳಿಕ ತತ್ವ ವಿವೇಕವೆಲ್ಲವ
ನಳವಡಿಸಿ ಕೊಟ್ಟೈಕ್ಯ ಭಾವ
ಸ್ಥಳವ ಕಾಣಿಸಿ ದೃಷ್ಟದಲಿ ಪರಿಪೂರ್ಣಮಯನೆನಿಸಿ ।
ಇಳೆಯೊಳಾ ಸುಜ್ಞಾನಿ ದೇವಿಗೆ
ನಲಿದು ನಿರಹಂಕಾರ ದೇವಗೆ
ತಿಳುಹಿ ನಿತ್ಯವನಿತ್ತನಲ್ಲಮ ಲಿಂಗ ಲೀಲೆಯಲಿ ॥ ೧೨೯ ॥

ಅದು ನಿಮಿತ್ತದಲಲ್ಲಮನ ಕರು
ಣದಲಿ ಪಡೆವುದು ಸಚ್ಚಿದಾನಂ
ದದ ನಿರಾಕುಳ ನಿತ್ಯ ಪದವನು ಗಿರಿಜೆ ಕೇಳೆಂದು ।
ಮುದದಲೀಶ್ವರನೊರೆದನಂದಾ
ನದನು ಕೇಳಿದು ಬಲ್ಲೆನೆಂದಾ
ಹದನ ಮಾಯೆಗೆ ಹೇಳುತಿರ್ದಳು ವಿಮಳೆ ವಿಸ್ತರಿಸಿ ॥ ೧೩೦ ॥

ಹರನ ಭಕ್ತಿಯ ಮಾಡಿದಡೆ ಗೋ
ಚರಿಸಿ ತೋಱುವನಲ್ಲಮ ಪ್ರಭು
ಕರುಣದಿಂದಲಿ ನೀನು ಬಳಿಕಾತನಲಿ ಬಗೆ ಬಂದ ।
ವರ ಮನೋರಥ ಸಿದ್ಧಿಯನು ಪ್ರತಿ
ಕರಿಸಿ ಪಡೆವುದು ಕೇಳೆನುತಲಾ
ದರಿಸಿ ಮಾಯೆಗೆ ಹೇಳುತಿರ್ದಳು ವಿಮಳೆ ವಿನಯದಲಿ ॥ ೧೩೧ ॥

ಸುದತಿ ನೀನಱುಹಿಸಿದ ಮುನ್ನವೆ
ಮುದದಲೀಶ್ವರ ಭಕ್ತಿಯಿಂದಲಿ
ಮಧುಕ ನಾಥನ ನಿಚ್ಚ ಪೂಜಿಸುವೆನು ವಿಧಾನದಲಿ ।
ತುದಿಗೆ ನಾನಿನ್ನೇನ ಮಾಡುವೆ
ನದಱಿಲಾದಡೆ ಕಾಣೆನೇನುವ
ನಿದಕೆ ನಾ ಬೇಸತ್ತೆನೌ ಕೇಳೆಂದಳಾ ಮಾಯೆ ॥ ೧೩೨ ॥

ತರುಣಿ ನಿನಗುಪದೇಶವಿಲ್ಲವೊ
ನಿರುತ ಮಂತ್ರ ವಿಹೀನವೋ ಮೇಣ್
ಪರಮ ತಂತ್ರ ಕ್ರಿಯಾ ಕಳಾಪಗಳೂನವೋ ಬಱಿದೆ ।
ಹರನ ಭಕ್ತಿ ನಿರರ್ಥವೆಂದು
ಚ್ಚರಿಸ ಬಹುದೇ ಮಾಯೆ ನಿನ್ನಯ
ಮರುಳುತನಗಳ ಮಱೆದು ಕಳೆ ಸಾಕೆಂದಳಾ ವಿಮಳೆ ॥ ೧೩೩ ॥

ಎನಲದೆಲ್ಲವ ಕೇಳಿ ತನ್ನಯ
ಮನಕೆ ಸೊಗಸದೆ ಬಳಿಕ ನಾನಿ
ನ್ನಿನಿತು ಕುಶಲದ ಗೊಡವೆಗಾಱಿಸು ಬಲ್ಲ ಪರಿಯಿಂದ ।
ನೆನೆದು ನನ್ನಿಚ್ಛೆಯಲಿ ದೇವಾ
ರ್ಚನೆಯ ಮಾಡಿದೆನಿಸ್ನು ಸಾಕೆಂ
ದೆನುತ ಬೇಸಱಿಕೆಯಲಿ ನುಡಿದಳು ವಿಮಳೆಗಾ ಮಾಯೆ ॥ ೧೩೪ ॥

ಅಲ್ಲಮನು ತಾನೆಂಬ ಹೆಸರವ
ನಲ್ಲಮ ಪ್ರಭುವಾಗಲಾಪನು
ಭುಲ್ಲವಣೆಯಲಿ ನಿನ್ನ ಜವ್ವನ ಕೊಬ್ಬಿನಲಿ ಮಱೆದು ।
ಪಲ್ಲವಿಸಿ ನೀ ಕಾಮಿಸಿರ್ದಡೆ
ಖುಲ್ಲತನದಲಿ ವಿಕೃತವೇಷದ
ಲಲ್ಲಮನೆ ತಾ ಬಂದನೈಸಲೆ ಎಂದಳಾ ವಿಮಳೆ ॥ ೧೩೫ ॥

ಎಂದಡಾನೇನಱಿಯೆನಕಟಾ
ಮಂದ ಮತಿಯೇ ಅಲ್ಲಮ ಪ್ರಭು
ವೆಂದೆನಿಸಿಕೊಂಬವನು ತಾ ಪ್ರತ್ಯಕ್ಷ ಪರ ಬೊಮ್ಮ ।
ಎಂದು ಹೇಳುವರೆಲ್ಲರಿವನೇ
ಸಂದ ಮದ್ದಳೆಯಲ್ಲಮನು ಬಿಡು
ಹೊಂದದೌ ನೀ ಹೇಳುವುದು ಹುಸಿಯೆಂದಳಾ ಮಾಯೆ ॥ ೧೩೬ ॥

ಅಕಟ ಮರುಳೇ ಅಲ್ಲಮ ಪ್ರಭು
ಸಕಲರಿಗೆ ಸಾಕಾರವಹ ಸಾ
ಧಕರ ನಿರ್ಮಳಮತಿಗೆ ನಿರ್ಗುಣ ರೂಪನಾಗಿಹನು ।
ಪ್ರಕಟಿಸುವೆ ನೀ ನಿನ್ನ ವಿಷಯದ
ವಿಕಳತನವನು ಬಿಟ್ಟು ಸಲೆ ಸಾ
ತ್ವಿಕದ ಬುದ್ಧಿಯಲೀಕ್ಷಿಸೆಂದಳು ಮಾಯೆಗಾ ವಿಮಳೆ ॥ ೧೩೭ ॥

ಆದಡಾನದನಱಿಯೆನೌ ಬೇ
ಕಾದಡಾ ಮದ್ದಳೆಗನನು ದಿಟ
ಭೇದಿಸಲು ನೀ ಬಲ್ಲೆಯಾದಡೆ ತೋಱಿಸುವೆನವನ।
ವಾದವೇತಕೆ ನಿನ್ನ ಮನಸಿಗೆ
ವೇದಿಸುವೆ ದಿಟದಲ್ಲಮನೆ ಅವ
ನಾದನಾದಡೆ ಬಳಿಕ ನೋಡುವೆನೆಂದಳಾ ಮಾಯೆ ॥ ೧೩೮ ॥

ಎನುತ ವಿಮಳೆಯು ಕೂಡಿಕೊಳುತಾ
ವನಿತೆ ನಿತ್ಯಸ್ಥಿತಿಯು ದೇವಾ
ರ್ಚನೆಗೆ ದೇವಾಲಯುಕೆ ಬಂದಳು ಸಕಲ ವಿಭವದಲಿ।
ಮನವೊಲಿದು ಮಧುಕೇಶ್ವರನ ಮಂ
ದನೆಯುನೆಲ್ಲವ ಮಾಡಿ ಮಾಯಾಂ
ಗನೆ ವಿರಾಜಿಸಿ ಬಂದು ನಿಂದಳು ನೃತ್ಯ ರಂಗದಲಿ ॥ ೧೩೯ ॥

ಗತಿ ೫

## ಮಾಯೆಯ ತಿರಸ್ಕಾರ

ಹೂಡಿ ಹಣ್ಣಿದ ಜಗದ ಜಂತ್ರವ
ನಾಡಿಸುವ ಮಾಯಾಂಗನೆಯು ತಾ
ನಾಡಿಸುವೆನೆಂಬುದನು ಪ್ರತ್ಯಕ್ಷದಲಿ ತೋರ್ಪಂತೆ ।
ಆಡಿಸುವ ಮದ್ದಳೆಯ ಜೋಕೆಯ
ಜೋಡಿಸುತಲಲ್ಲಮನು ಪಾತ್ರವ
ನಾಡುವವಳಾ ಮಾಯೆ ಲೋಕವ ಮರುಳು ಮಾಡುತಲಿ ॥ ೧೪೦ ॥

ಲಲಿತ ನಿರ್ಮಳ ಚಂದ್ರಕಾಂತದ
ಶಿಲೆಯ ಹತ್ತಿರೆ ಲತೆಯ ದಾವಾ
ನಳನು ಕೊಳಲಾ ಜ್ವಾಲೆಯಾ ಶಿಲೆಯೊಳಗೆ ತೋರ್ಪಂತೆ ।
ತಿಳಿಯದಜ್ಞಾನಿಯದ ಜನಕೆ ಮಾಯೆಯ
ತಳಿತ ಕಾಮ ಜ್ವಾಲೆಯಲ್ಲಮ
ನೊಳಗೆ ಪ್ರತಿಬಿಂಬಿಸಿದುದಾತನೆ ಕಾಮಿಯೆಂಬಂತೆ ॥ ೧೪೧ ॥

ಈತನೇ ದಿಟದಲ್ಲಮನೊ ಮೇ
ಣೀತ ಮದ್ದಳೆಯಲ್ಲಮನೊ ನಾ
ನೀ ತರುಣಿಗೀತನನು ತೋರಿಸಿ ತಿಳಿಯ ಬೇಕೆನುತ ।
ಪ್ರೀತಿಯಿಂದಲಿ ತನ್ನ ಮನದೊಂ
ದಾತುರತೆಯನು ಸೈರಿಸುತ ಬಳಿ
ಕೋತು ಮಿಗೆ ತನ್ನೊಳಗೆ ತಾನಿಂತೆಂದಳಾ ಮಾಯೆ ॥ ೧೪೨ ॥

ಸಂದಣಿಸುತಿಟ್ಟಣಿಸಿ ನೆರೆದಿಹ
ಮಂದಿಯಲಿ ನಾನಿವನನಸುಚಿತ
ದಿಂದಲಿವಳಿಗೆ ಸುಡಿದು ತೋಱುವುದೆಗ್ಗತನವೆಸುತ ।
ಅಂದು ವಿಮಳೆಗೆ ಜಾತಿ ಜಾಣಿಕೆ
ಯಿಂದಲಭಿನವ ಪಾಡು ನೋಟಗ
ಳಿಂದ ಬಳಿಕಲ್ಲಮನ ತೋಱಿಸುತಿರ್ದಳಾ ಮಾಯೆ ॥ ೧೪೩ ॥

ಆಕೆ ಕಡೆಗಣ್ಣಿನಲಿ ತೋಱಿದ
ಡೀಕೆ ನಡುಗಣ್ಣಿನಲಿ ನೋಡುತ
ಲಾ ಕಳಾವಿದನಾಗಿ ಕಾಣಿಸುವಾತನಿಂಗಿತವ ।
ಲೋಕದೊಳಗಿಂತಪ್ಪ ಮಾನವ
ರಾಕೃತಿಯ ನಾ ಕಾಣೆನೆನುತಾ
ಲೋಕಿಸಿದಳನಿಮಿಷತೆಯಿಂದಾ ವಿಮಳೆಯಲ್ಲಮನ ॥ ೧೪೪ ॥

ಕಂಗಳಲಿ ಮಾತುಗಳು ತಿಳಿವಡೆ
ಕಂಗಳಲಿ ಮಾಟಗಳು ಬಗೆವಡೆ
ಕಂಗಳಲಿ ಸಮ್ಮೋಹಗಳು ಕಂಗಳಲಿ ಸ್ನೇಹಗಳು ।
ಕಂಗಳಲಿ ಸರ್ವಪ್ರಪಂಚಗ
ಳಂಗನೆಯರಿಗೆ ಸಹಜವೆಂದೆನೆ
ಕಂಗಳಿಂದಾ ವಿಮಳೆ ಸೂಚಿಸಲಱಿದಳಾ ಮಾಯೆ ॥ ೧೪೫ ॥

ಬಳಿಕಲೊಯ್ಯನೆ ಬಱಿಯ ಬೇಟದ
ಬಳಕೆ ಬಳಲಿತು ತನ್ನ ಪೈಜೆಯ
ನೆಳಲು ನೆಲಸಿತು ಹೇವ ಹೆಚ್ಚಿತು ಕಾಂಕ್ಷೆ ಕವಲಾಯ್ತು ।
ತಿಳಿವು ತೀವಿತು ಲಾಸ್ಯ ಲೀಲೆಯ
ಚಳತೆ ಖಂಡಿಸಿ ಹಿಂಗಿ ಹೋಯಿತು
ಹೊಳೆದುದಲ್ಲಮನಳಬಳವನಱಿವಾಸೆ ಮಾಯೆಯಲಿ ॥ ೧೪೬ ॥

ಮುರಿದುದಾ ಮಸವದಱ ಸಂಗಡ
ಮುರಿದುದಾ ನಸು ನೋಟವಾಗಳೆ
ಮುರಿದುದಾ ಮುಖ ಮುತ್ತಿನೋಲೆಯ ಬೆಳಗ ಪಸರಿಸುತ ।
ತಿರುಗಿ ತೀವಿತು ಲಾಸ್ಯ ಮಧುಕೇ
ಶ್ವರನ ಸಮ್ಮುಖದಿಂದಲೊಯ್ಯನೆ
ಸರಿಸಗೊಂಡುದು ಮತ್ತೆ ಮಾಯೆಯ ಮಾಟವಲ್ಲಮನ ॥ ೧೪೭ ॥

ನೋಟವೆಸೆದುದು ಮುನ್ನ ಮುಟ್ಟಿದ
ಬೇಟವಲ್ಲದೆ ಬೇಱೆ ಬುದ್ಧಿಯ
ಕೂಟದಿಂದ ಲತಾಂಗ ಲಂಪಿಸಿತಾತನ ಸ್ಥಿತಿಯ ।
ನಾಟಿ ನಲಿದುದು ಚಿತ್ತವೀ ನಟ
ನಾಟಕನ ಸಿಕ್ಕಿಸುವ ಬಗೆಯಲಿ
ಮಾಟ ಮಕರಿಸಿ ಕಾಣಲಾಯಿತು ಮತ್ತೆ ಮಾಯೆಯಲಿ ॥ ೧೪೮ ॥

ಈಕೆಯಂದವನಱಿದು ನಾವಿ
ನ್ನೇಕೆ ಸದಮಲ ಸ್ವಸ್ವರೂಪವ
ಕಾಕರಿಗೆ ಕಾಣಿಸುವುದನುಚಿತವೆನುತ ತನ್ನೊಳಗೆ ।
ಸಾಕೆನುತ ಸಟ್ಟುವಿಗತನವನು
ನೂಕುತಲಿ ಮದ್ದಳೆಯ ತಾನೊಡೆ
ಹಾಯ್ಕಿ ನಗುತಲಿ ಹೋದನಲ್ಲಮನಖಿಳ ಜಗವಱಿಯೆ ॥ ೧೪೯ ॥

ಹೊಸತಿದೇನಿದ್ದಿದ್ದು ಸುಮ್ಮನೆ
ಗಸಣಿಯಿಲ್ಲದಿದೇಕೆ ಅಲ್ಲಮ
ಬಿಸುಟು ಹೋದನು ಮದ್ದಳೆಯನೆಂದೆನುತಲಲ್ಲಿರ್ದ ।
ಶಶಿ ಮುಖಿಯರಾ ಮೇಳದವರಾ
ಮುಸುಱಿ ನೋಡುವ ನೋಟಕರು ಕಾ
ಣಿಸದ ಕಾರ್ಯಕೆ ಬೆಱಗುಗೊಂಡರು ಕೂಡೆ ತಮ ತಮಗೆ ॥ ೧೫೦ ॥

ಬಾಲೆ ಹಂಬಲಿಸಿದಡೆ ಫಲವೇ
ನೇಳು ತಡೆದಿರದಲ್ಲಮುನನೀ
ರೇಳು ಲೋಕದಲಱಿಸಿ ನೋಡುವೆವೆನುತಲಾ ವಿಮಳೆ ।
ಹೇಳಿದಡೆ ಅಹುದೆನುತ ಚಿತ್ತವ
ತಾಳಿ ತರಹರಗೊಂಡು ಬಳಿಕಲಿ
ಕಾಲು ನಡೆಯಲಿ ಮಾಯೆ ನಡೆದಳು ಕೆಳದಿಯರು ಸಹಿತ ॥ ೧೫೧ ॥

ಹೋಗುತಿರ್ದಳು ಹೊಲಬು ಕೇಳುತ
ಬೇಗ ಬೇಗದಲಲ್ಲಮುನನಾ
ವಾಗ ಕಾಬೆನೊ ಎಂಬ ಮನದಾತುರದ ತವಕದಲಿ ।
ಆಗಲಡವಿಯ ಬಿದ್ದು ನೆಱೆ ಭೂ
ಭಾಗದಲಿ ವನಚರಿಯರೆಂಬವೊ
ಲಾಗಿ ಮಾಯಾದೇವಿ ವಿಮಳೆ ಸಮಸ್ತ ಸಖಿಸಿಕರ ॥ ೧೫೨ ॥

ಬಿಸಿಲು ಸುಂಟುರು ಗಾಳಿ ದೆಸೆಗಳ
ಮುಸುಕುತಿಹ ಕೆಂದೂಳು ಕಾಳ್ಕಿ
ಚ್ಚೆಸೆವ ನಟ್ಟಡವಿಯಲಿ ನಡೆದೆಯ್ತರುತ ಕಾಲೊಡೆದು ।
ಬಸವಳಿದು ಬೀಳುತ್ತಲೇಳುತ
ಹಸಿವು ತೃಷೆ ಬಳಲಿಕೆಗಳಲಿ ದೂ
ಷಿಸುತ ಬಂದಳು ಮಾಯೆ ತಾನಲ್ಲಮುನನಱಿಸುತಲಿ ॥ ೧೫೩ ॥

ಸೂಡುತಲಿ ಬಿಡು ಜಡೆಗಳನು ಕೈ
ಗೂಡುತಲಿ ಕಡವಸವ ಭೂತಿಯು
ಗೂಡ ಸಂವರಿಸುತ್ತ ಲಾಕುಳ ಯೋಗವಟ್ಟಿಗೆಯು ।
ಜೋಡಿಸುತ ಜಪ ತಪ ಸಮಾಧಿಯು
ಮಾಡುವವರಾ ಮಾಯೆ ಬರಲೆ
ದ್ದೋಡಿದರು ಹುಲಿಗಂಡ ಹುಲ್ಲೆಗಳಂತೆ ದೆಸೆದೆಸೆಗೆ ॥ ೧೫೪ ॥

ಕರುಣಿಗಳ ಬಲ್ಲಹನು ಬೋಳೆಯ
ರರಸ ಭಜಕರ ಬಂಧುವೆನಿಸುವ
ಪರಮ ಪಾವನನಲ್ಲಮ ಪ್ರಭು ತಾನೆ ತನ್ನೊಳಗೆ ।
ವರ ತಪೋಧನರಂಜಿಕೆಯ ನಾ
ತರುಣಿಯರ ಬಳಲಿಕೆಯ ನಾನೇ
ಪರಿಹರಿಸ ಬೇಕೆನುತಲಾ ಕ್ಷಣ ಸುಳುಹು ದೋಱಿದನು ॥ ೧೫೫ ॥

ನಿಲಿಸಿ ಭಯ ಬೇಡೆಂದು ತಾಪಸ
ಕುಳವನಭಯವ ಕೊಟ್ಟು ಕರುಣದ
ಬಳಕೆಯಲಿ ತಾನವರಿಗೊಬ್ಬ ತಪಸ್ವಿಯಂದದಲಿ ।
ನಲಿದು ಹರಿತಹ ಮಾಯೆಯನು ಮೂ
ದಲಿಸಿ ಮುಱಿದೋಡಿಸುವೆನೆನುತಲಿ
ಸುಳುಹು ದೋಱಿದನಾಕೆಗಲ್ಲಮ ಮುನ್ನಿನಂದದಲಿ ॥ ೧೫೬ ॥

ತೃಷೆಗಳಱಿತವು ಕಾಣುತಲಿ ಕಡು
ಹಸುಗಳಡಗಿದವಡವಿಯಲಿ ಕಂ
ಪಿಸುತ ಮುಗ್ಗುತ ಕೆಡೆವುತಲಿ ಮಿಗೆ ಬಂದ ಬಳಲಿಕೆಯ ।
ಮಸಕ ಮಾದುದು ವಿಶ್ರಮಿಸಿದರು
ಶಶಿ ಮುಖಿಯರೆಸ್ತ್ತಂದು ಕಾಣುತ
ಮುಸುಱಿ ಮುತ್ತಿದರಲ್ಲಮನ ಶ್ರೀ ಪಾದ ಪಂಕಜವ ॥ ೧೫೭ ॥

ಲೇಸು ಮಾಡಿದೆಯಯ್ಯ ಮಾಯೆಯು
ನೀಸು ದಿನ ಮನವೊಲಿಸಿ ಕಡೆಯಲಿ
ಘಾಸಿಮಾಡುವುದುಚಿತವೇ ನಿನಗೆನುತ ಕೆಳದಿಯರು ।
ಆ ಸದಾನಂದೈಕ್ಯ ಮೂರ್ತಿ ವಿ
ಳಾಸಿಯಲ್ಲಮ ಲಿಂಗನಿದಿರಲಿ
ಸೂಸಿದರು ತಮ್ಮೊಡತಿಯಾಸಱು ಬೇಸಱಿಲ್ಲವನು ॥ ೧೫೮ ॥

ಆರು ಮೊದಲಲಿ ಬಯಸ ಹೇಳಿದ
ರಾರು ಕಾಣುತ ಕರೆಸ ಹೇಳಿದ
ರಾರು ತನ್ನನು ಬಳಿಕುದಾಸಿನ ಮಾಡ ಹೇಳಿದರು ।
ನಾರಿಯರಿಗಿದು ಸಹಜ ಸಂಚಲ
ಕಾರಣಿಕತನ ತನ್ನ ತಾನೇ
ದೂರಿಸಿದಡಾನೇನ ಮಾಡುವೆನೆಂದನಲ್ಲಮನು ॥ ೧೫೯ ॥

ಎಂದ ಮಾತನು ಕೇಳಿ ಕಡು ಖತಿ
ಯಿಂದಲಹುದೈ ಧೂರ್ತ ನೀ ಗತಿ
ಯೆಂದು ನಂಬಿದಡೊಳ್ಳಿತಾಯಿತು ಬಳಿಕ ಮಾತೇನು ।
ಸಂದ ಸಟೆ ಕುತ್ಸಿತ ಕುಮಂತ್ರದ
ಬಂದಿಕಾರನು ಚಾಟು ಚಪಳಿಗ
ನೆಂದು ನಾ ಮುನ್ನರಿಯೆನೆಂದಳು ಮಾಯೆಯಲ್ಲಮನ ॥ ೧೬೦ ॥

ಕುಟಿಲ ಕುತ್ಸಿತ ಧೂರ್ತ ದುರ್ಜನ
ಅಟಮಟಿಗತನ ಕಪಟ ಕಳವಳ
ಸಟೆ ವಿಕಾರಗಳಲ್ಲಮನವೋ ತಿಳಿಯೆ ಮಾಯೆಯವೋ ।
ದಿಟಕೆ ಬಲ್ಲ ವಿರಿಂಚಿ ಹರಿ ಸುರ
ಕಟಕ ವರ ಮುನಿ ಸಿದ್ಧ ಸಾಧಕ
ಪಟುಗಳೆಲ್ಲರ ಕೇಳಿ ನೋಡೆನುತಿರ್ದನಲ್ಲಮನು ॥ ೧೬೧ ॥

ಒಳ್ಳಿಯವರೈ ನೀನು ಕೋಡಿದ
ರೆಲ್ಲರೆಸ್ವಾಧೀನ ಪಕ್ಷದ
ಬಲ್ಲಿದರು ಕೇಳವರುಗಳ ಬಲ್ಲವಿಕೆಗಳ ಕೇಡ ।
ಎಲ್ಲವನು ಹೇಳುವೆನು ನಿನ್ನಯ
ಸೊಲ್ಲ ಸೋಲಿಸಿ ಸಿಕ್ಕಿಸುವೆನೆನು
ತಲ್ಲಿ ಮಾಯೆ ನಿಜ ಪ್ರತಾಪವನಾಡ ತೊಡಗಿದಳು ॥ ೧೬೨ ॥

ಹರಿಯನೆದೆಯನು ಮೆಟ್ಟಿದೆನು ಶಂ
ಕರನನರ್ಧಾಂಗದೊಳು ನೆಟ್ಟನೆ
ಹರಿಸುಟಿಗೆಯಾಡಿದೆನು ಬ್ರಹ್ಮನ ಬಾಯ ಮುದ್ರಿಸಿದೆ।
ಸುರನರೋರಗರೆಂಬ ಮಱಿವೆಯ
ಮರುಳು ತಂಡವನೆನ್ನ ತೊತ್ತಿರ
ಶರಣು ವೊಗಿಸಿದೆನೇನ ಕೇಳುವೆ ಎಂದಳಾ ಮಾಯೆ ॥ ೧೬೩ ॥

ಜಿನುಗು ಮತಿಗಳ ಸಿದ್ಧ ಸಾಧಕ
ಮುನಿಗಳೆಂಬವದಿರುಗಳನು ನಾ
ಮುನಿದು ಕಚ್ಚುಟ ಕಂಥೆ ಬತ್ತಲೆ ಬೋಳು ಜಡೆ ಲೋಚು।
ಅನಶನವ್ರತ ನಾರು ಬೇರೆಂ
ಬನಿತರಲಿ ದಂಡಿಸುವೆನಾ ಕಾ
ನನದ ಮರುಳರನೇನ ಕೇಳುವೆ ಎಂದಳಾ ಮಾಯೆ ॥ ೧೬೪ ॥

ಹರಿಹರ ಬ್ರಹ್ಮಾದಿಗಳನೆ
ಲ್ಲರನು ನಿನ್ನಾಧೀನವೃತ್ತಿಯ
ಲಿರಿಸಿ ಮಿಗೆ ಱೋಡಾಡಿ ಕಾಡಿದೆನೆಂದು ನೀ ನುಡಿಪೆ।
ಮರುಳೆ ನಿನ್ನನದಾರು ನಾನಾ
ಪರಿಯಲಾಡಿಸುವವರು ನೀನದ
ಪರಿಕಿಸದೆ ಗರ್ವದಲಿ ನುಡಿವರೆ ಮಾಯೆ ಕೇಳೆಂದ ॥ ೧೬೫ ॥

ಆರನಾರಾಡಿಸುವರೆಂಬುದ
ನಾರು ಬಲ್ಲರು ಸಾಕು ಬಱಿಯ ವಿ
ಚಾರವಂತಿರಲೆನ್ನೊಡನೆ ಬಱಿ ಮಾತನಾಡಿದಡೆ।
ಸಾರಲಱಿವವೆ ನಮಗೆ ನಮ್ಮ ಮ
ನೋರಥಂಗಳು ನಿನ್ನ ಧೂರ್ತ ವಿ
ಕಾರವೆಲ್ಲವ ಬಿಟ್ಟು ಕೃಪೆ ಮಾಡೆಂದಳಾ ಮಾಯೆ ॥ ೧೬೬ ॥

ಭಾಷೆ ಸಲ್ಲದೆ ಹೋಯಿತೆನ್ನಯ
ವಾಸಿ ವರ್ಧಿಸಿ ಬತ್ತುತಿದೆ ಕೈ
ಲಾಸದವರಿದ ಕೇಳಿ ನಗುವಂತಾಯಿತೇ ನನಗೆ ।
ಈಸು ಧಾವತಿಯಿಂದ ನಾ ಕಡು
ಘಾಸಿಯಾದೆನು ಬೆಂದ ಹುಣ್ಣನು
ಕೀಸುವರೆ ಕಂಬಿಯಲಿ ಕೇಳಕಟೆಂದಳಾ ಮಾಯೆ ॥ ೧೬೭ ॥

ತರಳೆ ತನ್ನಯ ಹೊನ್ನು ಸಲ್ಲದೆ
ತಿರುಗಿ ಬಂದಡೆ ಅಕ್ಕಸಾಲೆಯ
ದುರುಳತನದಲಿ ಬಯ್ಯಲಹುದೇ ನೀನು ಮತಿಗೆಟ್ಟು ।
ಹರನನರ್ಚಿಸುವಂಗ ಭೇದಾಂ
ತರವನಱಿಯದೆ ಸತಿಯ ಭಕ್ತಿಯ
ಭರದಲೇತಕೆ ಫಲವ ಬಯಸುವೆ ಮಾಯೆ ಕೇಳೆಂದ ॥ ೧೬೮ ॥

ಬೆಱಗು ಹೊಡೆದಿರೆ ನೈದಿಲೆಗೆ ನೇ
ಸಱಿನ ನೆಮ್ಮುಗೆಯಾದ ತೆಱನಲಿ
ಮುಱಿವಡೆದ ಮಾಯಾಂಗನೆಯ ಮುಖಭಂಗವನು ಕಂಡು ।
ಮಱುಗುತಿರ್ದರು ಕೂಡೆ ಕೆಳದಿಯ
ರುಱುಬಿ ಸುಮ್ಮನೆ ಮಾಱು ಮಾತಿಗೆ
ಹಱಿವನೆಣಿಸುತ ವಿಮಳೆ ಬಳಿಕಿಂತೆಂದಳಲ್ಲಮನ ॥ ೧೬೯ ॥

ಶರಣ ಜನ ರಕ್ಷಾಮಣಿಯೆ ಕಿಂ
ಕರ ಚಕೋರ ಸುಧಾಕರನೆ ಭಾ
ಸುರ ದಯಾಂಭೋನಿಧಿಯೆ ನೀನೀ ಸ್ತ್ರೀಯ ತನುಮನವ ।
ಒರೆದು ನೋಡಿದಡಲ್ಲಿ ಭಾವಿಸೆ
ಹುರುಳು ಬಳಿಕೇನುಂಟು ನಿನ್ನಯ
ಕರುಣವಾಕೆಯ ಹರಣವೆಂದಳು ವಿಮಳೆ ವಿನಯದಲಿ ॥ ೧೭೦ ॥

ಬಾಲೆ ನೀರಿಗೆ ಹೆಪ್ಪನೆಱೆದಡೆ
ಹಾಲಿನಂತಿರೆ ಹೆತ್ತು ಭುಂಜಿಸಿ
ಬಾಳಿದವರಾರುಂಟು ಭಾವಿಸಲಾ ಪ್ರಕಾರದಲಿ ।
ಕಾಳು ಮತಿಗಳಿಗೆನಿತು ಬುದ್ಧಿಯ
ಹೇಳಿದಡೆ ಫಲವೇನು ಸಾಕೀ
ಖೂಳೆಗಾನಿನ್ನೇನ ಮಾಡುವೆ ವಿಮಳೆ ಕೇಳೆಂದ ॥ ೧೭೧ ॥

ಕೀಳು ಕಬ್ಬುನ ಮೆಣ್ಣ ಕೋಪಿಸಿ
ಕಾಲಲೊದೆದಡೆ ಮೇಣು ಕರುಣಿಸಿ
ತೋಳಲಪ್ಪಿದಡೇನು ಪರುಷದ ಗಂಡನದಱಂತೆ ।
ಬಾಲೆಗೆಂತಾದಡೆಯು ನಿನ್ನ ಸ
ಮೇಳ ಘಟಿಸಿದ ಬಳಿಕ ಮಾಯೆಯ
ಪಾಲಿಸಲು ಬೇಕೆನುತ ನುಡಿದಳು ವಿಮಳೆಯಲ್ಲಮಗೆ ॥ ೧೭೨ ॥

ವನಿತೆ ನಿನ್ನಯ ಮಾತಹುದು ಕ
ಬ್ಬುನವದಾದಡೆ ಪರುಷ ಮುಟ್ಟಲು
ಕನಕವಹುದಲ್ಲದೆ ವೃಥಾ ಹಳೆಹಂಚು ಹೊನ್ನಹುದೆ ।
ಮನಸು ಸಂಚಲವಾದ ಮಾಯಾಂ
ಗನೆಯದೇಸನು ಮುಟ್ಟಿ ಮಾಡಿದ
ಡಿಸಿತು ನಿಶ್ಚಲವಾಗಲಱಿಯದು ವಿಮಳೆ ಕೇಳೆಂದ ॥ ೧೭೩ ॥

ದೇವ ತಪ್ಪಿದಡೇನು ನೀನು ಕೃ
ಪಾವಲೋಕನದಲಿ ನಿರೀಕ್ಷಿಸಿ
ದೇವಿಯರ ಹೂಣಿಕೆಯ ಸಲಿಸಿದಡೇನು ಕುಂದಹುದೆ ।
ದೇವತನಕೂಣೆಯಮೆ ಬಱಿಯ ವೃ
ಥಾ ವಿಳಾಸದ ಮಾತ ಬೀಱದೆ
ಕಾವುದೈ ಕರುಣದಲಿ ಮಾಯೆಯನೆಂದಳಾ ವಿಮಳೆ ॥ ೧೭೪ ॥

ಒಂದು ಬೀಜವ ಬಿತ್ತಿ ಮೇಣ್ ಮ
ತ್ತೊಂದು ಫಲವನು ಬಯಸಿ ಬಾತಡೆ
ಬಂದುದಹುದೇ ತನಗೆ ದಿಟವೀ ಮಾಯೆ ಮರುಳಾಗಿ ।
ಮುಂದು ಗಾಣದೆ ತಾಮಸದ ಮದ
ದಿಂದ ಸಂಚಲ ಭಕ್ತಿ ಭರದಲಿ
ಬಂದುದುಂಟೇ ಸತ್ಫಲಂಗಳು ವಿಮಳೆ ಕೇಳೆಂದ ॥ ೧೭೫ ॥

ಆದಡೆಲೆ ಘನ ಮಹಿಮ ನಿನ್ನಯ
ಪಾದಗಳನೆಂತಾದಡೆಯು ಸಂ
ಪಾದಿಸಿದ ಬಳಿಕಿನ್ನು ನಿನ್ನಯ ಕರುಣವಿದ್ದಂತೆ ।
ಕಾದು ರಕ್ಷಿಸು ಮನಸು ಬಂದೋ
ಪಾದಿಯಲಿ ಎಂದೆನುತ ಮಧುರಾ
ಮೋದ ವಚನವ ಸುರಿವುತಿರ್ದಳು ವಿಮಳೆಯಲ್ಲಮಗೆ ॥ ೧೭೬ ॥

ವಿಮಳೆ ವಿಮಳೆಯೆನಿಪ್ಪ ಹೆಸರನು
ಕಮಲಸಂಭವ ನಿನಗೆ ಸಲಿಸಿದ
ನಮಲ ಮತಿ ನೀನಹುದು ಚಾಗುರೆ ಎನುತ ಪರಿಣಮಿಸಿ ।
ಕ್ರಮದಲಿನ್ನಾದಡೆಯು ವಿಂಗೆ ವಿ
ಶ್ರಮಿಸಿಸಲು ಬೇಕೆನುತ ಬಳಿಕ
ಲ್ಲಮನು ವಿಂಗೆ ವಿನಯದಲಿ ಮಾಯಾದೇವಿಗಿಂತೆಂದ ॥ ೧೭೭ ॥

ಕಾಮವೆತ್ತಲು ಪರಮ ತತ್ವದ
ಸೀಮೆಯೆತ್ತಲು ತಿಮಿರವೆತ್ತಲು
ತಾಮರಸ ಸಖನೆತ್ತ ಮೇಣ ಜೀವೆತ್ತ ಮಜಿವೆತ್ತ ।
ಭ್ರಾಮಕದ ನುಡಿ ಸಾಕು ನೀನೆ
ತ್ತಾ ಮಹಾ ಘನವೆತ್ತ ಮರುಳೇ
ಕ್ಷೇಮದಲಿ ನೀ ಬಂದ ಬಟ್ಟೆಯಲಬಳೆ ಹೋಗೆಂದ ॥ ೧೭೮ ॥

ಕಡಲ ನೀರುಗಳೆಲ್ಲವಮೃತದ
ಮಡುಗಳಾದಡೆಯುಹವು ಸುರ ಗಿರಿ
ಕುಡಿ ವರಿದು ಹಬ್ಬಿದಡೆ ಹಬ್ಬುವುದವನಿ ಮಂಡಲವ ।
ಗಿಡುಗಳೆಲ್ಲವು ಕಲ್ಪ ತರುವಾ
ದಡೆಯುಹವು ಎತ್ತಾನುಕಾಲಕೆ
ಮಡದಿ ಮಾಯೆಗೆ ಪರಮ ತತ್ವ ಜ್ಞಾನವಿಲ್ಲೆಂದ ॥ ೧೭೯ ॥

ಜಾಱಿದನು ಬಳಿಕಾತನೀಕೆಗೆ
ಹೇಱಿದುದು ಕಡು ದುಗುಡ ಸಖಿಯರು
ನೀಱೆಯನು ಸಂತೈಸಿದರು ನಾನಾ ಪ್ರಕಾರದಲಿ ।
ಗಾಱು ದೂಱಿನ ಮಾಯೆ ಗೀಯೆಗೆ
ತೋಱಿಸುವನೇ ತನ್ನ ನಿಜವನು
ಮೀಱಿ ಮೀಸಲನಲ್ಲಮ ಪ್ರಭು ಗುರು ಗುಹೇಶ್ವರನು ॥ ೧೮೦ ॥

ಮಗಳು ಮದ್ದಳೆಯವನ ಬೆನ್ನಲಿ
ಜಗುಳಿ ಹೋದುದ ಕೇಳಿ ಹರಿ ತಂ
ದಗಣಿತ ವ್ಯಾಮೋಹದಲಿ ಮಾಯಾಂಗನೆಯ ಕಂಡು ।
ನಗೆಗೆಡೆಯ ಮಾಡಿದೆಯಲಾ ದೇ
ಸಿಗನ ಸಂಗವ ಮಾಡಿ ಕೆಡಿಸಿದೆ
ಮಗಳೆ ಎನುತಲಿ ಮಱುಗಿದನು ಮಮಕಾರ ಭೂಪಾಲ ॥ ೧೮೧ ॥

ಬೇಡ ಬೇಡೆಂದಾದಿ ಕಾಲದೊ
ಳಾಡಿ ತೋಱಿತೆ ಮಗಳೆ ಕಡೆಯಲಿ
ಕೇಡು ಬಹುದಿದಱಿಂದಲೆಂದಾನೇಸನೊದಱಿದಡೆ ।
ಕೇಡುಗೊಳಿಸಿಯೆ ತುದಿಯಲಡವಿಯ
ಕೂಡಿದೌ ನೀನೆನುತ ಖತಿಯಲಿ
ಮಱಡಿ ಮುಳುಗುತ್ತ ಮಿಡುಕುತಿರ್ದಳು ಮೋಹಿನೀ ದೇವಿ ॥ ೧೮೨ ॥

ಉಮೆಯ ನೇಮವ ಕೊಂಡು ತಾನ
ಲ್ಲಮನ ಸಾಧಿಸಲೆಂದು ಬಂದಳು
ನಿಮಗೆ ಹೇಳುವೆ ನಾನು ಚಿಂತಿಸಬೇಡ ನೀವಿದಕೆ ।
ದ್ಯುಮಣಿಯಲ್ಲಮು ಸಿಕ್ಕದಾದನು
ತಮದ ಮಾಯೆಗೆ ಅದಟಿ ಚಿಂತಾ
ಭ್ರಮೆಯುಲಡವಿಗೆ ಬಂದಳೆಂದಳು ವಿಮಳೆಯುರಸಂಗೆ ॥ ೧೮೩ ॥

ಕಾರಣವ ಕೈಕೊಂಡು ನಿಮ್ಮ ಕು
ಮಾರಿಯಾದೆನು ಬಂದ ನಮ್ಮಯ
ಕಾರಿಯವು ಕೈಗೂಡದಾಯಿತೆನುತ್ತ ಪತ್ತ್ರಿಗೆ ।
ಹಾರ ಬೇಡಿನ್ನೆಮ್ಮನೆನುತಲಿ
ಘೋರನೆದ್ದಾ ಮಾಯೆ ವಿಮಳಾ
ನಾರಿ ಸಹಿತವೆ ಹೋಗುತಿರ್ದಳು ರಜತಪರ್ವತಕೆ ॥ ೧೮೪ ॥

## ಗತಿ ೬

# ಬಸವಾದಿಗಳ ಅವತಾರ

ವಿಮಳೆ ಸಹಿತವೆ ಹೋಗಿ ತನಗ
ಲ್ಲಮನು ಸಿಕ್ಕದೆ ಹೋದ ಕಾರ್ಯ
ಕ್ರಮವನಾಗಳೆ ಮಾಯೆ ಹೇಳಿದಳತ್ತ ವಿಸ್ತರಿಸಿ ।
ಉಮೆಯುದೆಲ್ಲವ ಕೇಳಿ ಚಿಂತಾ
ಭ್ರಮೆಯುಲಿರುತಿರಲಜುಿದು ಬಂದಾ
ರಮಣಿಯನು ಸಂತೈಸಿ ನುಡಿದನು ನಗುತ ಶಶಿ ಮೌಳಿ ॥ ೧೮೫ ॥

ಸಿಡಿಲು ವಕ್ಕಿಯು ಪಕ್ಕವನು ಕಿ
ತ್ತಡಬಳದ ಬಾಣಸವ ಮಾಡುವ
ಕಡು ಗಲಿಗಳಾರುಂಟು ಕಾಳೋರಗನ ನಿದ್ರೆಯನು ।
ಕೆಡಿಸಿ ಬದುಕುವ ಕೀಲಣದ ಗಾ
ರುಡಿಗರಾರುಂಟೆನ್ನ ತತ್ವದ
ತೊಡಕು ದುರ್ಘಟ ಚಿಂತೆಯೇತಕೆ ಗಿರಿಜೆ ಕೇಳೆಂದ ॥ ೧೮೬ ॥

ಎಲೆ ಸದಾಶಿವ ನಿನ್ನೊಳಾದಡೆ
ಚಲಕೆ ನಾನಂಜುವೆನು ನಿನ್ನಯ
ಬಲುಹಿಗಾನಿದಿರಲ್ಲ ನಿನ್ನಯ ಕರುಣವಿದ್ದಂತೆ ।
ಸಲಹಿ ನಿನ್ನ ನಿಜ ಸ್ವರೂಪದ
ನಿಲವನಱುಹಿಸಿ ಎನ್ನ ಸಲುಗೆಯ
ಸಲಿಸ ಬೇಕೆಂದಗಜೆ ನುಡಿದಳು ಮತ್ತೆ ಪಶು ಪತಿಗೆ ॥ ೧೮೭ ॥

ಆ ನುಡಿಯ ಕೇಳುತ್ತ ಕರುಣಾಂ
ಭೋನಿಧಾನನು ಮೆಚ್ಚಿ ಆದಡೆ
ನೀನು ಮುನ್ನಲಿ ನಿನ್ನ ತಾಮಸ ಗುಣದ ಮಾಯೆಯನು ।
ಏನು ಕಾರಣ ಕಳುಹಿ ಭಾಷೆಗೆ
ಹೀನವನು ನೀ ಹಡೆದೆ ನಾವಿದ
ಕೇನ ಮಾಡಲಿ ಬೇಕು ಜೆನನನು ಗಿರಿಜೆ ಕೇಳೆಂದ ॥ ೧೮೮ ॥

ಆವ ಪರಿಯಿಂದಜೀವೆನಾದಡೆ
ದೇವ ನಿನ್ನ ನಿಜ ಸ್ವರೂಪದ
ಭಾವವನು ಪ್ರಜ್ವಲಿಸಿ ತಿಳಿವಂತೆಸಗೆ ಕೃಪೆ ಮಾಡಿ ।
ಕಾವುದೆನೆ ಪಾರ್ವತಿಗೆ ದೇವರ
ದೇವನೀಕೆಯನಿನ್ನು ಕರುಣಿಸಿ
ಪಾವನವ ಮಾಡುವೆನು ನಾನೆನುತಭವನಿಂತೆಂದ ॥ ೧೮೯ ॥

ನಿನ್ನ ನಿರ್ಮಳ ಸಾತ್ವಿಕದ ಸಂ
ಪನ್ನ ಕಳೆಯನು ಕಳುಹಿ ಧರೆಯೊಳು
ಚೆನ್ನೆಯಾಗಿರೆ ಜನಿಸಿ ನೆಜಿತಿ ನಿಷ್ಕಾಮ ಭಕ್ತಿಯಲಿ ।
ಮುನ್ನಲಿರುತಿರಲಲ್ಲಮ ಪ್ರಭು
ತನ್ನ ತಾನೇ ನಿಜವ ತೋಱುವ
ನಿನ್ನು ಸಂಶಯವಿಲ್ಲ ದಿಟವಿದು ಗಿರಿಜೆ ಕೇಳೆಂದ ॥ ೧೯೦ ॥

ಬಳಿಕ ಸಂತೋಷದಲಿ ತನ್ನಯ
ಸಲುಗೆ ಬಿನ್ನಹವೆಂಬ ಬೀಜದ
ಬೆಳೆಗೆ ಹದವಳೆ ಹಣ್ಣಿ ಹಸರಿಸಿತೆನುತ ಹರುಷದಲಿ ।
ನಲಿದು ನಗುತಲಿ ಪರಮ ಪಾವನ
ಸುಲಭ ಕರುಣಾಕಾರ ಶಿವ ನಿ
ನ್ನೊಲವಿನಿಂದಾನಿನ್ನು ಬದುಕಿದೆನೆಂದಳಾ ಗಿರಿಜೆ ॥ ೧೯೧ ॥

ಆ ನುಡಿಯ ಮಾರ್ಕೊಂಡು ಶಿವ ಶಿವ
ದೇನ ನುಡಿದಿರಿ ತಾಯೆ ನೀವೆಂ
ದೂ ಸಿಥಾನಿಸಲಚಲ ಸುಖಿಗಳು ಶಿವನ ಕರುಣದಲಿ ।
ಹಾನಿ ಯಾವುದು ಮುನ್ನ ಈಗಲಿ
ದೇನು ಬಂದುದು ತಾವು ಹೊಳ್ದ ನಿ
ಧಾನ ತಮಗಹುದೇನು ವಿಸ್ಮಯವೆಂದ ವೃಷಭೇಂದ್ರ ॥ ೧೯೨ ॥

ಹೊಳಿದರ್ಥವನಱಿಸಿ ಹಡೆವನ
ಕಾಲು ಕೊಂಡೊಯ್ವಂತೆ ನಿನ್ನಯ
ನಾಲಗೆಯೆ ತಾ ನುಡಿಸುತಿದೆ ಶುಭ ಸೂಚನಾರ್ಥವನು ।
ಹೇಳಲೇನಿನ್ನಲ್ಲಮನ ಸ
ನ್ಮೇಳದಲಿ ಸುಖಿಯಾಗು ಹೋಗಿ
ನ್ನೇಳೆನುತಲಾ ವೃಷಭ ರಾಜಂಗಭವನಿಂತೆಂದ ॥ ೧೯೩ ॥

ನೀನು ಧರೆಯಲಿ ಮೆಱೆಯದಿರ್ದಡೆ
ತಾನು ಸಿಕ್ಕುವನಲ್ಲವಲ್ಲಮ
ನೀನು ಭಕ್ತಿಯ ಮಾಡಿ ಕಾಣಿಸು ನಿನ್ನ ಕತದಿಂದ ।
ಸ್ವಾನುಭಾವ ಸುಖ ಸ್ವರೂಪ ನಿ
ಧಾನವನು ಸಾಧಿಸಲಿ ಸರ್ವರು
ಮಾನ ನಿಧಿ ಕೇಳೆನುತ ಬೆಸಸಿದನೀಶ ವೃಷಭಂಗೆ ॥ ೧೯೪ ॥

ಈತನೇ ಬಳಿಕಿನ್ನು ದಿಟವಾ
ಭೂ ತಳದೊಳಲ್ಲಮನನಱಿವ ಮ
ಹಾತಿಶಯವಹ ಭಕ್ತಿಯನು ಸೆಱೆ ಮಾಡಿ ಮೆಱೆವವನು ।
ಏತಕೀ ಭ್ರಮೆಯೆನುತ ಮುದ ಮತಿ
ಗೋತು ವೃಷಭನನಣಕವಾಡುತ
ಮಾತನಾಡಿದರಲ್ಲಿ ಕೆಲಬರು ಶಿವನ ಸಭೆಯೊಳಗೆ ॥ ೧೯೫ ॥

ಮರುಳರಿವದಿರು ವೃಷಭ ರಾಜನ
ಪರಿಯನಱಿಯದೆ ನುಡಿದರಾದಡೆ
ಧರೆಯೊಳುದಯಿಸಿ ನೋಡಲಾತನ ಭಕ್ತಿಯುನ್ನತಿಯ ।
ಹಿರಿದು ತಮ್ಮಯ ಮನದ ಮದಮ
ತ್ಸರವ ನೀಗಲಿ ಎನುತಲಾ ಶಂ
ಕರನು ಬಳಿಕವರುಗಳನಟ್ಟಿದನಂದಿಳಾ ತಳಕೆ ॥ ೧೯೬ ॥

ಇಳೆಯೊಳುಡುತಡಿಯೆಂಬ ಪಟ್ಟಣ
ದೊಳಗೆ ವೀರ ಶಿವಾಗಮಿಕ ನಿ
ರ್ಮಳನ ವಲ್ಲಭೆಯೆನಿಪ ಸುಮತಿಯ ಗರ್ಭ ಶುಕ್ತಿಯಲಿ ।
ಚೆಲುವೆಯಾದ ಕುಮಾರಿಯೆಂಬ
ಗ್ಗಳದ ಮುತ್ತುದಯಿಸಿತು ಧರಣೀ
ತಳದೊಳಗೆ ಪಾರ್ವತಿಯ ಸಾತ್ವಿಕ ಗುಣವೆ ರೂಪಾಗಿ ॥ ೧೯೭ ॥

ತೀವಿ ತನುವಿನಲತಿ ಮಹತ್ತರ
ದೇವತಾ ಕಳೆಯಿರಲು ಮಿಗೆ ಮಹ
ದೇವಿಯೆಂಬೀ ಹೆಸರನಿಟ್ಟರು ನಿಜ ಕುಮಾರಿತಿಗೆ ।
ಭಾವೆ ಬೆಳೆವುತ್ತಿರಲು ನಿರ್ಮಳ
ದೇವ ಸುಮತಿಯರೀಪ್ಸಿತಾರ್ಥವ
ನೀವುತಿಹ ಸಡೆ ನುಡಿಯಲೊಪ್ಪುವ ಕಲ್ಪ ಲತೆಯಂತೆ ॥ ೧೯೮ ॥

ಈಕೆ ಭಕ್ತಿಯ ಬಳ್ಳಿಯಂತೆ ಅ
ನೇಕ ಪರಿಯಲಿ ಬೆಳೆವುತಿರ್ದಳು
ಲೋಕದೊಳು ತಾನಲ್ಲದಿಲ್ಲೆಂಬತುಳ ಮಹಿಮೆಯಲಿ ।
ಆಕೆಯಂತಿರಲಿತ್ತಲೊಲಿದು ಪಿ
ನಾಕಿ ಕಳುಹಿದ ಮಹಿಮರೆಲ್ಲರು
ಬೇಕು ಬೇಕೆಂಬೆಡೆಗಳಲಿ ಸಂಜನಿಸ ತೊಡಗಿದರು ॥ ೧೯೯ ॥

ಶುದ್ಧ ಭಕ್ತಿಯ ಭರದ ಮೊಜಿಡಿಯು
ಮುದ್ದುವೆಯು ಜಠರಾಂಬು ನಿಧಿಯಲಿ
ಸಿದ್ಧರಾಮ ಶಶಾಂಕನೆಂಬ ಮಹಾ ಮನೋಹರನು ।
ಉದ್ಧರಿಸ ಹುಟ್ಟಿದನು ಯೋಗಸ
ಮೃದ್ಧಿಯನು ಸೊನ್ನಲ ಪುರದಲೊ
ಪ್ಪಿದ್ದನಾತನನೇಕ ವಿಭವದಲಖಿಳ ಜಗವಱಿಯೆ ॥ ೨೦೦ ॥

ದಾನ ಧರ್ಮ ಪರೋಪಕಾರ ವಿ
ಧಾನ ಗುರು ಶಿವ ಭಕ್ತಿ ಯುಕ್ತಿಯ
ಸೂನ ರೀತಿಯಲಿಂಗಳೇಶ್ವರ ಬಾಗವಾಡಿಯಲಿ ।
ಮಾನ ನಿಧಿಗಳು ಸುಕೃತಿಗಳು ಮಹಿ
ಮಾನತೆಯಲಿರುತಿರ್ಪರದನಾ
ಸೇನ ಹೇಳುವೆ ಮಾದರಸ ಮಾದಾಂಬಿಕೆಯರಿರವ ॥ ೨೦೧ ॥

ಆಕೆ ತಾನು ಪತಿವ್ರತಾ ಶೀ
ಲೈಕೆ ಮಾದರಸಾಂಕನಾದಡೆ
ಏಕ ಪತ್ನೀ ವ್ರತ ಗುಣಾನ್ವಿತನವರ ಜಠರದಲಿ ।
ಲೋಕದೊಳು ಗುರು ಶಿಷ್ಯ ಸಂಗ ನಿ
ರಾಕುಳಕೆ ಸುಜ್ಞಾನವುದಯಿಸು
ವಾಕೃತಿಯ ಸುಕುಮಾರ ಸಂಜನಿಸಿದನು ಜಗವಱಿಯೆ ॥ ೨೦೨ ॥

ಅಳನು ಮಿಡುಕನು ಮಿಸುಗಿಸನು ಕಂ
ಗಳನಿದೇನೆಂದವರು ಕಂಡು
ಮ್ಮಳಿಸಿ ಪಿತರುಗಳಱಿವು ಮಱವೆಯೊಳಿರಲು ಶಿವನೊಲಿದು ।
ತೊಳಗಿ ಬೆಳಗುತ ಬಂದು ಮಿಗೆ ಮನೆ
ಯೊಳಗೆ ಕುಳ್ಳಿತು ಶಿಶುವ ನಿಜ ಕರ
ತಳದೊಳೆತ್ತಿದನೊಲವಿನಿಂದಲಿ ಭಕ್ತ ವತ್ಸಲನು ॥ ೨೦೩ ॥

ಪರಮನಹೆ ನೀನೆಂದು ನೊಸಲಲಿ
ಬರೆವಸಂತಿರಲಿಟ್ಟು ಭೂತಿಯು
ನಿರುತ ನಿನ್ನುವಸಗಲಿ ಸಾನಿರೆನೆಂದು ಕುಱುಹಾಗಿ ।
ನೆರಹುವಂತಿರೆ ದಿವ್ಯಲಿಂಗವ
ಕೊರಳಿನಲಿ ಅವಧರಿಸಿ ಕರುಣಾ
ಕರ ಸದಾಶಿವನಾ ಮಹಾತ್ಮಗೆ ತಾನೆ ಗುರುವಾದ ॥ ೨೦೪ ॥

ಸಂಬುಗೆಯ ಕೊಡುವಂತೆ ಹಸ್ತವ
ನಿಂಬಿನಲಿ ಮಸ್ತಕದೊಳಿರಿಸುತ
ಲುಂಬ ತಾಣವಿದೆಂದು ಕಿವಿಯಲಿ ಪಚ್ಚಿ ಪೇಳ್ವಂತೆ ।
ಶಂಭು ಪಂಚಾಕ್ಷರಿಯ ನೇಮಿಸಿ
ತುಂಬಿ ತನುವಿಗೆ ಬಸವ ನೀನೆಂ
ದೆಂಬ ನಾಮವನಿಟ್ಟು ಹೋದನು ದೇವ ನಿಮಿಷದಲಿ ॥ ೨೦೫ ॥

ಆದುವಾತಗೆ ನಾಮಕರಣಗ
ಳಾದಿಯಾದ ಸಮಸ್ತ ವಿಭವ ವಿ
ನೋದವಾತಗೆ ಮಱೆದ ಮಾತನು ನೆನಸಿಕೊಟ್ಟಂತೆ ।
ವೇದಶಾಸ್ತ್ರ ಪುರಾಣವಾಗಮ
ವಾದಿಯಾಗಿಹ ಸರ್ವ ಕಳೆಗಳು
ವೇದಿಸಿದವೊಮ್ಮಂಗೆ ಕೇಳಲು ಬಸವ ರಾಜಂಗೆ ॥ ೨೦೬ ॥

ಉಪನಯನ ಲಕ್ಷ್ಯವನು ಮುಂದಾ
ವಿಪುಳ ಮತಿಗಲ್ಲಮನು ತೋಱಿಸು
ವುಪಮೆಯನು ಸೂಚಿಸುವ ಪರಿಯಲಿ ಬಸವ ರಾಜಂಗೆ ।
ಉಪನಯನವಾಯಿತ್ತು ವಿಭವದಿ
ತ್ರಿಪುರ ವೈರಿಯ ಭಕ್ತಿ ಭಾವದ
ಲಪರಿಮಿತ ಮಹಿಮೆಯನು ತೋಱಿದನಾ ಮಹಾತ್ಮಕನು॥ ೨೦೭ ॥

ಇತ್ತಲಿವರಿರುತಿರ್ದರಾಗಳೆ
ಅತ್ತ ಪರವಾದಿಗಳು ಜನಿಯಿಸಿ
ಮತ್ತೆ ಅವರೊಳಗೊಬ್ಬನತಿ ಬಳ ವೀರ ಬಿಜ್ಜಳನು ।
ಉತ್ತಮದ ಕಲ್ಯಾಣದಲಿ ನೃಪ
ವೃತ್ತಿಯಿಂದಿರುತಿರ್ದನೇಕ
ಛತ್ರದಲಿ ಭೂಮಿಯನು ಪಾಲಿಸುತಿರ್ದನೊಲವಿನಲಿ ॥ ೨೦೮ ॥

ಜನಪನಿರುತಿರಲತ್ತಲಿತ್ತಲು
ಜನನಿ ಜನಕರ ಬೀಳು ಕೊಂಡನು
ವಿನಯದಲಿ ತಮ್ಮಕ್ಕ ನಾಗಾಯಿಗಳು ಸಹವಾಗಿ ।
ಅನುಕರಿಸಿ ನಡೆ ತಂದು ತನ್ನಯ
ಮನವೊಲಿದು ಬಸವಣ್ಣ ಹೊಕ್ಕನು
ಜನಪ ಬಿಜ್ಜಳನಾಳುತಿಹ ಕಲ್ಯಾಣ ಪುರವರವ ॥ ೨೦೯ ॥

ಆ ನರೇಂದ್ರನ ಕಂಡು ಬಳಿಕಾ
ಸ್ಥಾನ ಮಧ್ಯದೊಳೊಂದು ದಿವಸ ಮ
ಹಾನು ಕಾರಣ ಲಿಖಿತ ಬಿದ್ದಿರಲದನು ತಿಳಿದೋದಿ ।
ಆ ನರೇಂದ್ರಂಗಪರಿಮಿತದ ನಿ
ಧಾನವನು ತಾ ತೆಗೆಸಿ ತೋಱಿದ
ನೇಸನೆಂಬೆನು ಬಸವ ರಾಜನ ಘನ ಮಹೋನ್ನತಿಯ ॥ ೨೧೦ ॥

ಭೂತಳಾಧೀಶ್ವರನ ಮನದೊಳ
ಗೀತ ಕಾರಣ ಪುರುಷನಹನೆಂ
ದೋತು ಹರುಷಿಸಿ ಕೊಟ್ಟನಂದು ಮಹಾ ಪ್ರಧಾನಿಕೆಯ ।
ಪ್ರೀತಿಯಿಂದ ವಿವಾಹವನು ವಿ
ಖ್ಯಾತ ಮಿಗೆ ವಿಭವದಲಿ ಮಾಡಿದ
ನೋತು ಬಿಜ್ಜಳ ರಾಯನೆಮ್ಮಯ ಬಸವ ರಾಜಂಗೆ ॥ ೨೧೧ ॥

ರೂಢಿ ಮೆಚ್ಚಲು ಹಲವು ಪರಿಯ ಪ
ವಾಡಗಳ ಮೆಱೆವುತ ನಿರಂತರ
ನೀಡುತಿರ್ದನು ನಿಷ್ಠೆಯಿಂದಲಿ ಲಿಂಗ ಜಂಗಮಕೆ ।
ಬೇಡಿದವರಿಗೆ ಬೇಡಿತನು ಕೈ
ಗೂಡಿ ಸಲೆ ದಾಸೋಹತನದಲಿ
ಮಾಡುತಿರ್ದನು ಬಸವ ದಂಡಾಧೀಶ ಭಕ್ತಿಯಲಿ ॥ ೨೧೨ ॥

ಮಲಯಜದ ಮರ ಗಾಳಿ ಸೋಂಕಿನ
ಉಳಿದ ಮರ ಪರಿಮಳಿಸುವಂತಿರೆ
ತಿಳಿಯಲೆಂದಲ್ಲಮನ ಕಾರಣ ಬಸವನುದಯಿಸಲು ।
ಇಳೆಯೊಳಾ ಮಹಿಮನ ಪದಾಂಬುಜ
ಗಳ ರಜಸ್ಸಿನ ರೇಣು ಸಂಗದ
ಬಲುಹಿನಲಿ ಶಿವ ಭಕ್ತರಾದರು ನರರು ತಮ ತಮಗೆ ॥ ೨೧೩ ॥

ಗತಿ ೭

## ಮಹದೇವಿಯಕ್ಕನ ವಿರಕ್ತಿ

ಇತ್ತಲೀ ಮಹದೇವಿ ಮಿಗೆ ಬೆಳೆ
ವುತ್ತಲಿರ್ದಳು ಜವ್ವನದ ಕಳೆ
ವೆತ್ತು ಭರದಲಿ ಪುಟವನಿಕ್ಕಿದ ಮಿಸುನಿಯಂದದಲಿ ।
ಉತ್ತಮದ ಮೈ ಲುಳಿಯು ಕಾಂತಿಯು
ಮತ್ತ ಗಜ ಗಮನದ ವಿಳಾಸದ
ತೆತ್ತವಣೆಯ ನವೀನ ರೀತಿಯ ಜಾತಿ ಭಾವದಲಿ ॥ ೨೧೪ ॥

ಇರುತಲೊಂದಾನೊಂದು ದಿನವಾ
ಪುರದರಸು ವೈಹಾಳಿಯಿಂದೆ
ಯ್ತರುತಿರಲು ಸಂಭ್ರಮವ ಕೇಳುತ ಬಂದು ಬಾಗಿಲಲಿ ।
ತರುಣಿಯೊಲಿದು ನಿರೀಕ್ಷಿಸುತ್ತಿರೆ
ಧರಣಿ ಪತಿ ಕಾಣುತ್ತ ಕಾಮಾ
ತುರದಿ ಮಿಗೆ ಕಂಗೆಟ್ಟು ಕಳವಳಿಸಿದನು ನಿಮಿಷದಲಿ ॥ ೨೧೫ ॥

ಕನ್ನೆಯಿವಳಾರವಳು ಕೇಳಿದು
ಬನ್ನಿರೋ ಎನೆ ಹರಿದು ಚರರಾ
ಕನ್ನೆಯಿಂತಪ್ಪವರ ಮಗಳೆಂದಱುಹಿದರು ಬಂದು ।
ತನ್ನ ಮನದೊಳಗೆಣಿಸುತೀಕೆಯ
ನಿನ್ನು ವರಿಸುವೆನೆಂಬ ಭರವಾ
ಸನ್ನಿಸಲು ಕೌಶಿಕ ಮಹೀ ಪತಿ ಹೊಕ್ಕನರಮನೆಯ ॥ ೨೧೬ ॥

ಎಳೆದು ತರಿಸಿದಡವಳ ಮನಸಿಗೆ
ಮುಳಿಸು ಮೇಲಪಕೀರ್ತಿ ಕೆಲಬರ
ಕಳುಹಿ ತಿಳುಹುವೆನೆನುತ ಹೆಗ್ಗಡಿತಿಯರಸಟ್ಟಿದಡೆ ।
ಬಳಿಕಲವರೆಯ್ತಂದು ಮಿಗೆ ನಿ
ರ್ಮಳನ ಸುಮತಿಯು ಕೇಳಿದಡೆ ನೃಪ
ಕುಲದವಗೆ ಕೊಡೆವೆಂದರವರಾ ನಿಜ ಕುಮಾರಿತಿಯ ॥ ೨೧೭ ॥

ಅರಸಗಿದಿರೇ ನೀವು ಸುಮ್ಮನೆ
ಸರಸದಿಂದಲಿ ಕೊಡುವುದೊಳ್ಳಿತು
ವಿರಸವಾದಡೆ ನೀವು ಮಾಡುವುದೇನು ಭೂಪತಿಯ ।
ಮರುಳುತನಗಳು ಸಾಕು ನಿಮ್ಮಯ
ತರುಣಿಯುಂಡಿಟ್ಟಿಹಳು ನಾನಾ
ಪರಿಯುಲೊಳ್ಳಿಯ ದಾಯವೆಂದರು ಸುಮತಿ ನಿರ್ಮಳಗೆ ॥ ೨೧೮ ॥

ತಾಯ ಮಾಱೆಯೆ ತೊತ್ತ ಕೊಂಬ ವಿ
ಡಾಯವನು ಸುಡು ವಿಷಮ ಕುಲದಲಿ
ಕಾಯದಾಸೆಗೆ ಕೊಳುಕೊಡೆಯ ಕಳವಳಿಸಿ ಮಾಡಿದಡೆ ।
ನಾಯಕದ ನರಕಗಳು ತಪ್ಪವು
ರಾಯ ಮಾಡುವುದೇನು ಬಳಿಕೇ
ನಾಯತವು ಸಾಕೆನುತ ನಿರ್ಮಳನವರಿಗಿಂತೆಂದ ॥ ೨೧೯ ॥

ಆಕೆಯನೆ ಕೇಳುವುದು ದಿಟ ಬಳಿ
ಕಾಕೆ ಸಣ್ಣಹ ಮಗಳೆ ಅದಱಿಂ
ದಾಕೆಯನೆ ನೆಱೆ ತಿಳಿದೊಡಂಬಡಿಸುವುದು ಬುದ್ಧಿಯಲಿ ।
ಆಕೆ ತಾನಹುದೆಂದಳಾದಡೆ
ಆಕೆಯನು ನಾವಾಗಳಿತ್ತವ
ರೇಕೆ ಬಹು ಮಾತೆನುತ ನಿರ್ಮಳ ನುಡಿದನಬಲೆಯರ ॥ ೨೨೦ ॥

ಅನುಮತಿಸಿ ನಾರಿಯರು ಬಳಿಕಾ
ವನಿತೆಯನು ಕೇಳಿದಡೆ ತನ್ನೊಳು
ನೆನೆದಳೊಂದನುಮಾನವನು ತಾನೇ ವಿವೇಕದಲಿ ।
ಜನಪನಳುಪಿಗೆ ಹಱುವ ಮಾಡುವೆ
ನೆನುತಲಾ ಮಹದೇವಿ ಜಾಣಿನ
ವಿನಯದಲಿ ನಸು ನಗುತಲಾಳಾಪಿಸಿದಳೊಳಗೊಳಗೆ ॥ ೨೨೧ ॥

ಪರಿಮಳವನಾರಿಕ್ಕಿದರು ಕ
ರ್ಪುರಕೆ ಕೋಗಿಲೆಗಾರು ಸೊಗಸಿನ
ಸ್ವರವ ಕಲಿಸಿದರಂಚೆಗಾರಡಿಯಿಡಲು ಕಲಿಸಿದರು ।
ಪರಿಕಿಸುವಡವಕಾರ್‍ ಗುಣಂಗಳ
ನೆರವ ತಂದರು ಮನದಲಂತಾ
ಪರಿಯಲಾ ಮಹದೇವಿ ತಾನೇ ನೆನೆದಳೊಂದನುವ ॥ ೨೨೨ ॥

ನಾನೆ ಬೇಕಾಗಿರ್ದಡವನಾ
ನೇನ ಹೇಳಿತ ಮಾಡಲೆನುತಾ
ಮಾನಿನಿಯರೊಳು ನುಡಿದು ಮಧುರಾಳಾಪ ವಚನದಲಿ ।
ಆ ನರೇಂದ್ರನೆ ಬಂದು ಎನ್ನ ಮ
ನೋನುರಾಗವ ಸಲಿಸುವಂತಿರೆ
ತಾನು ಶಪಥವ ಮಾಡ ಬೇಕೆಂದಳು ಮಹಾದೇವಿ ॥ ೨೨೩ ॥

ಐಸಲೇ ಎನುತದನು ಹೋಗಿ ವಿ
ಳಾಸಿನಿಯರಱುಹಿದಡೆ ಕೇಳಿ ಮ
ಹಾ ಸುಮಾನದೊಳರಸು ಬಂದನು ನಿರ್ಮಳನ ಮನೆಗೆ ।
ಕಾಸಿ ಕರಗಿದ ಲೋಹದಂತಿರೆ
ಘಾಸಿಯಾಗುತ ಮತ್ತೆ ಮನದಭಿ
ಲಾಷೆ ಹೆಚ್ಚಿತು ಮಾನಿನಿಯ ಕಾಣುತ ಮಹೀ ಪತಿಗೆ ॥ ೨೨೪ ॥

ಲಲನೆ ಕೇಳೌ ನಿನ್ನ ಬಯಕೆಯ
ಸಲಿಸುವೆನು ಮೊದಲಲ್ಲಿ ಬಳಿಕಾ
ನೊಲಿಸಿಕೊಂಬೆನು ನಿನ್ನನಿಂತಲ್ಲದೆ ದುರುಕ್ತಿಯಲಿ ।
ನೆಲದೊಡೆಯ ನಾನೆಂಬ ಗರ್ವದ
ಬಲುಹು ಗಿಲುಹನು ಮಾಡಿದಡೆ ಕೇ
ಳೆಲೆಗೆ ಎನ್ನಯ ಸತ್ಯ ಭಾಷೆಯನೆಂದನವನೀಶ ॥ ೨೨೫ ॥

ಹುಸಿಯ ನುಡಿವನ ಜೀವ ಹಿಂಸೆಯ
ದೆಸೆಗೆ ನಲಿವನ ತಾಯಿ ಮಕ್ಕಳ
ಬೆಸುಗೆಯನು ಬಿಚ್ಚಿದನ ಮಿತ್ರಂಗೆರಡ ಬಗೆದವನ ।
ಪಿಸುಣಿಗನ ಕೃಪಣನ ವೃಥಾ ಕೋ
ಪಿಸುವವನ ದುರ್ಗತಿಗಳಾಗಲಿ
ಶಶಿಮುಖಿಯೆ ನಾ ಮರಳಿ ನಿನಗಳುಪಿದಡೆ ಕೇಳೆಂದ ॥ ೨೨೬ ॥

ತನಗಿದೊಳ್ಳಿಯ ರೀತಿ ಸಮನಿಸಿ
ತೆನುತ ನಿಶ್ಚೈಸುತಲಿ ನುಡಿದಳು
ವನಿತೆ ಆದಡೆ ಎನ್ನ ಹೇಳಿತ ಕೇಳದಾಕ್ಷಣವೆ ।
ಜನಪ ನಿನ್ನನು ಬಿಟ್ಟು ನಾ ಹೋ
ಹೆನು ಯಥಾರ್ಥವಿದೆಂದು ದಿಟವನು
ವನಿತೆ ನುಡಿಯಲು ಭೂಪನಾ ಮಹದೇವಿಗಿಂತೆಂದ ॥ ೨೨೭ ॥

ಏನ ಮಾಡಲಿ ಬೇಕು ಹೇಳೆಲೆ
ಮಾನಿನಿಯೆ ಎನಲಾಕೆ ನುಡಿದಳು
ನೀನು ಸಲೆ ಶಿವಭಕ್ತನಾದಡೆ ಕೂಡುವೆನು ನಿನ್ನ ।
ನೀನು ಭವಿಯಾಗಿರ್ದಡೊಲ್ಲೆನು
ನಾನು ಹೇಳುವುದಿನಿತೆ ಎನಲು ಸು
ಮಾನ ಹೋಗಿ ದುಮಾನವಾಯಿತು ಮತ್ತೆ ಜನಪತಿಗೆ ॥ ೨೨೮ ॥

ನಮಗೆ ಶಿವ ಭಕ್ತಿಯನು ಮಾಡುವ
ಸಮಯವಳವಡದೆನಲು ನೃಪತಿಗೆ
ರಮಣಿ ನುಡಿದಳು ನಮಗೆ ನಿಮ್ಮಯ ಸಂಗವಳವಡದು ।
ನಿಮಗೆ ನಾವಿನ್ನುತ್ತರಾಯಿಗ
ಳೆಮಗೆ ಬಂಧನ ಬಿಟ್ಟುದೆನುತಾ
ಕ್ರಮದಲುಟ್ಟುಡುಗೊಱೆಯ ತೊಡಿಗೆಯನಿತ್ತಳರಸಂಗೆ ॥ ೨೯ ॥

ಮೀಸಲಳಿಯಿತು ಬಯಕೆ ಮನದಭಿ
ಲಾಷೆ ಜಾಱಿತು ಕಾಮದಾತುರ
ವೋಸರಿಸಿತೆಡೆವಱಿಯಿತಳುಪು ವಿವೇಕ ವರ್ಧಿಸಿತು ।
ಭಾಷೆ ಭರವೇಱಿತ್ತು ಕಡೆಗೆ ಮ
ಹೀಶನಾದಡೆ ಹೋಗಲೆನುತ ನಿ
ರಾಸೆಯಿಂದಲಿ ಹೋಗ ಬಿಟ್ಟನು ಬಳಿಕಲಾಕೆಯನು ॥ ೩೦ ॥

ಹಿಡಿದ ಲಿಂಗದ ವರ ವಿಭೂತಿಯ
ತೊಡಹದಂಗಡ ಮೆಯ್ಯ ಮುಸುಕಿದ
ಬಿಡು ಮುಡಿಯ ಹೊದಕೆಯ ವಿಳಾಸತೆ ರಾಹು ಚಂದ್ರಮನ ।
ಹಿಡಿದು ನೆಟ್ಟನೆ ನಿಂದು ನಿಗುರುತ
ಪೊಡವಿಯಲಿ ಬಂದಿರ್ದುದೋ ಎನೆ
ಕಡು ವಿರಕ್ತಿಯ ವೇಷ ಕಾಣಿಸಿತಿಂದು ವದನೆಯಲಿ ॥ ೩೧ ॥

ತಂದೆ ತಾಯ್ಗಳು ಸಂಟರಿಷ್ಟರು
ಬಂಧು ಬಳಗಗಳಿತರ ಜನಗಳು
ಬಂದು ನಿಂದೆಲೆ ಅಕ್ಕ ನೀನಕಟೇಕೆ ಮರುಳಾದೆ ।
ಎಂದೆನಲು ಶಿವಗರ್ಪಿಸಿದ ತನು
ವಿಂದು ಮೊದಲಾಗೆನ್ನ ಹಂಬಲ
ನಿಂದು ಕಳೆವುದು ನೀವೆನುತ ಮಹದೇವಿ ಜಾಱಿದಳು ॥ ೩೨ ॥

ಎಲ್ಲಿ ಸಜ್ಜನವೆಲ್ಲಿ ನಿರ್ಜನ
ವೆಲ್ಲಿ ಗಿಡು ಮಡುವೆಲ್ಲಿ ತರು ಗಿರಿ
ಎಲ್ಲಿ ಹೂಗೊಳನೆಲ್ಲಿ ಗಹ್ವರವೆಲ್ಲಿ ಲತೆ ಪುಳಿನ ।
ಎಲ್ಲ ಎಡೆಯಲಿ ಪಾಡುತಾಡುತ
ಮೆಲ್ಲಮೆಲ್ಲನೆ ಅಱಸುತಿರ್ದಳು
ಅಲ್ಲಮ ಪ್ರಭು ಗುರು ಗುಹೇಶ್ವರನನು ಮಹಾದೇವಿ ॥ ೨೩೩ ॥

ಗತಿ ೮

## ಗೊಗ್ಗಯ್ಯನಿಗೆ ಉಪದೇಶ

ಲಿಂಗ ನಿಜವನು ಬಯಸಿ ಭಕ್ತ ಗ
ಣಂಗಳಿರುತಿರಲಲ್ಲಮು ಪ್ರಭು
ಲಿಂಗಸಂತದನಱಿದು ತನ್ನ ಕಟಾಕ್ಷ ಕಾಂತಿಯಲಿ ।
ಹಿಂಗಿಸುವೆನೆಲ್ಲರ ಮನೋಮಯ
ದಂಗದೊಳ ಹೊಱಗಿಡಿದ ತಮದ ತ
ರಂಗಗಳನೆಂದೆನುತ ಕಾರಣ ಕಾಯದಲಿ ಸುಳಿದ ॥ ೨೩೪ ॥

ಸುಳಿದು ಸುಖದಲಿ ತನ್ನ ಲೀಲೆಯ
ಬಳಸ ಬೇಕೆಂದೊಂದು ವೇಷದ
ಹೊಳಹಿನಲಿ ಬರುತಿರಲು ಕಟ್ಟಿದಿರಿನಲಿ ಚೆಲುವಾಗಿ ।
ತಳಿತ ಕೆಂದಾವರೆಯ ನೈದಿಲು
ಗೊಳನ ನಾನಾ ಪರಿಯ ಹೂಗಿಡು
ಗಳ ಲತಾ ಮಂಟಪದ ತೋಟವ ಕಂಡನಲ್ಲಮನು ॥ ೨೩೫ ॥

ಆ ವನವ ಪಾಲಿಸುವನೊಬ್ಬನು
ಪಾವನೀ ಕೃತ ಚಿತ್ತನೀಶ್ವರ
ಭಾವ ಭಕ್ತನು ಗೊಗ್ಗಿ ದೇವನು ಕೃಷಿ ನಿಮಿತ್ತಿಳೆಯ ।
ತೀವಿಯಗುಳುತ್ತಿರ್ದಡಾ ಪ್ರ
ಸ್ತಾವದಲಿ ಕಂಡಲ್ಲಮ ಪ್ರಭು
ದೇವ ತಾನಾತನ ಸಮೀಪಕೆ ಹೋಗಿ ನಿಂದಿರ್ದ ॥ ೨೩೬ ॥

ಬಳಿಕಲಾ ತೋಟಿಗನ ಬುದ್ಧಿಗೆ
ತಿಳಿವ ತೀಡುವೆನೆನುತ ವಿಗೆ ಕಂ
ಗಳಿಗೆ ಕಟ್ಟಿದಿರಾಗುತಲಿ ಶರಣಾರ್ಥಿಯೆಂದೆಸಲು ।
ನಲಿದು ಕೇಳುತ ಕೂಡೆ ಶರಣೆಂ
ದೊಲಿದು ನೀನಾರೆನುತ ವಿಸಯಂ
ಗಳಲಿ ತದ್ವನ ಪಾಲ ಕೇಳಿದನಲ್ಲಮ ಪ್ರಭುವ ॥ ೨೩೭ ॥

ಭಾವಿಸಲು ಶಿವ ಭಕ್ತರೆಂಬವ
ರಾವ ಠಾವಿನಲಿಪ್ಪರವರ ಕೃ
ಪಾವಲೋಕನ ಭಕ್ತಿ ಭಿಕ್ಷಾಂ ದೇಹಿಗಳು ನಾವು ।
ಆವುದಱಿತೊಳಹುದಲ್ಲದಲ್ಲಮ
ದೇವನೆಂಬುದು ನಮಗೆ ಸಲೆ ಸಂ
ಭಾವಿಸಿದ ಹೆಸರಾಗಿಹುದು ಭಕ್ತಯ್ಯ ಕೇಳೆಂದ ॥ ೨೩೮ ॥

ತಿಳಿದು ನಾನಾ ಪರಿಗಳಿಂದಲಿ
ಗಳಿಸಿದರ್ಥವ ಲಿಂಗ ಜಂಗಮ
ಗಳಿಗೆ ನೀಡುತಲೊಕ್ಕು ಮಿಕ್ಕುದನುಂಡು ಸುಖಿಯಹುದು ।
ಇಳೆಯೊಳಿದು ಶಿವ ಭಕ್ತಿ ಬಱಿದೆಗೆ
ತೊಳಲಿ ಅಱಿಸಲದೇನು ಕಾರಣ
ವೆಲೆ ಮರುಳೆ ಕೇಳೆಂದನಾ ಗೊಗ್ಗಯ್ಯನಲ್ಲಮಗೆ ॥ ೨೩೯ ॥

ನಿಮ್ಮ ಹೆಸರೇನಯ್ಯ ಎಂದೆನೆ
ನಮ್ಮ ಹೆಸರೇ ಗೊಗ್ಗಯನು ಕೇ
ಳೆಮ್ಮ ಮತವಿದು ಲೌಕಿಕರು ನಾವಜೀಯೆವೇನುವನು ।
ಸುಮ್ಮನಿರ ಬೇಡೆಮಗೆ ವಿವರಿಸಿ
ನಿಮ್ಮ ಮನಸಿನ ಬುದ್ಧಿ ಯಾವುದ
ನೆಮ್ಮಿಹುದು ಹೇಳೆಂದನಾ ಗೊಗ್ಗಯ್ಯನಲ್ಲಮಗೆ ॥ ೨೪೦ ॥

ಆವ ಬೇಸಾಯವನು ಮಾಡಲು
ಜೀವ ವಧೆಗಳು ತಪ್ಪವದರಲಿ
ದೇಪನೊಲವನೆ ನೋವು ಸಿಲುವುದೆ ಸಾವು ಹಿಂಗುವುದೆ ।
ಧಾವತಿಯೆ ಕಡೆತನಕ ತಪ್ಪದು
ಭಾವಿಸುವಡದು ಭವಿಗಳಂಗವಿ
ದಾವುದಲ್ಲದ ವ್ರತವನೆಲೆ ಗೊಗ್ಗಯ್ಯ ಕೇಳೆಂದ ॥ ೨೪೧ ॥

ಇಲ್ಲಿ ಭಕ್ತಿಯ ಮಾಡುತಲಿ ಕಡೆ
ಯಲ್ಲಿ ಕೈಲಾಸವನು ಹೊಕ್ಕಡೆ
ಎಲ್ಲಿಯೂ ಬಿಡು ನೋವು ಸಾವುಗಳೆಂಬ ಸಂಕಟವು ।
ಬಲ್ಲವರ ಕೇಳೆಮ್ಮ ಸಂಬುಗೆ
ಯಿಲ್ಲದಿರ್ದಡೆ ಮರುಳೆ ನೀನೆನು
ತಲ್ಲಮನ ಗೊಗ್ಗಯ್ಯ ಬೋಧಿಸುತಿರ್ದನೀ ಮತವ ॥ ೨೪೨ ॥

ಅವಧರಿಸಿ ಕೇಳೆನ್ನ ಬುದ್ಧಿಯ
ಹವಣನಾಡಡೆ ಜೀವವಣು ಮಾ
ತ್ರವನು ನೋಯಿಸಿ ಭಕ್ತಿಯಲಿ ಕೈಲಾಸ ಪುರದೊಳಗೆ ।
ಭವಸ ಬಸಿಜರೊಳಗಿರ್ದಡೆಯು ಸಂ
ಭವಿಸುವವು ಕಡು ನೋವು ಸಾವುಗ
ಳಿವನು ಕಳಿವರ ಕಾಣೆನೈ ಗೊಗ್ಗಯ್ಯ ಕೇಳೆಂದ ॥ ೨೪೩ ॥

ಕೊಂದವಗೆ ಕೊಲೆ ತಪ್ಪದಾರೇ
ನೆಂದಡೆಯು ಹರಿಹರ ವಿರಿಂಚಿಗ
ಳಿಂದ ಬಲ್ಲಿದರಾರು ದಿಟವವರಾದಡೆಯು ತುದಿಗೆ ।
ಬಂಧನ ಪ್ರದ ಬಾಹ್ಯ ಕರ್ಮವ
ನೊಂದು ಗೂಡಿದರಾದಡವರಿಗೆ
ಸಂದ ನಿಜ ಸುಖವಿಲ್ಲಲೈ ಗೊಗ್ಗಯ್ಯ ಕೇಳೆಂದ ॥ ೨೪೪ ॥

ಸಾವಡೀ ಗುರು ಲಿಂಗ ಜಂಗಮ
ಸೇವೆ ತಾ ಮುನ್ನೇಕೆ ಹಸುವಿನ
ಬೇವಸದಲಡಿಗಡಿಗೆ ಬೇವಡೆ ಒಕ್ಕುದುಣಲೇಕೆ ।
ಈ ವಿಧಿಯಲೇನುಂಟು ನೆಱೆ ನಿ
ರ್ಭಾವದಂಗವನಱಿಯದನ್ನಕ
ಸಾವುದಾದಡೆ ಮಾಣದೈ ಗೊಗ್ಗಯ್ಯ ಕೇಳೆಂದ ॥ ೨೪೫ ॥

ಪರಿಕಿಸಲು ಗುರು ಲಿಂಗ ಜಂಗಮ
ದಿರವದಾವೆಡೆಯೆಂಬುದೀಯುಪ
ಚರಣೆಗಳುಹಿಸದದಱ ಪರಿಯೆಂತೋ ಮಹಾದೇವ ।
ಅರಿದಲಾ ಎಂದೆನುತ ನೆವದಿಂ
ದೊರೆದನಾ ಗೊಗ್ಗಯ್ಯಗಿಂತೀ
ಪರಿಯುಲಲ್ಲಮ ಲಿಂಗನೊಲಿದನ್ಯೋಪದೇಶದಲಿ ॥ ೨೪೬ ॥

ವಿ. ಪ್ರ. I. (1.) 4.
"prose (65 page.

ಮತ್ತೆ ಅಲ್ಲಮನಾದಡೊಂದು ನಿ
ಮಿತ್ತ ದೃಷ್ಟಾಂತವನು ತೋಱಿಸಿ
ಹತ್ತಿಸುವೆನೀತಂಗೆ ಹಾದಿಯನೆನುತಲತಿ ಕೃಪೆಯ ।
ಚಿತ್ತದಲಿ ಗೊಗ್ಗಯ್ಯನಗುಳುತ
ಕಿತ್ತ ಹೆಂಟೆಯ ಕೆಳಗೆ ತೋಱಿದ
ನುತ್ತಮದ ಹೊಂಗಳಶವೊಂದನು ನಿಮಿಷ ಮಾತ್ರದಲಿ ॥ ೨೪೭ ॥

ಏನಿದೇನೆಂದಿಬ್ಬರೊಲಿದನು
ಮಾನದಿಂದಗುಳಲು ಸಮಾಧಿ
ಸ್ಥಾನದಾ ದೇಗುಲವ ಕಂಡೊಳಪೊಕ್ಕು ಹರುಷದಲಿ ।
ಮೌನದಲಿ ನಿಬ್ಬೆಱಗು ಹೊಡೆದವ
ಧಾನದನಿಮಿಷದಿಷ್ಟ ಲಿಂಗ
ಧ್ಯಾನದಂಗವ ಕಂಡರಾ ಗೊಗ್ಗಯ್ಯನಲ್ಲಮನು ॥ ೨೪೮ ॥

ಇದೆ ಕಣಾ ಶಿವ ಲಿಂಗ ಭಕ್ತಿಯು
ಹೃದಯುವನು ಕಾಣಿಸುವ ಪರಿ ಭಾ
ವದಲಿ ನೆಱೆ ಸಟ್ಕಾಲಿಯುಲಿ ನಿಬ್ಬೆಱಗಿಸಂದದಲಿ ।
ಇದನು ಸಾಧಿಸದನ್ಯ ವ್ಯವಸಾ
ಯದಲಿ ಸಾವಡೆ ಕಬ್ಬಿನಿಚ್ಛೆಗೆ
ಬಿದಿರ ಮೆಲುವಂತಪ್ಪುದೈ ಗೊಗ್ಗಯ್ಯ ಕೇಳೆಂದ ॥ ೨೪೯ ॥

ಬಡವನಕ್ಷಯ ನಿಧಿ ನಿಧಾನವ
ನೆಡಹುತಲಿ ಕಂಡಂತೆ ಕೈ ಕಾಲ್
ಮುಡುಬಗಳವಟ್ಟಂತೆ ಕುರುಡಗೆ ಕಣ್ಣು ಬಂದಂತೆ ।
ಬಿಡದೆ ಅಱಸುವ ಬಳ್ಳಿ ಕಾಲನು
ತೊಡರಿತೆಂಬಂತೆನ್ನ ಬಯಕೆಯು
ಕಡೆಯ ಕಂಡೆನೆನುತ್ತಲಲ್ಲಮ ನುಡಿದನುಚಿತದಲಿ ॥ ೨೫೦ ॥

ಗುರುವೆ ಕರುಣಿಸು ಭಕ್ತಿ ಭಾವದ
ಕರುವೆ ಕರುಣಿಸು ಲಿಂಗ ನಿಷ್ಠೆಯ
ಗುರುವೆ ಕರುಣಿಸು ಕರುಣಿಸೆನುತನಿಮಿಷನ ಕೊಂಡಾಡಿ ।
ನರನು ತಾ ದಿಟವೆಂಬ ಬಳಕೆಯ
ಪರಿಯುನಂಗೀಕರಿಸಿ ಪರರಿಗೆ
ಪರಮನಲ್ಲಮ ನಟಿಸುತಿರ್ದನು ತನ್ನ ಲೀಲೆಯಲಿ ॥ ೨೫೧ ॥

ಹತ್ತೆ ಬಂದಿರೆ ಸೂಜಿಗಲ್ಲನು
ಹತ್ತಿ ಮೋಹಿಪ ಸೂಜಿಯಂತಿರೆ
ತೆತ್ತಿಸಿದುದಾ ಸಚ್ಚಿದಾನಂದ ಸ್ವರೂಪೆನಿಪ ।
ನಿತ್ಯನಲ್ಲಮನಂಶವಾದ ನಿ
ಮಿತ್ತವಾತನ ಕಾಣುತವೆ ಮೈ
ವೆತ್ತಿತೊಯ್ಯನೆ ಅನಿಮಿಷಯ್ಯನ ಕಯ್ಯ ಶಿವ ಲಿಂಗ ॥ ೨೫೨ ॥

ನೋಟವೇ ಪ್ರಾಣ ಸ್ವರೂಪಿನ
ಮಾಟವಾದ ನಿಮಿತ್ತ ಲಿಂಗದ
ಕೂಟದೊಡನಾದನಿಮಿಷಯ್ಯನ ಜೀವ ಕಳೆ ಬಂದು ।
ನಾಟಿತೀತನ ದಿವ್ಯದೇಹದ
ಕೋಟರದೊಳೇನೆಂಬೆನೈಕ್ಯದ
ಕೂಟದಲಿ ಮಮಕರಿಸಿ ಮಕರಿಸಿ ಮೆಱೆದನಲ್ಲಮನು ॥ ೨೫೩ ॥

ಈ ಕೃಪಾಳುವೆ ದೇವನಾಗಲಿ
ಬೇಕದಲ್ಲದೊಡನಿಮಿಷನ ತಾ
ಸ್ವೀಕರಿಸುವನೆ ಕೂಡ ಬಲ್ಲುದೆ ಲಿಂಗವೀತನಲಿ ।
ಬೇಕೆನುತವೆನಗೀ ರಹಸ್ಯದ
ರೇಖೆಯನು ತೋಱಸುವನೇ ಭೂ
ಲೋಕದೊಳಗಿದು ಪೊಸತೆನುತ ಗೊಗ್ಗಯ್ಯನಿಂತೆಂದ ॥ ೨೫೪ ॥

ಎಲೆ ಮಹಾತ್ಮನೆ ನಿನ್ನ ಸೂತ್ರದ
ಹೊಲಬಿದಲ್ಲದೆ ಸುಮ್ಮನೀ ಪರಿ
ಸಿಲುಕಲಱವುದೆ ನಿನ್ನೊಳೀ ಗುರು ಲಿಂಗ ಕಳೆ ಬಂದು ।
ನೆಲಸಿತದು ಕಾರಣದಲಾನದ
ತಿಳಿದೆನೀಗಳು ನೀನೆ ನಿರುಪಮ
ನಿಳಯನಹೆ ಎನುತಲ್ಲಮನ ಹೊಗಳಿದನು ಗೊಗ್ಗಯ್ಯ ॥ ೨೫೫ ॥

ದೀನ ಮನದವನಂತೆ ಕಂಡ ನಿ
ಧಾನವನು ತಾನೊಬ್ಬನುಂಬನೆ
ದಾನಿ ಲೇಸೈ ನಿನ್ನ ಪರಿ ನೀ ಕಂಡ ಶಿವ ಪಥವ ।
ಮಾನವರಿಗಱುಹೆಂಬ ಮಹದಭಿ
ಮಾನಿ ನೀನೇ ಜಗದ ಗುರುವೆಂ
ದಾ ನಿರುಪಮನನಲ್ಲಮನ ಹೊಗಳಿದನು ಗೊಗ್ಗಯ್ಯ ॥ ೨೫೬ ॥

ಬಳಿಕಲಾ ಗೊಗ್ಗಯ್ಯ ನೆಱೆ ನಿ
ಶ್ಚಲದ ನೋಟದ ಲಿಂಗ ಭಾವದ
ಬಳಕೆಯನು ಬಲಿದಿರುತಲಿರ್ದನು ನಿಜ ಸಿವಾಸದಲ ।
ಇಳೆಯ ಭಕ್ತರ ಪಾವನವ ಮಾ
ಡಲಿಕೆ ತಾನೇ ಕುಱುಹು ವಿಡಿದ
ಗ್ಗಳೆಯುತನದಲಿ ನಡೆದನಲ್ಲಮ ಲಿಂಗ ಲೀಲೆಯಲಿ ॥ ೨೫೭ ॥

ಗತಿ ೮

## ಮುಕ್ತಾಯಕ್ಕನಿಗೆ ಉಪದೇಶ

ಪೊಡವಿಯಲಿ ನೆಱೆ ಗುಪ್ತ ಭಕ್ತಿಯ
ಲಡಗಿ ಲಿಂಗೈಕ್ಯದ ಸಮಾಧಿಯ
ನೊಡರಿಸಿದನಜಗಣ್ಣನೆಂಬ ಮಹಂತನಾತಂಗೆ ।
ಒಡನೆ ಹುಟ್ಟಿದಳೊಬ್ಬಳಱಿಯದೆ
ಕಡು ಖತಿಯಲಿರುತಿರಲಿಕಲ್ಲಮ
ನಡೆದು ಬಂದನು ಮಾಣಿಸಲು ಮುಕ್ತಾಯ ಮನದಳಲ ॥ ೨೫೮ ॥

ಬರಲು ಮಿಗೆ ಕಾಣುತವೆ ಸಲೆ ಸ
ತ್ಕರಿಸಿ ವಂದಿಸಿ ತನ್ನ ಚಿಂತೆಯ
ಪರಿಹರಿಸುವಂತಪ್ಪನೊಬ್ಬ ಮಹಾತ್ಮ ನೀನೆನಗೆ ।
ದೊರಕಿದೆಯಲಾ ಎನ್ನ ಪುಣ್ಯಕೆ
ಸರಿಯದಾರೆನುತಲ್ಲಮ ಪ್ರಭು
ಬರಲು ಮುಕ್ತಾಯಿಗಳು ಪರಿಣಮಿಸಿದರು ಭಕ್ತಿಯಲಿ ॥ ೨೫೯ ॥

ತಾಯೆ ಭಕ್ತರಿಗುಂಟೆ ಚಿಂತೆಗ
ಳಾಯಸಂಗಳು ಲೋಕಲೌಕಿಕ
ದಾಯತವ ನೀ ನೆಗಳಿ ಬಱಿದೆಗೆ ಹಲವ ಹಂಬಲಿಸಿ ।
ಬಾಯ ಬಿಡಲಹುದೇ ವೃಥಾ ನಿ
ಕಾಯದಜಗಣ್ಣಂಗೆ ಮರುಳೇ
ಮಾಯೆ ಮೋಹವಿದೇತಕೌ ಮುಕ್ತಾಯಿ ಕೇಳೆಂದ ॥ ೨೬೦ ॥

ಏನ ಮಾಡುವೆನಯ್ಯ ಎನ್ನ ನಿ
ಧಾನವಪ್ಪಜಗಣ್ಣ ತಂದೆಯು
ನಾನದೆಂತಗಲುವೆನು ನನಗಿದನಿನಿತ ಸೂಚಿಸದೆ ।
ತಾನು ಹೋದಡೆ ಬಳಿಕಲೆನಗಿ
ನ್ನೇನು ಗತಿಯೆಂದೆನುತ ಕಡು ದು
ಮ್ಮಾನವೆಲ್ಲವ ನುಡಿದಳಾ ಮುಕ್ತಾಯಿಯಲ್ಲಮಗೆ ॥ ೨೬೧ ॥

ಮರುಳಲಾ ನೀನಕ್ಕ ಮುನ್ನೇ
ನಿರದಲಿರ್ದನೆ ಬಳಿಕಲೀಗಲಿ
ಶರಿರವನು ಸಡಿಲಿಸಿದನೇ ಅಜಗಣ್ಣನಾರೆಂದು ।
ಪರಿಕಿಸದೆ ಹಂಬಲಿಸಲೇತಕೆ
ಗುರು ಗುಹೇಶ್ವರ ಲಿಂಗ ಸಂಗದ
ಶರಣನಾತನು ಮಱುಗದಿರು ಮುಕ್ತಾಯಿ ಕೇಳೆಂದ ॥ ೨೬೨ ॥

ಬೆಡಗನಾಡದಿರಯ್ಯ ಕೇಳೆ
ನ್ನೊಡನೆ ಹುಟ್ಟಿದನೀಸು ದಿನವೊಂ
ದೊಡಲು ವಿಡಿದಜಗಣ್ಣನಿರ್ದನು ಗುಪ್ತ ಭಕ್ತಿಯಲಿ ।
ನಡೆದು ತೋಱಿಸುತೆಲ್ಲರಱಿಯಲು
ಕಡೆಯಲೀ ಪರಿ ಕಾಣಬಾರದ
ತೊಡಕನೊಡ್ಡಿದನೆಂದಳಾ ಮುಕ್ತಾಯಿಯಲ್ಲಮಗೆ ॥ ೨೬೩ ॥

ಕಾರಣವ ಕಾಣಿಸದ ಮನದ ವಿ
ಕಾರಿಗಳಿಗಾ ಶರಣರೊಂದು ಶ
ರೀರವನು ತೋಱಿದಡೆ ನಿನ್ನವರೆಂದು ನಂಬದಿರು ।
ಹಾರವಿಸದಿರು ತಿಳಿದು ನೋಡು ವಿ
ಚಾರಿಸುವಡಜಗಣ್ಣನೆಂಭವ
ಪಾರ ಮಹಿಮನು ನಿತ್ಯನೌ ಮುಕ್ತಾಯಿ ಕೇಳೆಂದ ॥ ೨೬೪ ॥

ಆತ ಮಹಿಮನು ನಿತ್ಯನಹನೀ
ಮಾತು ಹುಸಿಯದು ತಪ್ಪದಾದಡೆ
ಭೂತಳದೊಳಿರುತಿರದೆ ಗುಪ್ತ ಶಿವಾನುಭಾವನೆಯು ।
ರೀತಿಯಿಂದಜಗಣ್ಣನುಪಮಾ
ತೀತನಾದನು ಬಳಿಕಲೆಮ್ಮರ
ವೇತಕೆಂದೆನುತಿರ್ದಳಾ ಮುಕ್ತಾಯಿಯಲ್ಲಮಗೆ ॥ ೨೬೫ ॥

ಲೋಕಲೌಕಿಕರೊಡನೆ ಬಳಕೆಯು
ದೇಕೆ ಪರಮಾರ್ಥದಲಿ ತಾನೇ
ಕೈಕನಾದಹೆನೆಂದೆನುತಲಜಗಣ್ಣ ನಿರ್ವಯಲ ।
ಸ್ವೀಕರಿಸಿದಡೆ ನೀನು ನಿನ್ನವಿ
ವೇಕದಲಿ ಒಂದೊಂದು ನುಡಿವುದು
ಸಾಕೆನುತ ಮುಕ್ತಾಯು ಸಂತೈಸಿದನು ಪ್ರಭು ರಾಯ ॥ ೨೬೬ ॥

ದೇವ ನಿಮ್ಮವರುಗಳ ಪರಿಯನು
ನೀವೆ ಬಲ್ಲಿರಿ ಹಾವಿನಡಿಯನು
ಹಾವುಗಳು ನೆಱೆ ಬಲ್ಲುವಲ್ಲದೆ ನಮಗೆ ಗೋಚರವೆ ।
ಭಾವಿಸುವಡೆನಗಿನ್ನು ಗತಿ ಮತಿ
ಯಾವುದೆಂದೆನುತಲ್ಲಮ ಪ್ರಭು
ದೇವರಿಗೆ ಮುಕ್ತಾಯಿ ಬಿನ್ನೈಸಿದಳು ಭಕ್ತಿಯಲಿ ॥ ೨೬೭ ॥

ಅಕ್ಕ ಕೇಳೌ ನಿನ್ನ ಹೆಸರಿಗೆ
ತಕ್ಕ ಬಯಕೆಯ ನೀನು ಬಯಸಿದೆ
ಮಿಕ್ಕ ಭವ ಭಾರಿಗಳು ಬಲ್ಲರೆ ಲಿಂಗ ಮಾರ್ಗವನು ।
ಹೊಕ್ಕು ಹೋರಟೆಯೆಲ್ಲವನು ಹಾ
ಯ್ದಿಕ್ಕಿ ಸುಖಿಸುವುದಿಂತು ನಿಜ ಪದ
ದಿಕ್ಕೆ ನಿನಗಹುದೆನುತಲಾ ಮುಕ್ತಾಯಿಗಿಂತೆಂದ ॥ ೨೬೮ ॥

ಹಱಿಗಲನು ಜೋಕೈಸಿ ಕೊಳುತಲಿ
ತೊಱೆಯ ದಾಂಟುವರಂತೆ ಲಿಂಗವ
ನಱಿವವರು ಕರ್ಮೇಂದ್ರಿಯಂಗಳನೊಯ್ಯನೋಸರಿಸಿ ।
ಹೊಱಗೆ ಮಾಡುವ ಮಾಟ ಕೂಟವ
ತೊಱೆದು ಅಂತರ್ಜ್ಞಾನವೊಂದನೆ
ಹೊಱುವುದಿದು ಶಿವಭಕ್ತಿಯೌ ಮುಕ್ತಾಯಿ ಕೇಳೆಂದ ॥ ೨೯ ॥

ಕೇಳಿದೌ ಶಿಶುಗಳಿಗೆ ಮಿಗೆ ಮೊಲೆ
ಪಾಲೆ ಜೀವನವಾದಡೆಯು ಎಱೆ
ಪಾಲನೆಱೆವುತ ಮೆಲ್ಲ ಮೆಲ್ಲನೆ ಅಶನವುಣ ಕಲಿಸಿ ।
ಬಾಲಕರ ಪಟು ಮಾಡ ಬಲ್ಲ ಸ
ಕೀಲಕದವೊಲು ಹೊಱಗ ಮಱೆದು ಸಿ
ರಾಳದಲಿ ನಿಲಲಱಿವುದೌ ಮುಕ್ತಾಯಿ ಕೇಳೆಂದ ॥ ೨೦ ॥

ಮನದ ಮತ್ಸರವಳಿದು ಸಮತೆಯ
ನೆನಹು ನೆಲಸಿ ನಿಗರ್ವತನದೊಂ
ದನುಭವಣೆಯುಳವಟ್ಟುದಾ ಮುಕ್ತಾಯಿಗೊಲವಿಂದ ।
ವಿನುತ ನಿತ್ಯಾನಂದ ನಿರ್ಮಳ
ತನುವೆ ತಾನಹ ಸೌಖ್ಯತೆಯ ಸೂ
ಚನೆಯನುಪದೇಶಿಸಿದನೆಮ್ಮಯ ಗುರು ಗುಹೇಶ್ವರನು ॥ ೨೧ ॥

ಗತಿ ೧೦

## ಸಿದ್ಧರಾಮನಿಗೆ ಉಪದೇಶ

ಹಲವು ಪರಿಯಲಿ ಚಿತ್ರ ಪತ್ರದ
ಚೆಲುವನಾಗಿರೆ ಪಶು ಪತಿಯ ದೇ
ಗುಲವ ಮಾಡಿಸುತಿಪ್ಪ ಗುಡ್ಡಗಳಿಕ್ಕೆ ಹಿಂಡುಗಳು ।
ನೆಲನೆ ಬೆಸಲಾದಂತೆ ಮಿಗೆ ಮ
ಣ್ಗೆಲಸದೊಡ್ಡರು ಬಂಡಿಕಾಜರು
ಕಲುಕುಟಿಗರಿರ್ದೆಡೆಯ ಸೊನ್ನಲ ಪುರಕೆ ಪ್ರಭು ಬಂದ ॥ ೨೭೨ ॥

ನೂಲ ಸಂಕಲೆ ಗಡಿದು ಕನಕದ
ಕೋಳವನು ಕಾಲಿಂಗೆ ಕೀಲಿಪ
ಕಾಳು ಮತಿಯವನಂತೆ ಸತಿ ಸುತ ಕೂಟ ಭಯವೆಂದು ।
ಬಾಳಿಕೆಯನತಿ ಗಳೆದು ಮರಳಿಯು
ಬೋಳು ಮಂಡೆಯ ಕೀರ್ತಿಗೋಸುಗ
ಕೋಳು ಹೋದನೆ ರಾಮನೆನುತಲ್ಲಮನು ಬೆಱಗಾದ ॥ ೨೭೩ ॥

ಚಿಕ್ಕ ಸಂಸಾರವನು ಸಡಿಲಿಸಿ
ಹೊಕ್ಕನಲ್ಲಾ ಹಿರಿಯ ಸಂಸಾ
ರಕ್ಕಕಟ ವಿಖ್ಯಾತಿ ಪೂಜಾ ಲಾಭದಿಚ್ಛೆಯಲಿ ।
ಸಿಕ್ಕಿಬಿದ್ದನು ಸಿದ್ಧರಾಮನು
ಮಿಕ್ಕ ಭವ ಭಾರಿಗಳನಾದಡೆ
ನುಕ್ಕದೇ ವಿಧಿಯೆನುತಲಲ್ಲಮ ನೋಡಿ ಬೆಱಗಾದ ॥ ೨೭೪ ॥

ಒಡ್ಡ ರಾಮನಿದೇನು ಗೊಡವೆಯು
ನೊಡ್ಡಿಕೊಂಡು ವೃಥಾ ಮನಸ್ಸನು
ಗೊಡ್ಡುಮಾಡಿಯೆ ಕೆಟ್ಟನೆನುತಲ್ಲಮನು ಕೇಳಿದಡೆ ।
ಗುಡ್ಡರೆಲ್ಲರು ಗುರುವನಾವನು
ಖಡ್ಡತನದಲಿ ಜಱೆವನೆನುತವ
ರಡ್ಡಹಾಯ್ದರು ತೊಡಗಿದರು ತೋಟಿಯನು ತಮ ತಮಗೆ ॥೨೭೫॥

ಅಕಟ ನಿಮ್ಮಯ ಗುರುವಿನಾಗಮ
ಯುಕುತಿ ಪಾಷಾಣಕ್ಕೆ ಬಂದುದೆ
ವಿಕಳ ಸಿದ್ಧನ ನಂಬಿ ಪಡೆದಿರಿ ಗುಡ್ಡ ಪದವಿಯನು ।
ಸಕಲ ಕಲ್ಲನು ಕಡಿದು ಕಲ್ಲಿಗೆ
ಶಿಖರ ದೇಗುಲವೆಂದು ಮಾಡಿಸಿ
ಮಕರಿಸುವರಿವರೊಡ್ಡರಲ್ಲದೆ ಸಿದ್ಧರಲ್ಲೆಂದ ॥ ೨೭೬ ॥

ನೋಡು ನೋಡಾ ಮತ್ತೆ ಮಾಣದೆ
ನಾಡ ಮಾತನು ಕಲಿತು ಸಮ್ಮೊಡ
ನಾಡುತಿಹನೆ ದೊಠಾರತನದಲಿ ಮರುಳು ಗೊಂಡಂತೆ ।
ಬೇಡ ಬೇಡಿನ್ನೆಮ್ಮ ಗುರುವನು
ಖೋಡಿಗಳೆದಡೆ ಕೆಡುವೆ ನೀನೆನು
ತಾಡುತಿರ್ದರು ಬಱಿಯ ಬಿಂಕದ ಗುಡ್ಡರಲ್ಲಮಗೆ ॥ ೨೭೭ ॥

ಗುಡ್ಡಗಳು ನೀವಕಟ ನಮ್ಮಯ
ಖಡ್ಡತನಕಾನುವಿರೆ ನಿಮ್ಮಯ
ದೊಡ್ಡನನು ಕರೆ ತನ್ನಿ ನೋಡುವವಾತನಳಬಳವ ।
ಒಡ್ಡರಾಮನ ರೀತಿಯನುಭವ
ದೊಡ್ಡವಣಿಯನು ಕಾಬೆವೆನುತಲಿ
ಗುಡ್ಡರೆಲ್ಲರು ಕೆರಳುವಂತಿರೆ ನುಡಿದನಲ್ಲಮನು ॥ ೨೭೮ ॥

ಕೆಡಹಿಕೊಳ್ಳಿನ್ನೀತನಾಳ್ದನ
ಜಡಿದು ನುಡಿದುಕ್ಕಲಿಸಿ ಹೋಹನೆ
ಹಿಡಿದುಕೋ ಕೋಯೆನುತ ಗುಡ್ಡಗಳಿಕ್ಕಿವಿಂಡುಗಳು ।
ಬಿಡದೆ ತೆಕ್ಕೆಯೊಳಲ್ಲಮನ ಬಯು
ಲೊಡಲ ಬಂಧಿಸಲೆಂದು ಬಿಗಿಯಲು
ಹಿಡಿಹಿಗಿಲ್ಲದೊಡವರು ಬೆಱಗಾಗಿರ್ದರದ ಕಂಡು ॥ ೭೭೯ ॥

ಆಳು ನೆರೆದುದು ಲಕ್ಕ ಸಂಖ್ಯೆಗೆ
ಮೇಳವಿಸಿ ಕವಿದಿಡುತಲಲ್ಲಮ
ಹೂಳಿಹೋದನು ಕವಣೆಗಲ್ಲಲಿ ಕೈದುಗಳನೆಸಲು ।
ಹೇಳಲೇನದ ಕಲ್ಲ ರಾಸಿಯ
ಮೇಲೆ ನಿಂದನು ಮತ್ತೆ ತನ್ನಯ
ಲೀಲೆಯಲಿ ನಿರ್ಲೇಪನಿರ್ದನು ನಗುತ ಪ್ರಭು ರಾಯ ॥ ೭೮೦ ॥

ಛಾಯೆಯೊಳು ಕಾಳಗವ ಮಾಡುವ
ಮಾಯೆ ವಶರುಗಳಂತೆ ಕಡೆತನ
ಕಾಯಸವೆ ಕೈ ತಟ್ಟಿ ಹೋಯಿತು ಕದನ ಮುಖದೊಳಗೆ ।
ಕಾಯ ವಿರಹಿತನಲ್ಲಮ ಪ್ರಭು
ರಾಯನಾರೆಂದಱಿಯಲಱಿಯದೆ
ಸಾಯಸವ ಮಾಡಿದರು ಗುಡ್ಡಗಳಿಕ್ಕಿ ವಿಂಡುಗಳು ॥ ೭೮೧ ॥

ಪರಿಕಿಸಲು ಹರಿಯಾದಡಾಗಳೆ
ತಿರುಹಿ ಚಕ್ರದೊಳಿಡುವ ಮೇಣ್ ಪುರ
ಹರನು ಮುಳಿದಡೆ ಭಾಳ ನೇತ್ರದ ಕಿಡಿಯ ಕೆದಱುವನು ।
ಅರಿಗಳನು ನೋಯಿಸನು ತಾನೂ
ಕೆರಳನೆನುತಲ್ಲಮನ ಮಹಿಮೆಗೆ
ಶರಣು ಶರಣೆನುತಿರ್ದರೆಲ್ಲರು ಕೂಡೆ ನೋಟಕರು ॥ ೭೮೨ ॥

ನಮ್ಮ ಸಿದ್ಧನನೇಳಿಸಿದವಂ
ಗೊಮ್ಮೆ ಶಿಕ್ಷೆಯ ಮಾಡದನ್ನಕ
ನಮ್ಮ ಕೋಪಾಟೋಪ ನಿಲ್ಲದೆನುತ್ತ ಹರಿ ತಂದು ।
ಸುಮ್ಮನೆಯ್ತಂದೊಬ್ಬ ಜಂಗಮ
ಹೆಮ್ಮೆಗೆಡಿಸಿಯೆ ಹಳಿದು ನುಡಿದನು
ನಿಮ್ಮನೆಂದಱಿಹಿಡರು ಹಡನನು ಸಿದ್ಧರಾಮಂಗೆ ॥ ೨೮೩ ॥

ಆರು ನಮ್ಮನು ಜಱೆದವನು ಜಂ
ಭಾರಿಯೋ ದನುಜಾರಿಯೋ ಕಾ
ಮಾರಿಯೋ ತೋಱುವನ ಹೆಡ ತಲೆಗುಗಿವೆ ನಾಲಗೆಯ ।
ಬೇರು ಸಹಿತವೆ ಕೀಳುವೆನು ಕೈ
ವಾರವೇಕೆನುತೆದ್ದು ಬಂದನು
ಧೀರತನದಲಿ ಸಿದ್ಧರಾಮನು ಗಜಱಿ ಗರ್ಜಿಸುತ ॥ ೨೮೪ ॥

ಲೇಸು ಲೇಸೈ ಸಿದ್ಧರಾಮನ
ವಾಸಿ ಸಂಸಾರಿಗಳಿಗಿಂದಲಿ
ಸಾಸಿರಕೆ ಪೆಗ್ಗಳಿಸಿತಲ ಸುಡು ಸುಡು ಯತಿತ್ವವನು ।
ಈಸು ಕೋಪಾಟೋಪ ರೋಷಾ
ವೇಶವೇತಕೆ ಯೋಗಿಯಾದ ನಿ
ರಾಸೆವಂತಂಗೆನುತಲಿರ್ದನು ನಗುತ ಪ್ರಭು ರಾಯ ॥ ೨೮೫ ॥

ಸಾಕು ಸಾಕು ಮಹೇಂದ್ರ ಜಾಲವ
ನೀ ಕಲಿತು ಬಂದೆಮ್ಮ ಮುಂದಿಯ
ಕಾಕುತನದಲಿ ಕಾಡಿದಾ ಪೊಗ್ಗಿನ್ನು ನಮ್ಮೊಡನೆ ।
ನೂಕಲಱಿಯದು ನಿನಗೆನುತಲು
ದ್ರೇಕದಿಂದಲಿ ಸಿದ್ಧರಾಮನ
ನೇಕ ವಹಣಿಯಲಣಕವಾಡುತಲಿರ್ದನಲ್ಲಮನ ॥ ೨೮೬ ॥

ಭಾಪುರೇ ಮಝು ಪೂತು ನೀಸಹು
ದೀ ಪರಿಯಲಿರಬೇಕು ಮನದಾ
ಳಾಪದಂಗವಣೆಗಳು ಏಗೆ ಮಾಯಾ ಪ್ರಪಂಚಿಸಲಿ ।
ಕೋಪ ನಿಮ್ಮಯ ಸಂಪ್ರದಾಯ ಕ
ಳಾಪದಲಿ ಶಾಶ್ವತವಲಾ ನಿ
ರ್ಲೇಪಗೀ ಪರಿಯುಚಿತವೇ ರಾಮಯ್ಯ ಕೇಳೆಂದ ॥ ೨೮೭ ॥

ಕೆಣಕದಿರು ನೀ ಸಂಪ್ರದಾಯಗ
ಳೆಣಿಕೆ ನಿನಗೇಕಕಟ ಲೋಕವ
ಸಣಕವಾಡಿಯೆ ಹೋಹೆಯಲ್ಲದೆ ಯೋಗ ಮಾರ್ಗದಲಿ ।
ಸೆಣಸದಿರು ನೀನಾಚೆಯಿಾಚೆಯ
ಬಣಗರಂದದಲೆನ್ನ ಜಙಿಸಿದಡೆ
ಹಣೆಯ ಕಣ್ಣಿನ ಕಿಡಿಯ ಕೆದಱುವೆನೆಂದ ರಾಮಯ್ಯ ॥ ೨೮೮ ॥

ಚಾಗು ಚಾಗುರೆ ನೊಸಲ ಕಣ್ಣಿನ
ಬೇಗೆಯಲಿ ಮುನ್ನೆನಿತ ಕೊಂದೆಯೊ
ಯೋಗಿಯಹುದೈ ನೀನು ಹಿಂಸಾ ಧರ್ಮ ಕರ್ಮದಲಿ ।
ರಾಗದಿಂದುರಿದೇಳುತಿಹ ಭವ
ರೋಗಿ ನಿನ್ನೊಳು ಮಾತನಾಡಲಿ
ಕಾಗದೆಮಗೆನುತಿರ್ದನಲ್ಲಮ ಸಿದ್ಧರಾಮಂಗೆ ॥ ೨೮೯ ॥

ಜಡಿದು ನುಡಿವ್ರದನೀತನಾದಡೆ
ಬಿಡನೆನುತ್ತಲಿ ಸಿದ್ಧರಾಮನು
ಘುಡ ಘುಡಿಸಿ ಘೂರ್ಮಿಸುತ ಕೋಪಿಸಿ ನೊಸಲ ಕಣ್ದೆಱೆಯೆ ।
ಸಿಡಿಲು ಗಿಡಿಗಳು ಸೂಸುತಲ್ಲಮ
ನಡಿಗಳೆಡೆಯನು ಹೊದ್ದಲಮ್ಮದೆ
ಸಿಡಿದು ಸೀಕರಿಗೊಳಿಸುತಿರ್ದುವು ಸಕಲ ಜೀವರನು ॥ ೨೯೦ ॥

ಚಿತ್ತವಿಸು ಗುರುರಾಯ ನಮ್ಮಯ
ಚಿತ್ತದೊಳಗಿನ್ನೊ ವಿಚಾರಿಸ
ಲುತ್ತಮಾಧಮ ಪಕ್ಷಪಾತ ಭ್ರಮೆಗಳಿಡಿದಿಹವು ।
ಎತ್ತ ಬಲ್ಲೆವು ಸರ್ವರನು ಸಮ
ಚಿತ್ತದಲಿ ಕಾಬಜೀವ ನೀನೊಲಿ
ದಿತ್ತಡೆಮಗಿನ್ನಾದಡಾಗಲಿ ದೇವ ಕೇಳೆಂದ ॥ ೯೯ ॥

ಆಗಲದಕೇನೊಂದು ಬಾರಿಯ
ಲಾಗುವುದೆ ಸಮ ಬುದ್ಧಿ ಮೆಲ್ಲನೆ
ಲಾಗಿಸುವುದಿರುತಿರುತಲೀ ಪರಿ ಚಿತ್ತ ಶುದ್ಧಿಯಲಿ ।
ಯೋಗ ಮಾರ್ಗವನಜೀವಡಖಿಳ ವಿ
ಯೋಗಿಯಾದಡೆ ಬಳಿಕಲಾತಗೆ
ಬೇಗ ಸಮತೆ ಸಮಾಧಿಯಹುದೈ ರಾಮ ಕೇಳೆಂದ ॥ ೧೦೦ ॥

ಎನಗೆ ನಿಮ್ಮಯ ದರ್ಶನ ಸ್ಪ
ರ್ಶನವೆ ಸರ್ವ ಸಮಾಧಿಯೆನಗಾ
ಮನು ಮುನಿ ತ್ರಿದಶರುಗಳಿದಿರೇ ದೇವ ಕೇಳಿನ್ನು ।
ಮನವೊಲಿದು ನೀನಿನ್ನು ಮಲಿಕಾ
ರ್ಜುನನ ನೋಡಲು ಬಿಜಯ ಮಾಡುವು
ದೆನುತ ತನ್ನಯ ಮಠಕೆ ಕರೆದನು ರಾಮನಲ್ಲಮನ ॥ ೧೦೧ ॥

ಬಿಡು ಮರುಳೆ ಮನೆಯೇನು ಮಠವೇ
ನಡವಿಯೇನೂರೇನು ಬೇಱೆಕೊಂ
ದೆಡೆಗಳುಂಟೇ ಸರ್ವಗತನಾದಾ ಮಹಾತ್ಮಂಗೆ ।
ನುಡಿದುದೇ ಶಿವ ತತ್ವದಾಗಮ
ನಡೆದುದೇ ಶಿವ ಮಾರ್ಗ ಶರಣರ
ತೊಡಕು ತಾನೀ ಪರಿ ಕಣಾ ರಾಮಯ್ಯ ಕೇಳೆಂದ ॥ ೧೦೨ ॥

ಹಲವು ಬಿನ್ನಹಕಂಜುವೆನು ಕೋ
ಟಲೆಗೆ ನಾನಿನ್ನಾಱೆ ಕರ್ಮದ
ಕಳವಳಕೆ ಬೇಸತ್ತೆ ಖಂಡ ಜ್ಞಾನ ಮಾರ್ಗದಲಿ ।
ಹೊಲಬುಗೆಟ್ಟೆನು ನಿನ್ನ ಪಾದದ
ನೆಲೆಯ ಕಾಣದೆ ದೇವ ನೀನೇ
ಸಲಹೆನುತಲಲ್ಲಮಗೆ ಮೈಯಿಕ್ಕಿದನು ರಾಮಯ್ಯ ॥ ೩೦೩ ॥

ಮತ್ತೆ ಕರುಣಿಸಿ ಹೆಱೆನೊಸಲ ಹಿಡಿ
ದೆತ್ತಿ ಬಾರೆಂದೆನುತ ತನ್ನಯ
ಹತ್ತಿರಕೆ ಕರೆದಾತನನು ಕೈವಿಡಿದು ಕುಳ್ಳಿರಿಸಿ ।
ಹೆತ್ತ ತಂದೆಯದಾವ ಪರಿಯಲಿ
ಪುತ್ರನನು ಬೋಳೈಸುವಂತಿರೆ
ನಿತ್ಯನಲ್ಲಮ ಸಿದ್ಧರಾಮನನೊಲಿದು ಮನ್ನಿಸಿದ ॥ ೩೦೪ ॥

ಖ್ಯಾತಿ ಪೂಜಾ ಲಾಭದಾಶಾ
ಪ್ರೀತಿಯಿಂದಲಿ ದಾನ ಧರ್ಮ
ವ್ರಾತವನು ಮಾಡಿದಡೆ ಬಿತ್ತಿದ ಬೆಳೆಯನುಂಬಂತೆ ।
ಆತು ಬಂದ ಸಮಸ್ತ ಭೋಗವ
ನೋತು ಭೋಗಿಸುತಿರ್ಪರಲ್ಲದೆ
ಮಾತು ಮಾತಿಗೆ ಮುಕ್ತಿಯುಂಟೇ ರಾಮ ಕೇಳೆಂದ ॥ ೩೦೫ ॥

ತೊಱೆದು ಸತಿ ಸುತ ಮಾತೆ ಪಿತರುಗ
ಳೆಱಕವನು ಯತಿಯಾಗಿ ಸುಖದಲಿ
ಕೆಱೆಗಳಾರವೆ ಬಾವಿ ದೇಗುಲಗಳನು ರಚಿಸಿದಡೆ ।
ಅಱೆಯ ಬಾರದು ಕಂಡ ಬಳಿಕಿ
ನ್ನಱೆವ ಪರಿಯಂತಯ್ಯ ನಿಜವನು
ಬಱೆದೆ ಬಣ್ಣಿಸ ಬೇಡವೈ ಗುರು ರಾಯ ಹೇಳೆಂದ ॥ ೩೦೬ ॥

ಕಾರಣೀಕನ ಮನಸು ಮನಸೇ
ಬೇರು ಬಿಟ್ಟಿಹುದನ್ಯ ಕರ್ಮದ
ಕಾರಿಯಂಗಳಲಂತರಂಗವೆ ಹಾಳು ಬಿದ್ದಿಹುದು ।
ಆರು ಬಲ್ಲರು ಬಳಿಕ ಸುಖವನು
ಮಾರಿ ಮಂಡಿಸಿ ಅವರ ತನು ಮನ
ಹೀರಿ ಹಿಪ್ಪೆಯ ಮಾಡದಿಹಳೇ ರಾಮ ಕೇಳೆಂದ ॥ ೩೦೭ ॥

ಆದಡಿನ್ನಾ ಸಾವು ತಪ್ಪುವ
ಭೇದವಾವುದು ಮುಕ್ತಿ ಮಾರ್ಗದ
ಹಾದಿ ಯಾವುದು ನಿತ್ಯನಹ ಪರಿಯಾವುದೈ ಗುರುವೆ ।
ವಾದವೇತಕೆ ನಮಗೆ ನಿಮ್ಮಯ
ಪಾದ ಶರಣೆನಬಲ್ಲೆನಲ್ಲದೆ
ಬೋಧಿಸುವುದೆನಗೆನುತಲಿರ್ದನು ಸಿದ್ಧರಾಮಯ್ಯ ॥ ೩೦೮ ॥

ಹಸನ ಮಾಡಿಯೆ ಹರಗಿ ಹೊಲನಲಿ
ಕಸವ ಬಿತ್ತುವ ಮರುಳನಂತಿರೆ
ಮಿಸುಗುವಂತರ್ಮಾರ್ಗದೋಜೆಗೆ ಬಂದ ತನು ಮನವ ।
ಕಿಸುಕುಳದ ಬಹಿರಂಗದಿಚ್ಛೆಯ
ಬೆಸನದಲಿ ಬೇಯಿಸದೆ ನಿನ್ನಯ
ವಸವ ಮಾಡಲು ನೀನೆ ನಿತ್ಯನು ರಾಮ ಕೇಳೆಂದ ॥ ೩೦೯ ॥

ಕರಣಗಳು ಕೈಗೂಡಿದಾಗಳೆ
ಮರಣವನು ಗೆಲ ಕಲಿತು ಸಂತತ
ಶರಣ ಪದದಲಿ ನಿಂದು ಪರಮಾನಂದ ಸುಖದಿಂದ ।
ಪರಿಣಮಿಸಿ ನಿರ್ಲೇಪನಾಗಿರು
ತಿರಲು ಬಲ್ಲಡೆ ಬಳಿಕ ನೀನೇ
ಪರಮನಪ್ಪುದು ತಪ್ಪದೈ ರಾಮಯ್ಯ ಕೇಳೆಂದ ॥ ೩೧೦ ॥

ಕಾ ಗುದುರೆಗತ್ಯಂತ ಶಿಕ್ಷೆಗ
ಳಾಗ ಬೇಕಲ್ಲದೆ ವಿಚಾರಿಸ
ಲಾ ಗರುವ ಜಾತ್ಯಶ್ವಕೊಂದೇ ರಾಯ ರಾಹುತನ ।
ರಾಘೆ ವಾಘೆಯೆ ಸಾಲದೇ ಶಬು
ದಾಗಮಂಗಳ ಶಿಕ್ಷೆ ನಿನಗಿ
ನ್ನೇಗುವುವು ಸಂಸ್ಕಾರಿ ನೀನ್ನೈ ರಾಮ ಕೇಳೆಂದ ॥ ೩೧೧ ॥

ಎಂದು ಬಳಿಕೇಕಾಂತದಲಿ ಮುದ
ದಿಂದಲೊಪ್ಪುವ ಕಾಯ ಕರಣದ
ಸಂದು ಸಂಬಂಧವನು ಸೂಚಿಸಿ ಜೀವ ಪರಮರನು ।
ಒಂದು ಮಾಡುವ ಶಕ್ತಿ ಭಕ್ತಿಯ
ಹೊಂದಿಕೆಯನುಪದೇಶ ಮಾಡಿದ
ಸಂದು ಕರುಣದಲಲ್ಲಮ ಪ್ರಭು ಸಿದ್ಧರಾಮಂಗೆ ॥ ೩೧೨ ॥

ಗತಿ ೧೧

## ಬಸವರಾಜನಿಗೆ ಇಷ್ಟಲಿಂಗೋಪದೇಶ

ಬಸವ ರಾಜನ ಚಾರು ಚರಿತೆಯು
ಬಿಸಿಲಿಗಖಿಳರ ಮನದ ಭಕ್ತಿಯು
ಬಿಸರುಹಂಗಳು ವಿಕಸಿತವನೆಯ್ದಿರಲು ತಾನಜಿಂದು ।
ವಸುಮತಿಗೆ ಕಲಿ ಕಾಲದೊಳಗಿದು
ಪೊಸತಲಾ ಎಂದೆನುತ ಸಂತೋ
ಷಿಸುತಲಿರ್ದನು ಗುರು ಗುಹೇಶ್ವರ ಲಿಂಗ ಲೀಲೆಯಲಿ ॥ ೩೧೩ ॥

ಕಾಡಲೇಕಿನ್ನೆನ್ನ ಭಕ್ತರು
ಬೇಡಿದಿಷ್ಟಾರ್ಥಂಗಳನು ಕೈ
ಗೂಡಿಸುವೆನೆಂದೆನುತ ಕರುಣ ರಸಾರ್ದ್ರ ಚಿತ್ತದಲಿ ।
ಹಾಡುತಾಡುತ ಸಿದ್ಧರಾಮನ
ಕೂಡಿಕೊಳುತಲಿ ಬಸವ ರಾಜನ
ನೋಡಲಿಕೆ ಅಲ್ಲಮನು ಸೊನ್ನಲ ಪುರವ ಹೊರವಂಟ ॥ ೩೧೪ ॥

ಬರುತ ಬರುತಲಿ ತನ್ನ ಪಾದ
ಸ್ಪರುಶನಕೆ ಸಯವಾದ ಸಚರಾ
ಚರರನೆಲ್ಲರ ಪಾವನಪ ಮಾಡುತ ಮಹಾತ್ಮೆಯಲಿ ।
ಹರುಷದಿಂದವೆ ಬಂದು ಕಂಡನು
ಪರಮ ಜಂಗಮ ಲಿಂಗವಾಗಿಯೆ
ಗುರು ಗುಹೇಶ್ವರನೊಲಿದು ಕಲ್ಯಾಣವನು ಕರುಣದಲಿ ॥ ೩೧೫ ॥

ಎತ್ತ ನೋಡಿದಡತ್ತ ನಗರದ
ಸುತ್ತ ಹೊಂಜುವಳಯದಲಿ ಕಾಣಿಸಿ
ಕತ್ತಲಿಸುವ ಸಮಸ್ತ ಭೋಗಾರುಹದ ತರು ಲತೆಯು ।
ಮುತ್ತಿ ಮೋಹಿಸಿ ಎಿಗೆ ವಿಳಾಸತೆ
ವೆತ್ತು ಶುಕ ಪಿಕ ಕೇಕಿ ಕೋಕದ
ವೊತ್ತಗಳ ನಡೆ ನುಡಿಗಳುದ್ಯಾನವನು ಪ್ರಭು ಕಂಡ ॥ ೩೧೬ ॥

ಬಂದು ಮೆಲ್ಲನೆ ಬಸವರಾಜನ
ಮಂದಿರಕೆ ಚೆಲುವಾದ ಬಾಗಿಲ
ಮುಂದೆ ನಿಂದಿರಲಲ್ಲಮು ಪ್ರಭು ಸಿದ್ಧರಾಮರಸು ।
ಅಂದು ಭಾವಿಸಿ ನೋಡಿ ಇವರೇ
ನಿಂದು ಮೌಳಿಯು ಸಗುಣ ನಿರ್ಗುಣ
ದಂದವಿಗರೋ ಶಿವ ಶಿವಾ ಎನುತಿರ್ದುದಖಿಳ ಜನ ॥ ೩೧೭ ॥

ಹಡಪದಪ್ಪಣ್ಣಗಳು ಕಾಣುತ
ತಡೆದಿರದೆ ಹರಿ ತಂದು ಮಹ ಗಣ
ದೊಡನೆ ಶಿವ ಲಿಂಗಾರ್ಚನೆಯ ವಿರಚಿಸುವ ಕಾಲದಲಿ ।
ಮೃಡನ ದೃಶ್ಯಾದೃಶ್ಯ ರೂಪಗ
ಳೊಡೆಯರಿಬ್ಬರು ಬಂದರೆನುತಲಿ
ಸಡಗರದಿ ಬಿನ್ನೈಸುತಿರ್ದನು ಬಸವ ರಾಜಂಗೆ ॥ ೩೧೮ ॥

ಕರ ತಳದೊಳೆಡೆಗೊಂಡು ಪೂಜಾ
ತುರತೆಯಿಂದಿರುತೊಲಿದು ತಾನೇ
ಚರವನಂಗೀಕರಿಸಿ ಬಂದಡೆ ಲೇಸು ಲೇಸೆನುತ ।
ಕರೆಯಿರೇ ಇನ್ನೊಳಯಿಕೆನ್ನೊಡೆ
ಯರನು ತಳುವೇಕೆನುತ ಬಸವನು
ಹರುಷದಿಂದಲಿ ಹಡಪದಪ್ಪಣ್ಣಂಗೆ ನೇಮಿಸಿದ ॥ ೩೧೯ ॥

ಬಸವರಾಜನು ಭಕ್ತಿಯಿಂದಲಿ
ಬೆಸಸಿದಡೆ ಅಪ್ಪಣ್ಣನತಿ ಭರ
ವಸದಲೆಯ್ತಂದಲ್ಲಮ ಪ್ರಭು ಸಿದ್ಧರಾಮರಿಗೆ ।
ಒಸೆದು ವಿಗೆ ಶರಣಾರ್ಥಿಯೆನುತಲಿ
ಸಸಿನೆ ಸಮ್ಮುಖದಲ್ಲಿ ಕರಯುಗ
ಬಿಸರುಹಂಗಳ ಮುಗಿದು ಬಿನ್ನಹ ಮಾಡಲನುಗೆಯ್ದು ॥ ೩೨೦ ॥

ದೇವ ಕರುಣಾಕರನೆ ಬಿಜಯಂ
ಗೈವುದೊಳ ಕಡೆಗೆಂದೊಡೆಮಗೊಳ
ಗಾವ ತತ್ತ್ವವಸರವು ಸಮಗೇಕರಸು ಮನೆಗಳಲಿ ।
ಭಾವಿಸಲು ಸಂಚಾರವೆನುತಲಿ
ದೇವನಲ್ಲಮ ನುಡಿಯಲದ ಕಂ
ಡಾವರಿಸಿ ಅಪ್ಪಣ್ಣನಱುಪಿದ ಬಸವರಾಜಂಗೆ ॥ ೩೨೧ ॥

ಹರ ಹರಾ ನಾನಕಟ ಗರ್ವದ
ಗಿರಿಯನೇನಡರಿರ್ದೆನೋ ವೇಣ್
ದುರುಳತನದಲಿ ಎನ್ನ ನಡೆ ನುಡಿ ತಪ್ಪನಪ್ಪಿದವೊ ।
ಗುರುವೆ ಕರುಣಿಸಿ ಬಂದು ಬಾರದೆ
ತರಹರಿಸಲೇಕೆನುತ ಚಿಂತಾ
ಶರನಿಧಿಯಲದ್ದಿದನು ಕೇಳುತ ಬಸವ ಮನದೊಳಗೆ ॥ ೩೨೨ ॥

ತನಗೆ ತಾನೇ ಭಕ್ತರೆಲ್ಲರ
ಮನವ ನೋಡುವೆನೆಂದು ಕರುಣಿಸಿ
ಮನೆಯ ಬಾಗಿಲಿಗಾ ಮಹಾ ಘನ ಮಹಿಮನೆಯ್ತರಲು ।
ಅನುವನಱಿಯದೆ ರಾಜಸದ ಹ
ಮ್ಮಿನಲಿ ಬಳಿಯುಟ್ಟುವುದು ಬಸವಾ
ನಿನಗಿದುಚಿತವೆ ಎಂದನಾ ಮಡಿವಾಳ ಮಾಚಯ್ಯ ॥ ೩೨೩ ॥

ಕಡಲನೀಸಾಡುವಗೆ ತಾಮಸ
ವಡಸಿದಂತಾಯ್ತುಕ್ಕಟಕಟಾ
ಮಡಿವಳಯ್ಯನ ಮಾತಹುದು ತಪ್ಪೆನ್ನದೆಂದೆನುತ ।
ನಡೆದು ಶಿವ ಗಣ ಸಹಿತವಲ್ಲಮ
ನಡಿಯೊಳತಿ ಭಯ ಭಕ್ತಿಯಲಿ ತ
ನ್ನೊಡಲನೀಡಾಡಿದನು ಭರದಲಿ ಬಸವ ದಂಡೇಶ ॥ ೩೨೪ ॥

ನಾನು ಮಱವೆಯ ಮರುಳು ಸಂತತ
ನೀನೆ ಅಱಿವಿನ ತಿರುಳು ತಿಳಿವಡೆ
ನಾನು ರಂಜಕನಖಿಳರಜಿಯಲು ನೀ ನಿರಂಜನನು ।
ನಾನು ಭಾವಿಸೆ ಪಶು ವಿಚಾರಿಸೆ
ನೀನು ಪಶು ಪತಿ ಎನ್ನ ತಪ್ಪನು
ನೀನೆ ತಿದ್ದುವುದೆನುತ ವ್ಯೆಯಿಕ್ಕಿದನು ಬಸವೇಶ ॥ ೩೨೫ ॥

ಭ್ರಮಿಸಿದೆನು ನಾನೆನ್ನ ಮದದಲಿ
ಕ್ಷಮಿಸುವುದು ನೀ ನಿನ್ನ ಗುಣದಲಿ
ರಮಣರಾದವರೆನ್ನ ಕೊಱತೆಯ ನೋಡ ಬೇಡೆನುತ ।
ವಿಮಲ ಮತಿ ಭಯ ಭಕ್ತಿ ಸಹಿತ
ಲ್ಲಮನ ಪಾದ ಪಯೋಜದಲಿ ನೆಱೆ
ನಮಿಸುತಿರ್ದನು ಬಸವ ದಂಡಾಧೀಶನಡಿಗಡಿಗೆ ॥ ೩೨೬ ॥

ಶಿಶುಗಳಲಿ ಗುಣದೋಷವನು ಭಾ
ವಿಸುವರೇ ಕರುಣದಲಿ ಮಿಗೆ ರ
ಕ್ಷಿಸುವ ಮೋಹದ ತಾಯಿ ತಂದೆಗಳಾ ಪ್ರಕಾರದಲಿ ।
ಬಸವ ರಾಜಗೆ ಮಾತೆ ಪಿತ ನೀ
ನೊಸೆದು ಕರುಣಿಸ ಬೇಕೆನುತ ವಂ
ದಿಸುತಲಿರ್ದನು ಚೆನ್ನ ಬಸವನು ಅಲ್ಲಮ ಪ್ರಭುಗೆ ॥ ೩೨೭ ॥

ಅರಿಗಳಿದಿರಲಿ ತಪ್ಪಿದಡೆ ಸಂ
ಗರದೊಳೂಣೆಯವಪ್ಪುದಲ್ಲದೆ
ಗರುಡಿಯಲಿ ಕೈ ಮುಱಿದಡಾವುದು ಕೊಱತೆಯುದಱಿಂದ ।
ಗುರುವೆ ಬಾಲಾಭ್ಯಾಸ ಭಕ್ತಿಯ
ಪರಿಚರಿಯದೂಣೆಯುವ ನೋಡದೆ
ಕರುಣಿಸೆನುತಲ್ಲಮಗೆ ಬಿನ್ನೈಸಿದನು ಮಾಚಯ್ಯ ॥ ೩೨೮ ॥

ನೋಡಿದೈ ರಾಮಯ್ಯ ಭಕ್ತರು
ಮಾಡುವುದು ತಾನೊಂದು ಮಿಗೆ ಮಾ
ತಾಡುವುದು ಬೇಱೊಂದು ಜಂಗಮವೊಲಿದು ನಡೆತರಲು ।
ಪಾಡನೇ ಪರುಠವಿಸಿ ಸುಡಿವ ಸ
ಘಾಡಿಕೆಯನೊಡ್ಡೈಸಿ ತಮ್ಮಯ
ಖೋಡಿಗಳ ತಾವಱಿಯರೆಂದನು ನಗುತ ಪ್ರಭು ರಾಯ ॥ ೩೨೯ ॥

ಸಲಹ ಬೇಕೆಂದಖಿಳ ಭಕ್ತರಿ
ಗೊಲಿದು ನೀನೇ ಲೀಲೆಯಿಂದಲಿ
ಸುಲಭನಾಗಿಯೆ ಸುಳಿದ ಬಳಿಕಿನ್ನವರ ಗತಿ ಮತಿಯು ।
ಹಳಿವನೆಣಿಸುವುದೇನು ಕಾರಣ
ವೆಲೆ ಮಹಾತ್ಮನೆ ಕರುಣಿಸೆನುತಲಿ
ಸಲುಗೆಯಲಿ ಬಿನ್ನೈಸುತಿರ್ದನು ಸಿದ್ಧರಾಮಯ್ಯ ॥ ೩೩೦ ॥

ಮುನ್ನ ನಿರುಪಾಧಿಯಲಿ ಕರುಣಿಸಿ
ನಿನ್ನ ಲೀಲೆಯಲೊಲಿದು ನೀ ಬಂ
ದಿನ್ನುಪಾಧಿಯನಱಿಸುವುದು ಮರಿಯಾದೆಯಲ್ಲೆನುತ ।
ಚೆನ್ನಬಸವನು ಹಿರಿಯು ಬಸವನು
ಮನ್ನಣೆಯ ಶಿವ ಭಕ್ತರೆಲ್ಲರು
ಬಿನ್ನಹವ ಮಾಡಿದರು ಮಹಿಮರು ಮತ್ತೆ ತಮ ತಮಗೆ ॥ ೩೩೧ ॥

ನಡವಳಿಗಳೇನಾದಡಾಗಲಿ
ಸುಡಿವಳಿಯಲತಿ ಜಾಣರಾದಿರಿ
ಪೊಡವಿಯಲಿ ನೀವಹುದು ಮಝು ಭಾಪೆನುತ ನಸು ನಗುತ ।
ನಡೆಯಿರೈ ಶಿವ ಲಿಂಗ ಭಕ್ತಿಯ
ಬೆಡಗನೇಕಾಂತದಲಿ ನಿಮಗೊಡ
ಬಡಿಸಿ ಹೇಳುವೆನೆನುತ ಬಂದನು ಬಳಿಕ ಪ್ರಭು ರಾಯ ॥ ೩೩೨ ॥

ಬರುತ ಕಂಡನು ಪರಮ ಪಾವನ
ತರದ ಪಾಪ ಕ್ಷಯದ ಭವ ಭೀ
ಕರವನಳಿವ ಮಹಾ ಪ್ರಸಾದದ ಕುಂಡ ತೀರದಲಿ ।
ಇರುಳು ಹಗಲೆಡೆವಿಡದೆ ಸೇವಿಪ
ಮರುಳ ಶಂಕರ ದೇವರನು ನಿಜ
ಕರುಣದಲಿ ಬಸವಣ್ಣನರಮನೆಯೊಳಗೆ ಪ್ರಭು ರಾಯ ॥ ೩೩೩ ॥

ಶಿಲೆಯ ಮಱೆಯಲಿ ಹೊನ್ನು ನೆಟ್ಟನೆ
ತಿಲದ ಮಱೆಯಲಿ ತೈಲ ಭಾವಿಸೆ
ನೆಲನ ಮಱೆಯ ನಿಧಾನವಿಹವೊಲು ಮರುಳ ವೇಷದಲಿ ।
ಬಳಿಯೊಳಿರೆ ಸಾಕಾರ ಶಂಕರ
ನೆಲಸಿ ತನ್ನಂಗಳದಲಾತನ
ಹೊಲಬನಱಿಯನು ಬಸವನೆನುತಲ್ಲಮನು ಬೆಱಗಾದ ॥ ೩೩೪ ॥

ಪ್ರೇಮದಿಂದಲಿ ಮರುಳ ಶಂಕರ
ನಾಮದಲಿ ಶಂಕರನೆ ಬಂದಿರೆ
ಭೂಮಿಜರು ತಾವಱಿಯರಾಡಂಬರದ ಭಕ್ತಿಯಲಿ ।
ತಾಮಸವ ತರ್ಕೈಸಿ ಸಾತ್ವಿಕ
ಸೀಮೆಯನು ತಾವಱಿಯಲಱಿಯರು
ರಾಮ ನೋಡೆನುತಲ್ಲಮ ಪ್ರಭು ರಾಯನಿಂತೆಂದ ॥ ೩೩೫ ॥

ಮರುಳ ಶಂಕರನೆಂಬಸಜೀವಿನ
ತಿರುಳು ಲಿಂಗಾಗಮದ ಹೊಳಹಿನ
ಹುರುಳು ನಿರ್ಮಳ ಧರ್ಮ ಮರ್ಮದ ಚಾರು ಚಾರಿತ್ರ ।
ನಿರುತ ಶಾಂತಿಯ ಚಿತ್ತ ವೃತ್ತಿಯ
ಪರಮ ಪಾವನ ಮೂರ್ತಿಯಾತನ
ಪರಿಗಳನುಪಮತರ ಕಣಾ ರಾಮಯ್ಯ ಕೇಳೆಂದ ॥ ೩೩೬ ॥

ಇಂದ್ರಿಯವನತಿಗಳೆದನಳುಪಿನ
ದಂದುಗವ ಧಿಕ್ಕರಿಸಿದನು ಭವ
ಬಂಧನದ ಬೇರಿಂಗೆ ಕಿಚ್ಚಿಕ್ಕಿದನಲಾ ಎನುತ ।
ಅಂದು ಬಳಿಕಾ ಮರುಳ ಶಂಕರ
ತಂದೆಯನು ಕರುಣದಲಿ ಪರಮಾ
ನಂದದಿಂ ನೋಡಿದನು ನಮ್ಮಯ ಗುರು ಗುಹೇಶ್ವರನು ॥ ೩೩೭ ॥

ಆಡಿ ಕೆಲರಿಗೆ ಕರುಣದಲಿ ಮಾ
ತಾಡಿ ಕೆಲರಿಗೆ ನುಡಿಸಿ ಕೆಲರಿಗೆ
ನೋಡಿ ಕೆಲರಿಗೆ ಜಱಿದು ಕೆಲರಿಗೆ ಜಡಿದು ಕೆಲಬರಿಗೆ ।
ಹಾಡಿ ಕೆಲರಿಗೆ ಹರಸಿ ಕೆಲರಿಗೆ
ಕೂಡ ಬಲ್ಲನು ನಿತ್ಯ ಸುಖವನು
ರೂಢಿಯೊಳು ಘನ ಮಹಿಮನೆಮ್ಮಯ ಗುರು ಗುಹೇಶ್ವರನು॥೩೩೮॥

ಮರುಳ ಶಂಕರಗೈಕ್ಯ ಪದವಿಯ
ಪರುಠವಿಸಿ ಕೊಟ್ಟೊಲವಿನಿಂದಲಿ
ಪರಿಮಿತಾಲಯಕೆಯ್ದಿ ಪರಮಾನಂದ ಮಹಿಮೆಯಲಿ ।
ಕರುಣ ಮಿಗೆ ನಡೆ ತಂದು ಬಸವೇ
ಶ್ವರನು ಮಾಡುವ ಭಕ್ತಿ ಯುಕ್ತಾ
ದರಣೆಯನು ಕೈಕೊಳುತಲಿರ್ದನು ಗುರು ಗುಹೇಶ್ವರನು ॥ ೩೩೯ ॥

ಮಣಿ ಖಚಿತ ಮಂಗಳದ ಪರುಷದ
ಕಣಿಯ ಪೀಠದ ಮೇಲೆ ನೆಱೆ ನಿ
ರ್ಗುಣದ ಸಗುಣದ ನಿರ್ಮಳದ ನಿರ್ವಾಣ ಗುರುವಿರಲು ।
ಎಣಿಸ ಬಾರದ ಬಹಳ ಭಕ್ತಿಯ
ಗಣಸೆಯಲಿ ಕೈಮುಗಿದು ಮೌಳಿಯ
ಮಣಿದು ಮಹಿಮಗೆ ಬಸವ ಬಿನ್ನಹ ಮಾಡಲನುಗೆಯ್ದ ॥ ೩೪೦ ॥

ಕುರುಡ ಕನ್ನಡಿ ವಿಡಿದ ಮಾಟದ
ಪರಿಯಲಿದೆ ಶಿವ ಭಕ್ತಿಯೆಂಬುದು
ಮರುಳು ಕಂಡಾ ಕನಸಿನಂತಿರೆ ಮಾತಿಗರಿದಾಯ್ತು ।
ಗುರುವೆ ನಾವಿದನಱಿವವೊಲು ವಿ
ಸ್ತರಿಸಿ ಪೇಳೆಂದೆನುತಲಾ ವರ
ಗುರು ಗುಹೇಶಗೆ ಬಿನ್ನವಿಸಿದನು ಬಸವ ದಂಡೇಶ ॥ ೩೪೧ ॥

ಚಾಗು ಭಲರೇ ನೀನಹುದು ನಿಗ
ಮಾಗಮಂಗಳ ತತ್ವ ಸಾರವ
ನಾಗು ಮಾಡಲಿ ಬಂದ ಕಾರಣ ಪುರುಷ ನೀನೆನುತ ।
ಆಗಳಾ ಪ್ರಶ್ನೆಗೆ ಮನೋಮುದ
ವಾಗಿ ಮೆಚ್ಚುತಲಲ್ಲಮ ಪ್ರಭು
ವಾ ಗುಣಾರ್ಣವ ಬಸವ ದಂಡಾಧೀಶಗಿಂತೆಂದ ॥ ೩೪೨ ॥

ಭಾವಿಸಲು ಭಾಸ್ಕರನ ಬಟ್ಟೆಗೆ
ದೀವಿಗೆಯ ಹಂಗೇಕೆ ತಿಳಿವಡೆ
ಪಾವಕನ ಪಸುವಿಂಗೆ ಪಚನಾರಂಭ ವಿಧಿಯೇಕೆ ।
ಆ ವಿಚಾರಗಳಂತೆ ನಿನಗಿ
ನ್ನಾವ ಬೋಧೆಗಳ ಪ್ರಯೋಜನ
ದೈವ ಪುರುಷನು ನೀ ಕಣಾ ಬಸವಣ್ಣ ಕೇಳೆಂದ ॥ ೩೪೩ ॥

ಹರ ಹರಾ ನಾನಾರು ನಿಮ್ಮಯ
ಚರಣ ಶರಣರ ಶರಣರೊಳು ಕಿಂ
ಕರರ ಕಿಂಕರ ನಾನಲ್ಲೈ ನನಗಿಲ್ಲಿ ಪರಿಯಂತ ।
ಗುರುವೆ ಭರ ಭಾರವನು ಹೊಱಿಸಲು
ಕರುಣವಿಲ್ಲಾ ನಿನಗೆ ಎನುತಲಿ
ನಿರುತ ನಿರಹಂಕಾರ ನಿಧಿ ಬಸವಣ್ಣನಿಂತೆಂದ ॥ ೩೪೪ ॥

ಬಿತ್ತಿ ಬೆಳೆಯದ ಮುನ್ನ ಮೊಳಕೆಯ
ಕಿತ್ತು ನೋಡುವರೇ ವೃಥಾ ನಾ
ನೆತ್ತಲೀ ಸ್ತುತಿಯೆತ್ತ ಹರ ಹರ ಗುರುವೆ ನೀ ಬಲ್ಲೆ ।
ಚಿತ್ತವಿಸು ಮನ್ಮನದ ಮಧ್ಯದ
ಕತ್ತಲೆಯ ಕಳೆದಱಿವಿನರ್ಕನ
ತೆತ್ತಿಸೆನ್ನೊಳಗೆಸುತಲಿರ್ದನು ಬಸವ ದಂಡೇಶ ॥ ೩೪೫ ॥

ಸುಧೆಯ ನಿರುಪಮ ರುಚಿಗೆ ಬೇಱಿತೊಂ
ದಿದಿರು ಸವಿಗಲಸುವರೆ ಆದಡೆ
ಹದನ ನೀ ಕೇಳಿದಡೆ ನಾವದನಲ್ಲವೆನಲೇಕೆ ।
ವಿದಿತ ನಿರಹಂಕಾರ ನಿನಗ
ಲ್ಲದೆ ಬಳಿಕ್ಕಿನ್ನಾರಿಗೈ ಲಿಂ
ಗದ ಮಹಾನುಭವೈಕ್ಯ ಸುಖ ಬಸವಣ್ಣ ಕೇಳೆಂದ ॥ ೩೪೬ ॥

ಮನುಜ ದೇಹಗಳಾದಡೆಯು ತನು
ಮನಗಳಲಿ ಪಟುವಾಗಿ ದುರ್ವಾ
ಸನೆಯ ಬುದ್ಧಿಗೆ ನಿಲುಕದಿಹುದಱಿದಾ ಶರೀರದಲಿ ।
ಅನಿತಱೊಳಗೆಚ್ಚತ್ತು ಜನ್ಮದ
ಜಿನುಗಿಗಾನಿನ್ನಾಱೆನೆಂಬಾ
ಮನುಜನೇ ಕೃತ ಕೃತ್ಯನಹನೈ ಬಸವ ಕೇಳೆಂದ ॥ ೩೪೭ ॥

ಹಾಲು ಹಯಸುಳ್ಳಲ್ಲಿ ಹೇಳದೆ
ಕೇಳದೇ ಹಬ್ಬವನು ಸವಿವುದು
ಗಾಳಿ ಬೀಸುವ ದಿನದಲೇ ತೂಱುವುದು ಹೊಟ್ಟುಗಳ ।
ಕಾಲು ಕೈ ಕಣ್ಣುಗಳು ತನುವಿಹ
ಕಾಲದಲಿ ಕಾಲನ ನಿವಾರಿಸಿ
ಮೇಲು ಗತಿಯಱಿಸುವನೆ ಜಾಣನು ಬಸವ ಕೇಳೆಂದ ॥ ೩೪೮ ॥

ಅದು ನಿಮಿತ್ತದಲಾಗಮಂಗಳ
ಹೃದಯದಲಿ ಹುರುಳಱಿದು ಸನ್ಮಾ
ರ್ಗದಲಿ ಬುದ್ಧಿಯನಿಕ್ಕಿ ಗುರು ಕಾರುಣ್ಯವನು ಪಡೆದು ।
ಮೊದಲು ತನು ಮನ ಧನದ ಮೇಲಣ
ಮದ ವಿಮೋಹಾದಿಗಳನೆಲ್ಲವ
ಕೆದಱಿ ಕೆಡಿಸುವನವನೆ ಜಾಣನು ಬಸವ ಕೇಳೆಂದ ॥ ೩೪೯ ॥

ಪ್ರಾಣವಿದು ನೋಡೆಂದು ಪ್ರತಿ ಗುರು
ವಾಣತಿಯನಿದಿರಿಡಲು ಕಣ್ಣಿಗೆ
ಕಾಣಿಸುವ ತನ್ನಿಷ್ಟ ಲಿಂಗವನತಿ ಸಮೇಳದಲಿ ।
ಮಾಣದಾಗಳು ಹಿಡಿದು ಹಿಂಗದೆ
ಕೇಣವಿಲ್ಲದೆ ಸಂದ ನಿಷ್ಠೆಯ
ಜಾಣನೇ ಶಿವ ಭಕ್ತನಹನೈ ಬಸವ ಕೇಳೆಂದ ॥ ೩೫೦ ॥

ಶಿ.ಪ್ರ. 22. 81,
ಸಾ.ತಂ. 77.
ಷ.ಶೈ. 52. 54
ಗು.ಶ 212

ಇಷ್ಟ ಗುರುವಿಗೆ ತನುವ ಸಲಿಸುತ
ಲಿಷ್ಟ ಲಿಂಗಕೆ ಮನವ ಸಲಿಸುತ
ಲಿಷ್ಟ ಜಂಗಮಕರ್ಥವನು ಸಲೆ ಸಲಿಸ ಕಲಿತಂಗೆ ।
ದೃಷ್ಟವಹ ಗುರು ಲಿಂಗ ಜಂಗಮ
ಶ್ರೇಷ್ಠವಾಗಿಯೆ ತನ್ನೊಳಗೆ ಉ
ತ್ಕೃಷ್ಟವೆನಿಸಿಯೆ ಕಾಣಿಸುವುದೈ ಬಸವ ಕೇಳೆಂದ ॥ ೩೫೧ ॥

ದಿಟ ವಿಚಾರಿಸಲಿಷ್ಟ ಲಿಂಗದ
ಘಟಣೆಯೆಂಬುದು ಸರ್ವ ಸಂಗವ
ನಟವುಟಿಸಬೇಕಾಗಿ ಅಂತರ್ಮಾರ್ಗದೋವರಿಗೆ ।
ಪಟುವೆನಲು ಪತಿಯಾಗಿ ಮಾಯೆಯ
ನಟನೆಯನು ನೈವಾರಿಸುವ ಸಂ
ಘಟಕೆ ಸಾಧನವೆನಿಸುವುದು ಬಸವಣ್ಣ ಕೇಳೆಂದ ॥ ೩೫೨ ॥

ಅದು ನಿಮಿತ್ತದಲಿಷ್ಟ ಲಿಂಗವೆ
ಮೊದಲು ಬೇಹುದು ನಿತ್ಯ ನಿರ್ಮಳ
ಪದವ ಪಡೆದಹೆನೆಂಬ ಪಾವನ ಬುದ್ಧಿವಂತಂಗೆ ।
ಹೃದಯದೊಳಗಾ ಪ್ರಾಣ ಲಿಂಗದ
ಹದನನರಿವಡೆ ಸಚ್ಚಿದಾನಂ
ದದಲಿ ನಿಲುವಡೆ ಮುಖ್ಯವಿದು ಬಸವಣ್ಣ ಕೇಳೆಂದ ॥ ೩೫೩ ॥

ಗುರುವೆ ನೀವೀ ಪೇಳ್ದ ಮಾರ್ಗಾ
ಚರಣೆಯನು ಕೇಳಿದಡೆ ಸಾಲದೆ
ಪರಿವಿಡಿಯಲಿದನೆಲ್ಲ ಮುಟ್ಟಲಿ ಮಾಡುತಿರಬೇಕು ।
ಪರಿಕಿಸಲು ಸಾವಲ್ಲಿ ಪರಿಯುಂ
ತರವು ಸಾಧನೆ ಮಾಡಿ ಸಮರಕೆ
ಗರುವಸಹ ದಿಸವಿನ್ನದಾವುದು ದೇವ ಹೇಳೆಂದ ॥ ೩೫೪ ॥

ಈಸುವನುವನು ಕೇಳಿದಡೆ ಮೇ
ಣೀಸು ದಿನ ತಾ ಕಂಡಡೇನ
ಭ್ಯಾಸಿಯಾಗದೆ ಯಾರು ತೇಲುವ ತೆಱನ ತಿಳಿವವರು ।
ಘಾಸಿಯಾಗದೆ ತನು ಮನದ ಮೇ
ಲಾಸೆ ಹಿಂಗದೆ ಭಕ್ತಿ ಮಾಡದೆ
ಹೂಸಿ ಹುಂಡಸಲೇನು ಫಲವೈ ಬಸವ ಕೇಳೆಂದ ॥ ೩೫೫ ॥



ಹೊನ್ನಿನೊಳಗೊಂದೊರೆಯು ವಸ್ತ್ರದ
ಮನ್ನಣೆಯಲೊಂದೆಳೆಯು ಸಥವಾ
ಧಾನ್ಯದೊಳಗಣು ಮಾತ್ರವೆನಗೆನ್ನವರಿಗಿರಲೆಂದು ।
ದೈನ್ಯತೆಯಲಾ ಜಂಗಮುವನತಿ .
ಮನ್ನಿಸದೆ ಮಲೆತಿರ್ದನಾದಡೆ
ನಿನ್ನ ಪಾದಕೆ ದೂರ ನಾನಹೆ ದೇವ ಕೇಳೆಂದ ॥ ೩೫೬ ॥

ಕನಕ ಗಿರಿ ರಜತಾದ್ರಿ ಹಾಲಿನ
ವನಧಿ ಸುರ ಕುಜ ಕಾಮು ಧೇನುಗ
ಳಿನಿತು ನಿರುಪಮದಷ್ಟ ಮಹದೈಶ್ವರ್ಯ ಮೊದಲಾದ ।
ವಿಸುತ ವಸ್ತುಗಳೆಲ್ಲವಾ ಲಿಂ
ಗನವು ಪ್ರಮುಥರವಕಟ ಮರುಳೇ
ನಿನಗದೆಲ್ಲಿಯುವೇನನಿತ್ತೈ ಬಸವ ಕೇಳೆಂದ ॥ ೩೫೭ ॥

ದೇವ ನಾನಾ ಪರಿಗಳಲಿ ಮೇ
ಣಾವ ಮುಖದಲಿ ಬಂದು ಬೇಡಿದ
ಡೀವೆ ನೀ ದಣಿವಂತಿರೆನ್ನಯ ಧನವ ತನು ಮನವ ।
ಈ ವಿಚಾರಕೆ ಹುಸಿದೆನಾದಡೆ
ಭಾವಿಸಲು ಬಳಿಕಾನೆ ನಿನ್ನಯ
ಸೇವೆಗತಿ ದೂರಸ್ಥನೈ ಗುರು ರಾಯ ಕೇಳೆಂದ ॥ ೩೫೮ ॥

ತನುವ ಕೊಟ್ಟೆನು ಮನವ ಕೊಟ್ಟೆನು
ಧನವ ಕೊಟ್ಟೆನು ಕೊಟ್ಟೆನೆಂಬೀ
ಬಿನುಗು ಬಿಂಕವನಾಡಲಾ ತನು ಮನ ಧನಂಗಳನು ।
ತನಗೆ ಕೊಟ್ಟವರಾರು ತಾನಾ
ರಿನಿತನಱಿಯದೆ ಬಱಿದೆ ನುಡಿವುದು
ನಿನಗಿದುಚಿತವೆ ಬಸವ ದಂಡಾಧೀಶ ಕೇಳೆಂದ ॥ ೩೫೯ ॥

ಅಂತು ಕಾರಣವಧಮ ಹಮ್ಮಿನ
ಭ್ರಾಂತಿಯನು ಬಱಿದೆನಿಸಿ ತಾನೋ
ರಂತೆ ನಿಜನಿರ್ಲೇಪ ಭಕ್ತಿಯನಱಿಯ ಬೇಕಾಗಿ ।
ಮುಂತೆ ಕಾಣಿಸುವಿಷ್ಟ ಲಿಂಗದ
ಚಿಂತೆಯಲಿ ಚಿರನಾಗಿ ತನ್ನಯ
ಚಿಂತಿತಾರ್ಥವ ಹಡೆಯ ಬೇಹುದು ಬಸವ ಕೇಳೆಂದ ॥ ೩೬೦ ॥

ಕೇಳಿದೈ ಬಸವಣ್ಣ ಮೊದಲಲಿ
ಕೋಲು ವಿಡಿದಭ್ಯಾಸ ಮಾಡಿಯೆ
ಮೇಲೆ ರಣರಂಗದಲಿ ಕೈದುವ ಹಿಡಿದು ಹಗೆಗಳನು ।
ಸೋಲಿಸುವನಂತಿಷ್ಟ ಲಿಂಗದ
ಕೀಲಣೆಯನಱಿದಲ್ಲದಾಗದು
ಹೇಳುವಡೆ ಶಿವಭಕ್ತಿಯದು ಸಾಮಾನ್ಯವಲ್ಲೆಂದ ॥ ೩೬೧ ॥

ಈ ತೆಱದಲೊಲಿದಿಷ್ಟ ಲಿಂಗದ
ಪ್ರೀತಿ ಮಾರ್ಗಾಚಾರವನು ವಿ
ಖ್ಯಾತಿಯುತ ಬಸವಣ್ಣ ಮೊದಲಾದಖಿಳ ಭಕ್ತರಿಗೆ ।
ಓತು ನಿಯಮಿಸಿ ನಿರ್ವಿಕಾರದ
ನೀತಿ ನಿಶ್ಚಯ ಭಕ್ತಿ ಮಾರ್ಗದ
ರೀತಿ ದಾಯಕನೊಪ್ಪುತಿರ್ದನು ಗುರು ಗುಹೇಶ್ವರನು ॥ ೩೬೨ ॥

ಗತಿ ೧೨

## ಪ್ರಾಣಲಿಂಗೋಪದೇಶ

ಗುರುವನಱಿಸುವೆನೆಂದು ತಿಟ್ಟನೆ
ತಿರುಗಿದಳು ಗಿರಿ ಗಹ್ವರಂಗಳ
ಗುರುವನಱಿಸುವೆನೆಂದು ತಿಟ್ಟನೆ ತೊಳಲಿದಳು ಧರೆಯ ।
ಗುರುವನಱಿಸುವೆನೆಂದು ಕಾಯುವ
ಕರಗುತಿರ್ದಳು ಕಾತರಿಸಿ ಸ
ದ್ಗುರುವನಱಿಸುವ ವೇಧೆಯಲಿ ಮಱುಗಿದಳು ಮಹದೇವಿ ॥ ೩೬೩ ॥

ಪೊಂಪುಳಿಯ ಘನ ಸೌಖ್ಯ ಮಿಕ್ಕಳಿ
ಗಂಪುಗಳಲಿಲ್ಲೆನುತ ತನ್ನೊಳು
ಜೊಂಪಿಸುವ ಮನವೆಂಬ ತುಂಬಿಯ ಭಾವ ಮಿಗೆ ತುಂಬಿ ।
ಸಂಪಗೆಯು ಸಾರ್ವಂತೆ ಬಂದಳ
ಲಂಪಿನಲಿ ಮಹದೇವಿ ಮುಕ್ತಿಯ
ಸೊಂಪು ಶೋಭಿಸುವಲ್ಲಮ ಪ್ರಭು ರಾಯನಿರ್ದೆಡೆಗೆ ॥ ೩೬೪ ॥

ನೋಡಿ ಕಂಡಳು ವೇದ ತತಿ ಕೈ
ನೀಡಿದಡೆ ಮೈ ನಿಲುಕದಾತನ
ಹಾಡಿ ಹೊಗಳುತಲೊಡಲನೀಡಾಡಿದಳು ಚರಣದಲಿ ।
ಕೂಡೆ ಶರಣೆನೆ ಶಿವ ಗಣಕೆ ಕೈ
ಗೂಡಿ ಶರಣೆಂದೆನುತ ಭಕ್ತಿಯ
ಗೂಡು ತಾನೆಂಬಂತೆ ಕಾಣಿಸಿದಳು ಮಹಾದೇವಿ ॥ ೩೬೫ ॥

ಲೋಕದೊಳು ಸತಿ ಜನ್ಮವನು ತಾ
ಸ್ವೀಕರಿಸಿ ತನು ಲೋಭ ಮೋಹವ
ನೂಕಿ ನಿಸ್ಪೃಹೆಯಾಗಿ ನಿಲುವವರಾರು ಧಾತ್ರಿಯಲಿ ।
ಈಕೆಗಾರೆಣೆ ಶಿವ ಶಿವಾ ಎನು
ತಾಕೆಯನು ಬಸವಣ್ಣ ಮುಖ್ಯರ
ನೇಕ ಪರಿಯಲಿ ಹೊಗಳುತಿರ್ದರು ಶರಣು ಶರಣೆನುತ ॥ ೩೬೬ ॥

ನರೆ ತೆರೆಗಳಿಡಿದಡರಿ ತನು ಜ
ಜ್ಜರಿತವಾಗಿ ಅನೇಕ ದಿನದಲಿ
ಹಿರಿಯರೆಂದೆನಿಸಿದಡೆ ಹಿರಿಯರೆ ಬೆಟ್ಟದಂದದಲಿ ।
ಹಿರಿದು ದಿನವಿರೆ ಹಿರಿಯರಹರೇ
ನಿರುತ ನಿರಹಂಕಾರವಿಲ್ಲದೆ
ಹಿರಿಯತನ ಮಹದೇವಿಗಾಯಿತ್ತೆಂದುದಭವ ಗಣ ॥ ೩೬೭ ॥

ಬಳಿಕಲಾಕೆಯ ಚಿತ್ತವತಿ ನಿ
ರ್ಮಳತೆಯಾದುದನರಿದು ತಾ ತ
ನ್ನೊಳಗೆ ಸಂತೋಷಿಸುತ ಹೋ ಮಝು ಮಾಯೆಯೆಂದೆನುತ ।
ತಿಳಿಯ ಬೇಕೆಂದೆನ್ನ ಕಾರಣ
ತೊಳಲಿ ಬಳಲಿದಳಿನ್ನು ಕರುಣಿಸಿ
ನಿಲಿಸ ಬೇಕೆನುತಲ್ಲಮ ಪ್ರಭು ರಾಯನಿಂತೆಂದ ॥ ೩೬೮ ॥

ಆಯತವನಳವಡಿಸಿ ದಿಟವಾ
ಸ್ವಾಯತವನವಗಯಿಸ ಬೇಕೆಂ
ಬಾಯತಕೆ ಸರ್ವಾಂಗವನು ಸಲೆ ಸವೆದರಾರುಂಟು ।
ಬಾಯ ನುಡಿಗಳ ಚದುರರಲ್ಲದೆ
ಕಾಯದಲಿ ಕಲಿ ಯಾರು ಭಕ್ತಿಯ
ದಾಯ ನಿನ್ನಲಿ ನೆಲಸಿತೌ ಮಹದೇವಿ ಕೇಳೆಂದ ॥ ೩೬೯ ॥

ಎನುತಲಾ ಮಹದೇವಿಯಕ್ಕಗೆ
ತನು ಮನೋ ವಾಯುಗಳ ಸಂಚವ
ನಸಲನಲಿ ಸಲೆ ಸುಡುವ ಸಮತೆಯ ಜೀವ ಪರಮರನು ।
ಅನುಗೊಳಿಸಿ ನಿರ್ವಯಲ ಮಾಡುವ
ನೆನಹಿನುಪದೇಶವನು ಮಾಡಿದ
ನನುಪಮೋಪಮ ಸಗುಣ ನಿರ್ಗುಣ ಗುರು ಗುಹೇಶ್ವರನು ॥ ೩೭೦ ॥

ಎಲ್ಲರಲಿ ಶರಣಾರ್ಥಿಯೆಂದೆನು
ತೆಲ್ಲರಲಿ ಹರಕೆಯನು ಕೈಕೊಳು
ತೆಲ್ಲ ಶರಣರ ಚರಣವನು ನೆನಹಿನಲಿ ನೆಲೆಗೊಳಿಸಿ ।
ಭುಲ್ಲವಿಸಿ ಮೈ ಮಱೆದು ಪಸರಿಸಿ
ಪಲ್ಲವಿಸಿ ಮಹದೇವಿ ಬಳಿಕೆ
ಮ್ಮಲ್ಲಮ ಪ್ರಭು ರಾಯನನು ಬೀಳ್ಕೊಂಡಳರ್ತಿಯಲಿ ॥ ೩೭೧ ॥

ನಿಲಿಸಿ ನಿರ್ವಯಲಿನ ಸಮಾಧಿಯ
ನಳವಡಿಸಿ ಮಹದೇವಿಯಕ್ಕನ
ಕಳುಹಿ ತದನಂತರದಲಗ್ಗದ ಬಸವ ರಾಜಂಗೆ ।
ತಿಳುಹುವೆನು ಶಿವ ತತ್ವ ಭಕ್ತಿಯ
ಬಳಕೆಯನುಭಾವದೊಳಗೇಕ
ಸ್ಥಳವನೆಂದೆನುತಲ್ಲಮ ಪ್ರಭು ರಾಯನಿಂತೆಂದ ॥ ೩೭೨ ॥

ಗಿಡುವಳುಕಿ ಹೂ ಪತ್ರೆಗೋಸುಗ
ಮಡು ಸಡುಗಿ ಅಗ್ಗವಣೆಗೋಸುಗ
ಕಡಿದುಪಾಹಾರಕ್ಕೆ ಸಕಳೌಷಧಿ ವನಸ್ಪತಿಯ ।
ಕೆಡಿಸುತೀ ಪರಿ ಹೆಱರುಗಳ ತ
ನ್ನೊಡಲ ವಂಚಿಸಿ ಬಾಹ್ಯ ಭಕ್ತಿಯ
ನಡೆವವರ ನಾ ಮೆಚ್ಚೆನೈ ಬಸವಣ್ಣ ಕೇಳೆಂದ ॥ ೩೭೩ ॥

ಉಸುರು ಗರಗಸದಲ್ಲಿ ತನುವಿನ
ಬೆಸುಗೆಯನು ಬಿಜ ಮಾಡಿ ಬಿಸುಡದೆ
ಹಸು ತೃಷೆಯ ಹರಿ ಹುಗಿಲಿನುಪಟಳಕಂಜಿ ಮುಖ ಗುಡದೆ ।
ದಶ ವಿಧೇಂದ್ರಿಯ ದಾಳಿಯಲಿ ಶಂ
ಕಿಸದೆ ನಿಲುವಡೆ ಸಿದ್ಧರಾಮನ
ದೆಸೆಯ ನೆನೆಯಲು ಭಕ್ತರಹರೈ ಬಸವ ಕೇಳೆಂದ ॥ ೩೭೪ ॥

ದೇವದೇವ ಮಹಾ ಪ್ರಸಾದ ವಿ
ದಾವ ಶಬುದವ ಚಿತ್ತವಿಸಿದಿರಿ
ನೀವು ನಿಮ್ಮಯ ಕಿಂಕರರೊಳಾಸಾರ ಹೋಲುವೆನು ।
ದೇವ ನೀ ಮನ್ನಿಸಿದೊಡಧಮನೆ
ಪಾವನಾತ್ಮಕನಲ್ಲದಡೆ ಜಡ
ಜೀವನಿಂದತಿ ಕಷ್ಟನೆಂದನು ಸಿದ್ಧರಾಮಯ್ಯ ॥ ೩೭೫ ॥

ಪರಮ ಪೂರ್ವಾಚಾರ್ಯ ಬಸವೇ
ಶ್ವರನು ಘನಗುರು ಚೆನ್ನ ಬಸವನು
ನಿರುಪಮ ಜ್ಞಾನೈಕ ನಿಧಿ ಮಡಿವಾಳ ಮಾಚಯ್ಯ ।
ವರ ಮಹಾ ಗಣ ತಿಂತಿಣಿಯೊಳನಿ
ಬರೊಳು ಗಣಿಸುವಡಾನದೇಸಱ
ಹುರುಳು ಹೇಳಾ ದೇವ ಎಂದನು ಸಿದ್ಧರಾಮಯ್ಯ ॥ ೩೭೬ ॥

ಪೂತು ಮಝರೇ ಸಿದ್ಧರಾಮನ
ಮಾತು ತಪ್ಪದು ಭಕ್ತರುಪಮಾ
ತೀತರಹುದೈ ಬಸವ ಮಡಿವಳ ಚೆನ್ನ ಬಸವಣ್ಣ ।
ಈತಗಳು ಸಾಕ್ಷಾತ ಲೋಕ
ಖ್ಯಾತ ಪುರುಷರು ಸತ್ಯವೆನುತ ಪು
ರಾತನರ ಮಿಗೆ ಹೊಗಳುತಾ ಪ್ರಭು ರಾಯನಿಂತೆಂದ ॥ ೩೭೭ ॥

ಆದಿ ಪುರುಷನು ಬಸವ ರಾಜನ
ನಾದಿ ಪುರುಷನು ಬಸವ ರಾಜನು
ನಾದ ಪುರುಷನು ಬಸವ ರಾಜನು ಬಸವ ರಾಜನನು ।
ವೇದ ಶಾಸ್ತ್ರಗಳಱಿಸಲಱಿಯದೆ
ಹೋದವೆನುತಲಿ ಬಸವ ರಾಜನ
ನ್ನೈದೆ ಹೊಗಳುತಲಲ್ಲಮ ಪ್ರಭು ರಾಯನಿಂತೆಂದ ॥ ೩೭೮ ॥

ಆದಡಾಲಿಸಿ ಕೇಳು ಭಕ್ತಿಯ ಶ.ತ್ರ 30
ಹಾದಿಗೊಂದೇ ಕೀಲು ದಿಟ ಬೇ
ಕಾದಡೀ ತನು ವಿಡಿದು ಕಾಬುದು ತಾ ಸಮಸ್ತವನು ।
ಆದರಿಸಿ ಈ ತನುವ ಲಿಂಗೋ
ಪಾದ್ಧಿಯಲಿ ಭೋಗ್ಯೈಸಿಕೊಳುತವೆ
ಸಾಧಿಸುವುದು ಸಮಾಧಿಯನು ಬಸವಣ್ಣ ಕೇಳೆಂದ ॥ ೩೭೯ ॥

ಅನುಶ್ರವಣ ಮನನದ ನಿದಿಧ್ಯಾ
ಸನದಲೊಚ್ಚತವಾಗಿ ತನ್ನಯ
ತನು ಮನೋ ವಾಕ್ಕಾಯ ಕರ್ಮಗಳೊಂದು ಹುರಿಯಾಗಿ ।
ನೆನಹು ನೆಲೆಗೊಂಡಾ ಮಹಾತ್ಮಗೆ
ಘನವದಾವುದು ಗಮಿಸಿದಡೆ ಆ
ತನೆ ಕಣಾ ಸ್ವಾತಂತ್ರಭಕ್ತನು ಬಸವ ಕೇಳೆಂದ ॥ ೩೮೦ ॥

ತನ್ನೊಳಗೆ ಗುರು ಲಿಂಗ ಜಂಗಮ
ತನ್ನೊಳಗೆ ಪಾದೋದಕಾಮೃತ
ತನ್ನೊಳಗೆ ಪರಮ ಪ್ರಸಾದ ಸಮಸ್ತವೆಲ್ಲವನು ।
ತನ್ನೊಳಱಿಯದೆ ಇದಿರಲಱಸುವ
ಭಿನ್ನ ಭಾವ ಭ್ರಮಿತ ಭವಿಗಳು
ನನ್ನ ಸಾಧಿಸಲಱಿಯರೈ ಬಸವಣ್ಣ ಕೇಳೆಂದ ॥ ೩೮೧ ॥

ಅನುಭವವನಳವಡುವ ಪರಿಯಂ
ತನುಮತವನೊಳಕೊಂಡು ನಿಶ್ಚಲ
ದನುವನಂಗೀಕರಿಸಿ ನೀವಿರಲಾ ದಿನಂಗಳಲಿ ।
ಮನವೊಲಿದು ನಾ ಬಂದು ಮೇಲಣ
ನೆನಹಿನುಪದೇಶವನು ಮಾಡುವೆ
ನೆನುತಲಾ ಪ್ರಭು ರಾಯನಾ ಬಸವಣ್ಣಗಿಂತೆಂದ ॥ ೩೮೨ ॥

ನೋಡಬೇಕಾರಾರು ಭಕ್ತಿಯ
ಮಾಡಿ ಮುಕ್ತಿಯ ಹಡೆವೆನೆಂದನು
ಗೂಡಿ ನಿಚ್ಚಟರಾಗಿ ಧೀರೋದಾರ ವೃತ್ತಿಯಲಿ ।
ಖೋಡಿಯೋಗದೆ ನಿರ್ವಹಿಸಿ ಹೇ
ಡಾಡದವರನು ಕಾಚೆವಾವಿಂ
ನಾಡೆ ಬಹೆವೆಂದೆನುತಲಿರ್ದನು ಗುರು ಗುಹೇಶ್ವರನು ॥ ೩೮೩ ॥

ಸತ್ಯರಾಗಿಹುದಚಲ ಭಕ್ತರು
ನಿತ್ಯರಾಗಿಹುದಖಿಲ ಭಕ್ತರು
ಮುಕ್ತರಾಗಿಹುದಮಲ ಭಕ್ತರು ಭಕ್ತಿಯಿಂದೆನುತ ।
ಮತ್ತೆ ಮುದದಲಿ ಸಿದ್ಧರಾಮನ
ನುತ್ತಮೋತ್ತಮ ಬಸವ ರಾಜನ
ಚಿತ್ತ ದಣಿಯಲು ಹರಸಿದನು ಹರುಷದಲಿ ಪ್ರಭು ರಾಯ ॥ ೩೮೪ ॥

ಮನವೊಲಿದು ಶಿವ ಶರಣರೆಲ್ಲರು
ತನ ತನಗೆ ಸಾಷ್ಟಾಂಗ ಸಹಿತವೆ
ತನುವನೀಡಾಡಿದರು ಗುರುವಿಗೆ ಬಳಿಕಲವರುಗಳ ।
ವಿನಯದಿಂದಿರ ಹೇಳಿ ಮರ್ತ್ಯದ
ಮನುಜರನು ಪಾವನವ ಮಾಡುವೆ
ನೆನುತ ಗಮಿಸಿದನಲ್ಲಮ ಪ್ರಭು ಲಿಂಗ ಲೀಲೆಯಲಿ ॥ ೩೮೫ ॥

ಗತಿ ೧೩

## ಗೋರಕ್ಷಾದಿಗಳಿಗೆ ಉಪದೇಶ

ನಿಧಿಯ ಚಿಂತಾ ಮಣಿಯ ದಿವ್ಯೌ
ಷಧಿಯ ಪರುಷದ ಕಣಿಯ ಸುಲಲಿತ
ಸುಧೆಯು ಬಿಲಗಳ ಸಿದ್ಧರಸ ಪಾದುಕೆಯನಂಜನವ ।
ವಿಧಿ ವಿಧಾನದ ವಸ್ತುಗಳ ತ
ವಿಮ್ಮದಿರಲಱಸುವ ಸಾಧಕರ ತವ
ನಿಧಿಯೆನಿಪ ಶ್ರೀಗಿರಿಯ ಕಂಡನು ಬರುತ ಪ್ರಭು ರಾಯ ॥ ೩೮೬ ॥

ನಡೆವ ಲತೆಗಳು ನಗುವ ಗಿಡುಗಳು
ನುಡಿವ ಶಿಲೆಗಳು ತೇಜದಿಂದುರಿ
ಯಿಡುವ ತರುಗಳು ದಿವ್ಯ ರುಚಿಗಳನೀವ ಗುಲ್ಮಗಳು ।
ಕುಡಿದಡಂತಃಕರಣ ಶುದ್ಧಿಯ
ಕೊಡುವ ಮಡುಗಳು ಜಾತಿ ವೈರವ
ತೊಡದ ಖಗ ಮೃಗ ಮೆಱೆದವಾ ಸಿರಿ ಗಿರಿಯ ಶಿಖರದಲಿ ॥೩೮೭॥

ಏಱಿ ನೋಡಲು ಸತ್ಯ ಲೋಕಕೆ
ಹಾಱುವ ಗಿರಿ ಶಿಖರಗಳು ಮಿಗೆ
ಮೀಱಿ ಹೊಕ್ಕಡೆ ಸಪ್ತ ಪಾತಾಳದ ಸಘಾಡಿಕೆಯ ।
ತೋಱುವ ಬಿಂಕದ ಬಿಲಂಗಳು
ಸಾಱಿ ಸಾಧಕರೇನ ಬಗೆದುದ
ಹೇಱಿ ಕೊಡುವ ಸು ವಸ್ತುವಿರ್ದವು ಪರ್ವತಾಗ್ರದಲಿ ॥ ೩೮೮ ॥

ಆ ಮಹಾ ಶ್ರೀಗಿರಿಯ ಶಿಖರದಿ
ಕಾಮಿತಾರ್ಥವ ಹಡೆವೆನೆಂದು
ದ್ವಾಮತೆಯ ಗೋರಕ್ಷನೆಂಬ ಸಮಸ್ತ ಸಾಧಕನು ।
ಪ್ರೇಮದಿಂದಿರುತಿರಲಿಕಾ ದಿನ
ಏೀ ಮನೋಹರ ಮೂರ್ತಿ ಮಯ ನಿ
ಸ್ಸೀಮಸಲ್ಲಮನಲ್ಲಿಗೆಯ್ತಂದನು ವಿನೋದದಲಿ ॥ ೩೮೯ ॥

ಬರಲಿಕಾ ಪ್ರಭು ರಾಯನಡಿಗಳಿ
ಗೆಱಗಲೊಲ್ಲದೆ ಹಮ್ಮಿನಿಂದಲಿ
ಬೆಱೆತು ಬಿಂಕದ ಜಮ್ಮಿನಲಿ ಕೈ ಮುಗಿದು ಶರಣೆಂದು ।
ಉರುತರಾಸನದಲ್ಲಿ ಮಿಗೆ ಕು
ಳ್ಳಿರಿಸಿ ಕೂರ್ಮೆಯಲೊಯ್ಯನೊಯ್ಯನೆ
ಪರಿವಿಡಿಯಲಲ್ಲಮಗೆ ಬಿನ್ನೈಸಿದನು ಗೋರಕ್ಷ ॥ ೩೯೦ ॥

ಆವ ಕಡೆಯಿಂ ಬಿಜಯ ಮಾಡಿದಿ
ರಾವ ಕಾರಣ ಬಂದ ಬರವೆಮ
ಗಾವುದೈ ಬೆಸನೇನು ಹದನು ನಿರೂಪಿಸಾ ಪ್ರಭುವೆ ।
ನೀವು ಬಹುದೆಮಗತುಳ ಭಾಗ್ಯ ಫ
ಲಾವಳಿಗೆ ಕಾರಣವಲಾ ಮಹ
ದೇವ ಎನುತಲಿ ಉಚಿತ ವಚನವ ನುಡಿದ ಗೋರಕ್ಷ ॥ ೩೯೧ ॥

ನುಡಿಯನಾಲಿಸಿ ಕೇಳ್ದು ಭಕ್ತಿಯ
ಕಡೆಯಲಾವೆಯ್ತಂದೆವೆಮಗೀ
ಕಡೆಯ ಮನುಜರ ಮನಕೆ ಕಡೆಯನು ಮಾಡ ಬೇಕಾಗಿ ।
ಒಡಲಿನಾಸೆಗೆ ಕುದಿದು ಕೋಟಲೆ
ಪಡುವವರ ಕಳವಳವ ಕಳಚಲು
ನಡೆದು ಬಂದವರಾವಲೈ ಗೋರಕ್ಷ ಕೇಳೆಂದ ॥ ೩೯೨ ॥

ಹೊಸತಲಾ ಲೌಕೀಕದುಚಿತವ
ಪಸರಿಸಲು ಪರಮಾರ್ಥವನೆ ಸೂ
ಚಿಸುತಲೈದನೆ ಅಲ್ಲದೆನ್ನನು ಮುನ್ನ ಪರಿಕಿಸದೆ ।
ಹೆಸರು ಗೊಳುತಲಿದಾನೆ ಈತನ
ಗಸಣಿ ತಾನೇ ಆದಿ ನಾಥನ
ಬೆಸುಗೆಯಾಗಲು ಬೇಕೆನುತ ಗೋರಕ್ಷನಿಂತೆಂದ ॥ ೩೯೩ ॥

ಎಲೆ ಮಹಾ ಪುರುಷಾ ಸಿಧಾನಿಸಿ
ತಿಳಿಯೆ ನಿನ್ನಂತಸ್ಥವೆಂಬುದು
ನಿಲುಕದೆಮ್ಮಯ ಮತಿಗೆ ನಿನ್ನಯ ರೀತಿ ಹೊಸತಾಗಿ ।
ಹೊಲಬು ಹೊಗದೆಮ್ಮ ಜೀವು ಗಿಜೀವಿನ
ಸಲುಗೆ ಸಲ್ಲದು ಸಾಕು ನಿನ್ನಯ
ನೆಲೆಯ ನೀನೇ ಬಲ್ಲೆಯೆಂಡನು ಬಳಿಕ ಗೋರಕ್ಷ ॥ ೩೯೪ ॥

ತನ್ನನಱಿಯದ ಮಂದ ಮತಿಗಳಿ
ಗಿನ್ನು ಪೆಱರಂತಸ್ಥವೆಂಬುದು
ಕಣ್ಣು ಕಾಣದ ಕುರುಡ ಕನ್ನಡಿ ವಿಡಿದ ತೆಱನಂತೆ ।
ನನ್ನ ನಿಜದ ನಿರಾಳವನು ಬಳಿ
ಕಿನ್ನು ಬಲ್ಲವರಾರು ಮಾತಿನ
ಜಿನ್ನಣಿಗರಿಗೆ ಸಾಧ್ಯವೇ ಗೋರಕ್ಷ ಕೇಳೆಂದ ॥ ೩೯೫ ॥

ಕಾಯವೆಂಬುದು ತಾನು ಮಾಯಾ
ಛಾಯವಾಗಿಹುದಿಂತು ತನ್ನೊಂ
ದಾಯತವ ತಿಳಿವೆಂಬುದಿದು ಕಾಪಾಲ ಮಾರ್ಗದಲಿ ।
ನ್ಯಾಯ ಧರ್ಮವು ನನ್ನನಱಿವ ವಿ
ಡಾಯವೆನಗೇನರಿದು ಪ್ರಭುವೇ
ಬಾಯ ನುಡಿಗಳ ಬಲ್ಲಿದರು ನಾವಲ್ಲ ಕೇಳೆಂದ ॥ ೩೯೬ ॥

ಎಲು ತೊಗಲು ಮಲ ಮೂತ್ರ ನೆತ್ತರು
ಕೊಳಚೆಯಾಗಿಹ ಹೇಸಿಕೆಯ ತನಿ
ಗೊಳೆಯೊಡಲು ತಾನೆಂಬ ಮೂರ್ಖನು ತನ್ನನಱಿದಪನೆ ।
ಸಲುವುದೇ ಕಾಪಾಲ ಮಾರ್ಗಕೆ
ಹಳಿವ ತಹರೇ ಸಂಪ್ರದಾಯದ
ನೆಲೆಯನಱಿವುದು ಸೂಱೆಯೇ ಗೋರಕ್ಷ ಕೇಳೆಂದ ॥ ೩೯೭ ॥

ಮಾಡಲಱಿಯದವಂಗೆ ಕೊಳಚೆಯ
ಮಾಡವೀ ತನು ತಪ್ಪದೈ ದಿಟ
ಮಾಡ ಬಲ್ಲಡೆ ಈ ಶರೀರವೆ ರನ್ನವಾಗಿಹುದು ।
ಖೋಡಿಗಳೆವುದು ಮಾಯೆ ಗೀಯೆಯ
ನೇಡಿಸುವುದಾ ಮೃತ್ಯುಗಿತ್ಯುವ
ರೂಢಿಯಲಿ ತನು ಸಿದ್ಧರಾವೈ ಪ್ರಭುವೆ ಕೇಳೆಂದ ॥ ೩೯೮ ॥

ಎಲೆ ಮರುಳೆ ಮೃದುವಾದ ಮಾಯೆಯ
ಬಲೆಯ ಬಲ್ಲಿತ ಮಾಡಿ ಸಾವನು
ಗೆಲಿದೆನೆಂದು ನಿರರ್ಥದಲಿ ಹಾರೈಸದಿರು ಬಱಿದೆ ।
ತಿಳಿವಡೀ ತನು ತಾನೆ ಕಾಲನ
ನಿಳಯ ನೀನಿದ ನಂಬಿ ನುಡಿದಡೆ
ಪ್ರಳಯ ನಿನ್ನನು ಬಿಡುವುದೇ ಗೋರಕ್ಷ ಕೇಳೆಂದ ॥ ೩೯೯ ॥

ಆದಡಿನ್ನೇಳೇಳು ಹಿಡಿ ಹಿಡಿ
ಕೈದುವಿದೆಕೋ ಎನ್ನ ತನುವನು
ಹೊಯ್ದು ನೋಡಾ ನೀನು ನಿನ್ನಾಪನಿತು ಸತ್ವದಲಿ ।
ಕೂದಲೊಳಗೊಂದಿನಿತು ಹಱಿ ಮುಱಿ
ಯಾದಡಕಟಾ ನಾನು ಸಿದ್ಧನೆ
ವಾದವೇತಕೆ ದೃಷ್ಟವಿದಲಾ ಪ್ರಭುವೆ ನೋಡೆಂದ ॥ ೪೦೦ ॥

ಒಲ್ಲೆವೆಂದನಲೇಕೆ ಹುಟ್ಟಿಸ
ಬಲ್ಲವನು ಹೊಂದಿಸಿದಡಾತಗೆ
ಹೊಲ್ಲವಾವುದು ನಾವು ಸಲಿಸುವುದೀತನರ್ತಿಯನು ।
ನಿಲ್ಲದೆಱಗಲು ಸತ್ತನಾದಡೆ
ಬಲ್ಲಿತಹ ಗೋರಕ್ಷನನು ನಾ
ವಿಲ್ಲಿ ಸೃಜಿಸುವೆವೆನುತಲಾ ಪ್ರಭು ರಾಯನನುವಾದ ॥ ೪೦೧ ॥

ಹಿಡಿದು ಹಿಂಗದೆ ಬಲಿದು ಝಳಪಿಸಿ
ಜಡಿದು ಹೊಱ ಕೈಯಿಂದ ಖಣಿ ಖಟಿ
ಲಿಡಲಿಕಾ ಪ್ರಭುವಬ್ಬರಿಸಿ ಬಿಱು ವೊಯ್ಲನೆಱಗಿದಡೆ ।
ನಡುಗಿದುದು ನೆಲ ಶಿಲೆಗಳನು ಮೈ
ಗೊಡಹಿದುದು ಗಿರಿ ಒಂದು ಕೂದಲು
ಕಡಿಯದಾ ಗೋರಕ್ಷನಲಿ ಏನೆಂಬೆನಚ್ಚರಿಯ ॥ ೪೦೨ ॥

ಬಱ ಸಿಡಿಲು ಶೀತೋಷ್ಣ ಖಡುಗಡ
ಬಿಱುಬು ಹೊಯಿಲಿಗೆ ಕೆಡದ ವಜ್ರದ
ಬಿಱುಸಿನಂತೆನಿಸಿದ ಶರೀರವು ಸಿದ್ಧಿಯಲ್ಲದಡೆ ।
ಪೆಱತದಾವುದು ಸಿದ್ಧನಾದಡೆ
ಕುಱುಹದಾವುದು ನೀನು ಬಲ್ಲಡೆ
ಬಱಿಯ ಮಾತನು ಬಿಟ್ಟು ದಿಟವನು ಪ್ರಭುವೆ ತೋಱೆಂದ ॥ ೪೦೩ ॥

ಹಿಡಿದುಕೋ ಖಂಡೆಯವನಾದಡೆ
ಹೊಡೆದು ನೋಡೆಮ್ಮುವನು ಮುಂಗೈ
ಮುಡುಹಿಗೆನಿತುಳ್ಳನಿತು ನಿನ್ನಯ ಸರ್ವಸತ್ವದಲಿ ।
ಖಡುಗ ಮುಖದಲಿ ಕಾಬುದಲ್ಲದೆ
ನುಡಿದು ನುಣ್ಣಿಸಲೇನು ಕಾರಣ
ತಡವಿದೇತಕೆ ತಥ್ಯವನು ಗೋರಕ್ಷ ನೋಡೆಂದ ॥ ೪೦೪ ॥

ನೋಡಬೇಕಿನ್ನಾದಡೀತನ
ಗಾಡಿಯನು ಸಲೆ ಸಿದ್ಧತನದಾ
ರೂಢವನು ಸಾಧಕಗಿದೆ ಮಹಾ ಸವಮಿಯೆಂದೆನುತ ।
ನೀಡಿ ನಿಜ ಸವ್ಯಾಪಸವ್ಯದ
ವೋಡಿಯಲಿ ಬಿಡದೆಱಗುತಿರಲೀ
ಸಾಡಿತವನಸಿ ಅವುಮ ಪ್ರಭುವಿನ ಬಯಲ ದೇಹದಲಿ ॥ ೪೨೫ ॥

ಸೊಪ್ಪುಳಾಗದು ಕೈದುವಾನದು
ಒಪ್ಪವಳಿಯದು ಜಂತ್ರ ಜೋಕೆಗೆ
ತಪ್ಪದೋಱದು ಹೊಡೆಯೆ ಹಾಱುವ ಹದ್ದಿನಂದದಲಿ ।
ನಿಪ್ಪಸರದಸಿ ಬಯಲ ದೇಹಿಯ
ನಪ್ಪಲಱಿಯದಿದೇನು ಚೋದ್ಯವೊ
ತಪ್ಪದೀತನೆ ಗುರುವೆನುತ ಗೋರಕ್ಷನಿಂತೆಂದ ॥ ೪೨೬ ॥

ಅಣಕವಲ್ಲಿದು ತನ್ನ ಹೊಯ್ದಡೆ
ಖಣಿಲೆನುತ ಖಂಡೆಯಕೆ ಮಾಱಾಂ
ತಣೆದುದೆನ್ನಸಿ ನಿನ್ನ ಹೊಯ್ದಡೆ ಬಯಲ ಹೊಯ್ದಂತೆ ।
ನುಣುಚಿ ನುಣ್ಣನೆ ಕಡೆಗೆ ಖಂಡೆಯ
ಜುಣುಗಿ ಹೋಯಿತಿದಾವ ಮಹಿಮೆಯ
ಗುಣವೊ ಸಮಗಿದನಱಿಯ ಬಾರದು ಪ್ರಭುವೆ ಹೇಳೆಂದ ॥ ೪೨೭ ॥

ಕಾಯ ಬಲಿದಡೆ ಮಾಯೆ ಬಲಿವುದು
ಮಾಯೆ ಬಲಿದಡೆ ಛಾಯೆ ಬಲಿವುದು
ಕಾಯ ಮಾಯಾ ಛಾಯೆ ಬಲಿದಡೆ ಸಿದ್ಧನವನಲ್ಲ ।
ಕಾಯ ಮಾಯಾ ಛಾಯೆದಾಗಿನ
ದಾಯವನು ನೆಱೆ ಕಳೆದನಾದಡೆ
ರಾಯನಾತನು ಸಿದ್ಧರಲಿ ಗೋರಕ್ಷ ಕೇಳೆಂದ ॥ ೪೨೮ ॥

ಅಱಿಯೆ ನಾನಿನ್ನೆಬರ ನಿನ್ನಯ
ತೆಱಸನೆನ್ನಯ ಮತ್ತತನದಲಿ
ಬೆಱತುಕೊಂಡಾಸಿರ್ದೆನೆನ್ನದು ಸರ್ವ ತಪ್ಪೆನುತ ।
ನೆಱೆ ಶರೀರವ ನೀಡಿ ಕೈ ಮುಗಿ
ದೆಱಗಿದನು ಭಯ ಭಕ್ತಿ ಭಾರದ
ಲೊಱಗುವಂತಾ ಪ್ರಭುವಿನಡಿಯೊಳು ಬಳಿಕ ಗೋರಕ್ಷ ॥ ೪೦೯ ॥

ಬಿಸಿಯ ಹದನನು ತಿಳಿದು ಲೋಹವ
ಬೆಸುವವೊಲು ಪರಿಪಾಕ ಭಾವದ
ಹಸನನಱದಿನ್ನೀತಗುಪದೇಶಿಸುವೆನೆಂದೆನುತ ।
ಒಸೆದು ಹಣೆವಿಡಿದೆತ್ತಿ ಕರುಣವ
ಪಸರಿಸುತ ಗೋರಕ್ಷನನು ಮ
ನ್ನಿಸಿದನೆಮ್ಮಯ ಗುರು ಗುಹೇಶ್ವರ ಲಿಂಗ ಲೀಲೆಯಲಿ ॥ ೪೧೦ ॥

ಪ್ರೀತಿಯಲಿ ಗೋರಕ್ಷಗನುಪಮ
ನಾಥ ಪದವಿಯನಿತ್ತು ಬಳಿಕೊಲಿ
ದಾತನಲಿ ಗುರು ಪೂಜೆಯನು ಕೈಕೊಂಡು ಕರುಣದಲಿ ।
ಭೂತಳದಲಜ್ಞಾನಿಗಳನಿ
ನ್ನೀತು ಸುಜ್ಞಾನಿಗಳ ಮಾಡುವೆ
ನೀತಗಳನೆಂದೆನುತಲಾ ಪ್ರಭು ರಾಯ ಬರುತಿರ್ದ ॥ ೪೧೧ ॥

ಬರುತ ಬರುತೀ ಪರಿಯಲುತ್ತರ
ಧರಣಿ ತಳದೊಳು ಋಷಿಗಳಾಶ್ರಮ
ವಿರಚಿಸುವ ತನಿ ರಸದ ಪರಿಪಾಕದ ಫಲಾವಳಿಯ ।
ತರು ಲತಾಳಿಯ ತಿಳಿ ಗೊಳಂಗಳ
ವರ ನಿನಾದದ ವಿಹಗ ವಿತತಿಯ
ನೆರವಿಗಳಲೊಪ್ಪುವ ಮಹಾ ಕಾನನವ ಪ್ರಭು ಕಂಡ ॥ ೪೧೨ ॥

ಕೆಲರು ವೇದವನೋದುವರು ಕೆಲ
ಕೆಲರು ಶಾಸ್ತ್ರವ ಕೇಳುವರು ಕೆಲ
ಕೆಲರು ವೇದಾರ್ಥವನುಪನ್ಯಾಸವನು ಮಾಡುವರು ।
ಕೆಲರು ದರ್ಶನ ತರ್ಕ ಭೇದಂ
ಗಳನು ತಿಳಿವವರೆಲ್ಲಿ ನೋಡಲು
ತುಳುಕುತಿರ್ದುದು ಶಬುದ ಸಂಭ್ರಮವಾ ವನಾಂತದಲಿ ॥ ೪೧೩ ॥

ಉಡುವುದಾದಡೆ ನಾರು ಹಸಿದುಂ
ಬಡೆ ಸದಾ ವನ ತರು ಫಲಂಗಳು
ತೊಡುವುದಾದಡೆ ಭೂತಿ ಹಕ್ಕೆಯ ಹಾಸು ನೋಡಿದಡೆ ।
ಕಡವಸಗಳಿಹ ವಾಸವಾದಡೆ
ಅಡವಿ ಈ ಸಂಸಾರ ಮುನಿಗಳ
ಬಿಡದಲಾ ಎಂದೆನುತಲಲ್ಲಮ ನೋಡಿ ಬೆಱಗಾದ ॥ ೪೧೪ ॥

ನಾರು ಸೀರೆಗೆ ಮರನುಗಳನಾ
ಹಾರದಾಸೆಗೆ ಕಂದ ಮೂಲವ
ನೀರ ತೃಷೆಗನವರತ ನಾನಾ ನದಿ ಸರೋವರವ ।
ಹಾರಿಕೊಂಡಿಹ ಘೋರ ತರ ಸಂ
ಸಾರ ಮುನಿಗಳ ಬಿಡದು ಉಳಿದರ
ನಾರು ಬಲ್ಲರು ಸುಡಲೆನುತಲಲ್ಲಮನು ಬೆಱಗಾದ ॥ ೪೧೫ ॥

ಜನನ ಮರಣ ಭ್ರಮೆಯು ಭವ ಬಂ
ಧನಕೆ ತಾಱದ ಕರ್ಮವೇ ಕಾ
ರಣವಲಾ ಕೈವಲ್ಯ ಪದವಿಯನೊಲಿವ ಜೀವರಿಗೆ ।
ಇನಿತನೇನುವನಱಿಯಲಱಿಯದೆ
ಮನಸಿನಿಚ್ಛೆಗೆ ಹರಿವುದನುಚಿತ
ವೆನುತಲುಪದೇಶಿಸಿದನಾ ಪ್ರಭು ಮುನಿ ಜನಂಗಳಿಗೆ ॥ ೪೧೬ ॥

ಲೇಪಿಸಿದಹಂಕಾರವೇ ಪಶು
ಯೂಪ ಕಂಭವೆ ಮನಸು ಪವನ
ಸ್ಥಾಪಿತವೆ ಬಂಧಿಸುವ ಪಾಶ ವಿವೇಕವೇ ಶಸ್ತ್ರ ।
ವ್ಯಾಪಿಸಿದ ಸುಜ್ಞಾನ ವಹ್ನಿ ಸ
ದಾ ಪುನೀತಮಯಾತ್ಮನಧ್ವರಿ
ಈ ಪರಿಯನರುಹಿಸಿದನಾ ಪ್ರಭು ಮುನಿ ಜನಂಗಳಿಗೆ ॥ ೪೨೭ ॥

ಮಿಥ್ಯವೆಲ್ಲವು ಹೋಮದಾಹುತಿ
ತಥ್ಯವೇ ಶೇಷ ಪ್ರಸಾದವು
ನಿತ್ಯ ನಿರ್ಮಲ ನಿಜದ ಪರಮಾನಂದವೇ ತೃಪ್ತಿ ।
ಸತ್ಯ ಶಾಶ್ವತ ಸ್ವಸ್ವರೂಪದ
ತತ್ವ ತಾನೆಂದರಿವುದೇ ಫಲ
ವೃತ್ತಿಯೆಂದುಪದೇಶಿಸಿದನಾ ಪ್ರಭು ಮುನಿ ವ್ರಜಕೆ ॥ ೪೨೮ ॥

ಎನುತ ಯಾಗಕೆ ಆತ್ಮ ಯಾಗವ
ನನುರತಿಗೆ ನಿಜ ರತಿಯ ದೇವಾ
ರ್ಚನೆಗೆ ಹೃದಯವನುಪಮಯನಕಾ ನಿಜ ನಿರೀಕ್ಷಣೆಯ ।
ಇನಿತು ಬಾಹ್ಯದ ಕರ್ಮ ಭಕ್ತಿಗ
ಳಿನಿತನಂತರ್ಮಾರ್ಗದಲಿ ಸೂ
ಚನೆಯ ಮಾಡಿದನಲ್ಲಮ ಪ್ರಭು ಪರಮ ಮುನಿಗಳಿಗೆ ॥ ೪೨೯ ॥

ಗತಿ ೧೪

ಟಿ. ಕೊ. 104

## ಶೂನ್ಯ ಸಿಂಹಾಸನಾರೋಹಣ

ಗುರು ಗುಹೇಶ್ವರ ತಾನದಾರಿಗೆ
ಕರುಣಿಸಿದನವರವರಿಗಾ ಕ್ಷಣ
ಪರಮ ಪದವಿಯಲಿರಿಸಿ ತಾನೊಲಿದಾಡುತಿರಲಿತ್ತ ।
ಗರುವ ಗುಣ ನಿಧಿ ಬಸವ ದಂಡೇ
ಶ್ವರನು ಕಲ್ಯಾಣದಲಿ ರಚಿಸಿದ
ಪರಿಯನೆಲ್ಲರು ತಿಳಿವುದೀ ಪ್ರಭು ಲಿಂಗ ಲೀಲೆಯಲಿ ॥ ೪೨೦ ॥

ಗುರು ಗುಹೇಶನ ಚಾರು ಚರಣಾಂ
ಬುರುಹಗಳ ನಾನಾವ ಪರಿಯಲಿ
ವರಿಸಿ ಎನ್ನ ಮನಸ್ಸಮಾಧಿಯನೆಂದು ಪಡೆದಪೆನೊ ।
ಪರಮ ಪುರುಷನದಾವ ವೇಷವ
ಧರಿಸಿ ಬಹನೋ ಆ ಮಹಾತ್ಮನ
ಹುರುಳನಾನೆಂತರಿವೆನೆನುತಲಿ ಬಸವ ಚಿಂತಿಸಿದ ॥ ೪೨೧ ॥

ಆವ ವೇಷದಲಾದಡೆಮ್ಮಯ
ದೇವನೊಲಿದೈತಂದಡಾತನ
ಭಾವ ಭಣಿತೆಯನರಿವವೊಲು ನಾನೊಂದುಪಾಯವನು ।
ತೀವಿ ತೆಕ್ಕನೆ ಸಿಕ್ಕಿಸುವೆ ನಾ
ನಾವ ಪರಿಯಿಂದಾದಡೆಯು ಮ
ಜ್ಜೀವಿತೇಶನನೆನುತಲಾ ಬಸವಣ್ಣನನುಗೈದ ॥ ೪೨೨ ॥

ಅನುಗೊಳಿಸಿದನು ಶೂನ್ಯ ಸಿಂಹಾ ಶಿ. ರಹಸ್ಯ 39, ಶಿ. ಪ್ರ ||
ಸನವಿದೆಂದದಕಿಟ್ಟು ಹೆಸರನು ವ. ೯.
ವಿನುತ ಪಶ್ಚಿಮ ಮಾರ್ಗದಲಿ ತಾ ಕಂಡುದೆಲ್ಲವನು । ಬ. ಶ್ರೀ. ಸ್ವ. 106.
ಕನಕ ಮರಕತ ಮುಖ್ಯ ಮಣಿಗಳ
ಘನ ತರದ ಕೇವಣದ ಲಹರಿಯ
ಮಿನುಗ ಮಿನುಗುವ ವಿಮಲ ಪೀಠವ ಬಸವ ನಿರ್ಮಿಸಿದ ॥ ೪೨೩ ॥

ಇಂದು ಕಾಂತದ ಶಿಲೆಯ ಹಪ್ಪಳೆ
ಬಂಧಿಸಿದ ಸೋಪಾನ ಸುತ್ತಲು
ಹೊಂದಿ ಹೊಱಗಾಣಿಸದ ಸಪ್ತಾವರಣ ಮಯ ಭಿತ್ತಿ ।
ಒಂದಱಿಂದೊಂದಧಿಕತರವೆನ
ಲೊಂದು ಗೂಡಿದ ಶೂನ್ಯ ಪೀಠದ
ನಿಂದ ನಿಲವರಿದಾಯ್ತು ಲೋಕದ ಜನದ ಕಣ್ಮನಕೆ ॥ ೪೨೪ ॥

ಹಣ್ಣಿ ಹನ್ನೆರಡಬ್ದವಾಯಿತು
ಶೂನ್ಯ ಸಿಂಹಾಸನವನಕಟಾ
ಎನ್ನ ಗುರುವಿನ್ನೆಂದು ಬಿಜಯಂಗೈದು ಕರುಣದಲಿ ।
ಕಣ್ಣ ಬಱಿನನು ತಿಳುಹಿ ತೆಕ್ಕನೆ
ತನ್ನ ಮೂರ್ತಿಯ ತೋಱಿ ತೊಲಗದೆ
ಮನ್ನಿಸುವನೋ ಎನುತಲಾ ಬಸವಣ್ಣ ಚಿಂತಿಸಿದ ॥ ೪೨೫ ॥

ಅರಸನಱಿಯದ ಬಿಟ್ಟಿಗೆಲಸದ
ಪರಿಯಲಾಯಿತೆ ಎನ್ನ ಮಾಟದ
ಪರಿಕರಣೆ ಫಲವೀಯಲಱಿಯದಲಾ ಮಹಾದೇವ ।
ಹರ ಹರಾ ಎಂದೆನುತ ಚಿಂತಾ
ತುರತೆಯಲಿ ಹೊಱಗೊಳಗನಾಲಿಸು
ತಿರುತಲಿರ್ದನು ಬಯಸಿ ಬರವನು ಬಸವನಲ್ಲಮನ ॥ ೪೨೬ ॥

ಈ ತೆಱದಲಾ ಶಿವ ಸಮಾಧಿ
ಪ್ರೀತಿಯಿಂದಿರಲೊಂದು ದಿನ ತಾ
ನೋತು ತನ್ನಯ ಸುಲಲಿತಾಂತರ್ಮುಖದ ಮುಕುರದಲಿ ।
ಪ್ರೀತಿಯಲಿ ತನಗಲ್ಲಮ ಪ್ರಭು
ವೈತಹುದನೊಲಿದಮಲ ತತ್ತ್ವ ವಿ
ಭೂತಿಯನು ತನಗೀವುದನು ನೆಱೆ ಕಂಡ ಬಸವಣ್ಣ ॥ ೪೨೭ ॥

ಆವ ವೇಷವ ತೊಟ್ಟಿಹನೊ ಮೇ
ಣಾವ ಪಥದಲಿ ಸುಳಿವನೋ ದಿಟ
ವಾವ ವೇಳೆಯಲೊಲಿದು ಬಹನೋ ಶಿವ ಮಹಾದೇವ ।
ಭಾವಿಸುವಡರಿದೆನುತಲಾ ಪ್ರಭು
ದೇವರಿಗೆ ತಾನಿದಿರು ವೋಗುತ
ಲೀ ವಿಚಾರವನೆಣಿಸುತಿರ್ದನು ಬಸವ ದಂಡೇಶ ॥ ೪೨೮ ॥

ಎಡ ಬಲಂಗಳೊಳೆಯ್ದೆ ಭಕ್ತರ
ಗಡಣ ಹಿಂಭಾಗದಲಿ ನಾನಾ
ಪೊಡವಿ ಪಾಲ ಕುಮಾರಕರ ಸಂದಣಿಯ ಸಂದೋಹ ।
ಬಿಡದೆ ಕೈವಾರಿಸುವ ನೆಲನು
ಗ್ಗಡಣೆಕಾರರ ಮೊತ್ತಗಳು ಮುಂ
ಗುಡಿಯಲೊಪ್ಪಿರೆ ನಡೆದನಿದಿರನು ಬಸವ ದಂಡೇಶ ॥ ೪೨೯ ॥

ವಂದನೆಯ ವೇಷಂಗಳಂಗವ
ಹೊಂದದೆಲ್ಲರ ಕಣ್ಗೆ ಮರುಳಿನ
ಚಂದದಿಂಗಿತದಿಂದ ಸುಳಿದಡೆ ಬಸವ ಬಳಿಕೆನ್ನ ।
ಅಂದದೊಳಗನು ತಿಳಿವನೋ ಮೇಣ್
ಮಂದ ಮತಿಯಾಗಿಹನೊ ನಾನಿದ
ನಿಂದು ನೋಡುವೆನೆನುತಲಾ ಪ್ರಭು ರಾಯನನುಗೈದ ॥ ೪೩೦ ॥

ಬಿಟ್ಟ ಮಂಡೆಯು ಕೆಂಚ ಗೂದಲ
ನಿಟ್ಟೊಡಲ ನಿಡಿ ದೋಳ ತೊಸಹಿಸ
ಮುಟ್ಟದೆವೆಗಳ ನಟ್ಟ ನೋಟದ ಲಂಬ ಕರ್ಣಗಳ ।
ದಟ್ಟಡಿಯು ಮಲೆತಂಗದೊಲಹಿಸ
ಕಟ್ಟಳೆಯ ಕಡು ಮರುಳ ವೇಷವ
ತೊಟ್ಟು ತೊಟ್ಟನೆ ಸುಳಿದನಾ ಪ್ರಭು ಲಿಂಗ ಲೀಲೆಯುಲಿ ॥ ೪೩೧ ॥

ನೋಡುವವರನಜಿಸಿಯಟ್ಟಿ ಮುಟ್ಟಿಸಿ
ಓಡಿ ಹೋಗುತ ಮರಳಿ ಹಿಂದಕೆ
ಕೋಡ ಕಯ್ಯವರುಗಳನೇಳಿಸಿ ಬೀಳುತೇಳುತಲಿ ।
ಹಾಡುತಲಿ ನಲಿ ನಲಿದು ಹರಿಸುಟಿ
ಯಾಡುತಲಿ ನಾನಾ ವಿನೋದವ
ಮಾಡುತಿರ್ದನು ಜನದೊಳಾ ಪ್ರಭು ಲಿಂಗ ಲೀಲೆಯುಲಿ ॥ ೪೩೨ ॥

ಒಮ್ಮೆ ಶಿಶುವಹನೊಮ್ಮೆ ಗುರುವಹ
ನೊಮ್ಮೆ ಬಣಗಹನೊಮ್ಮೆ ಪಟುವಹ
ನೊಮ್ಮೆ ರೂಪಹನೊಮ್ಮೆ ಅಕ್ಕಟ ಬಟ್ಟ ಬಯುಲಹನು ।
ಒಮ್ಮೆ ಇಲ್ಲಿಹನೊಮ್ಮೆ ಅಲ್ಲಿಹ
ನೊಮ್ಮೆ ಎಲ್ಲಾ ಎಡೆಯೊಳಿಹ ಪರ
ಬೊಮ್ಮನಲ್ಲಮ ಲಿಂಗ ನಟಿಸಿದನೀ ಪ್ರಕಾರದಲಿ ॥ ೪೩೩ ॥

ಹಾಡಿದಡೆ ಹಾಡುವನು ಪಾತ್ರವ
ನಾಡಿದಡೆ ತಾನಾಡುವನು ಕೊಂ
ಡಾಡಿದಡೆ ಕೊಂಡಾಡುವನು ನಮಿಸಿದಡೆ ನಮಿಸುವನು ।
ನೋಡಿದಡೆ ನೋಡುವನು ಜೀವರು
ಮಾಡಿದಂತಿರೆ ಮಾಡಿ ನಿರ್ಗುಣ
ಗಾಢವನೆ ಪಸರಿಸಿದನಾ ಪ್ರಭು ಲಿಂಗ ಲೀಲೆಯುಲಿ ॥ ೪೩೪ ॥

ಕಂಡವರು ಬೆಱಗಾಗಿ ಬೆಬ್ಬಳ
ಗೊಂಡು ನೋಡುತಲಿರ್ದರಾತನ
ದಂಡಿಯನು ತಾವಱಿಯಲಱಿಯದೆ ಕೂಡೆ ಜನವೆಲ್ಲ ।
ಕಂಡನಾತನ ಕಪಟವೇಷದ
ಕಂಡಿಯನು ನೆಱೆ ನೋಡಿ ಭಾವಿಸಿ
ದಂಡನಾಯಕ ಬಳಿಕ ನಿಶ್ಚೈಸಿದನು ಗುರುವೆಂದು ॥ ೪೩೫ ॥

ನೆಲನ ಮಱೆಗೊಂಡಿಹ ನಿಧಾನದ
ಹೊಲಬನಂಜನವಿಡಿದು ಕಣ್ಣಿನ
ಬಲುಹನುಳ್ಳವ ಕಾಬವೊಲು ಕರ ವಿಕೃತ ವೇಷದಲಿ ।
ಸುಳಿವ ಸಾಕ್ಷಾದಪ್ರಮೇಯನ
ನಿಲವನಱಿದನು ಕರಣಗಳ ನಿ
ರ್ಮಳತೆಯೊಳು ನಿಶ್ಚೈಸಿ ಬಳಿಕಾ ಬಸವ ದಂಡೇಶ ॥ ೪೩೬ ॥

ಉಕ್ಕಿದುದು ಮನವಱಿದು ಕಂಗಳು
ಮುಕ್ಕುಳಿಸಿದವು ಮೂರ್ತಿಯನು ಕವಿ
ದುಕ್ಕುವಾನಂದಾಶ್ರು ತಲೆದೋಱಿದವು ತನು ಪುಳಕ ।
ಮಿಕ್ಕು ಮಿಗೆ ಮತಿಮಱೆದು ಹರುಷವ
ಹಕ್ಕೆಗೊಂಡುದು ಸಲವಿನಲಿ ಮೈ
ಯಿಕ್ಕಿದನು ಬಸವಣ್ಣನಲ್ಲಮ ಲಿಂಗಸಂಘ್ರಿಯಲಿ ॥ ೪೩೭ ॥

ಘನಮಹಿಮ ಶಿವಭಕ್ತರೆಲ್ಲರು
ತನ ತನಗೆ ಹರಿತಂದು ತಮ್ಮಯ
ತನುವನೀಡಾಡಿದರು ಬಳಿಕಾ ಪ್ರಭುವಿನಂಘ್ರಿಯಲಿ ।
ವನಿತೆಯರು ನಲವಿನಲಿ ಜಯ ಜಯ
ಎನುತ ಕರ ನಖ ನಯನಗಳ ಬೆಳ
ಗನೆ ನಿವಾಳಿಸುತೆತ್ತುತಿರ್ದರು ಮಂಗಳಾರತಿಯ ॥ ೪೩೮ ॥

ಬಂದನಾಗಳೆ ಬಸವ ರಾಜನ
ಮಂದಿರಕೆ ಸಲೆ ಸಕಲ ಸಂಭ್ರಮ
ದಿಂದಲಾ ಪ್ರಭು ಲಿಂಗ ಭಕ್ತಾಧೀನ ವೃತ್ತಿಯಲಿ ।
ಮುಂದೆ ಜಯ ಜಯ ಎನುತ ಪರಮಾ
ನಂದದಲಿ ಪರಿ ಪರಿವ ಭಕ್ತರ
ಸಂದಣಿಯು ಸೌರಂಭದಿಂದಾ ಶೂನ್ಯ ವಿಷ್ಟರಕೆ ॥ ೪೩೯ ॥

ಜಗದ ಜಂತ್ರದ ಸೂತ್ರಧಾರಿಗೆ
ಸಗುಣ ನಿರ್ಗುಣಸಹ ಮಹಾತ್ಮಗೆ
ಬಗೆದು ನೋಡಲು ಬಲ್ಲಿತಾವುದು ದಿಟ ವಿಚಾರಿಪಡೆ ।
ಹಗಲು ಗತ್ತಲೆಯೆನಿಸಿ ಹಲಬರ
ಬೆಗಡು ಗೊಳಿಸುವ ಶೂನ್ಯ ಪೀಠವ
ಸಗುತಲಡರಿದನಲ್ಲಮ ಪ್ರಭು ಲಿಂಗ ಲೀಲೆಯಲಿ ॥ ೪೪೦ ॥

ತಳಿತ ತನುವಿನ ರೋಮ ಕೂಪದ
ಕುಳಿಗಳೆಲ್ಲವು ಕಂಗಳಾಗಿರೆ
ಬಳಸಿ ಭಾವಿಸಿ ಪರಮ ಗುರುವಿನ ದಿವ್ಯ ಮೂರ್ತಿಯನು ।
ತೊಲಗದೀಕ್ಷಿಸಿ ನೇತ್ರದಲಿ ಮು
ಕ್ಕುಳಿಸಿ ಆನಂದಾಶ್ರು ಜಲಧಿಯ
ತುಳುಕುತಿರ್ದನು ಬಸವ ದಂಡಾಧೀಶ ಭಕ್ತಿಯಲಿ ॥ ೪೪೧ ॥

ನೆರೆದುದಾರೋಗಣೆಗೆ ನಾನಾ
ಪರಿಯ ಜಡೆಗಳ ತಾಳು ಬೋಳಿನ
ವರ ವಿಭೂತಿಯ ಲಿಂಗದಂಗದ ಕರ ಕಮಂಡಲದ ।
ಬೆರಳ ಜಪ ಮಣಿ ಮಾಲಿಕೆಯ ವಿ
ಸ್ತರದ ಕಂಬಳಿ ಕಂಥೆಗಳ ಭಾ
ಸುರದ ಜಂಗಮ ಶೂನ್ಯ ಸಿಂಹಾಸನದ ಬಳಸಿನಲಿ ॥ ೪೪೨ ॥

ಬಳಸಿದಗ್ಗದ ಸಭೆಯೊಳಗೆ ತೊಳ
ತೊಳಗಿ ಬೆಳಗುವ ಶೂನ್ಯ ಪೀಠದ
ತಲೆಯ ಬಯಲಾಸನದಲಮಲ ಬ್ರಹ್ಮ ನೆಲಸಿರಲು ।
ಸಲಿದು ನೋಡುವ ಕಣ್ಮ ಸಂಗಳ
ತೊಲಗಲಱಿಯದೆ ಬಂದ ಜಂಗಮ
ಗಳನದೇನೆಂದಱಿಯದಿರ್ದನು ಬಸವ ದಂಡೇಶ ॥ ೪೪೩ ॥

ಹೊಸತ ಮಾಡಿದನಿಂದು ಜಂಗಮ
ಹಸಿದು ಬಿಜಯಂಗೈದಡಿತ್ತಣ
ದೆಸೆಯ ನೋಡುವುದಿಲ್ಲ ಸತ್ಕರಿಸುವುದು ಮುನ್ನಿಲ್ಲ ।
ಬಸವನಾದಡೆ ಇಂದ್ರ ಜಾಲದ
ಹಸರಿಗಗೆ ಮರುಳಾದನಾತನ
ಗಸಣಿ ನಮಗೇಕೆನುತಲೆದ್ದುದು ಜಂಗಮ ಸ್ತೋಮ ॥ ೪೪೪ ॥

ಭೋರನಲ್ಲಿಂದುಭಯ ಶಂಖವ
ಪೂರವಿಸಿಕೊಳುತೆದ್ದು ಹೋದರು
ಸಾರ ಭಕ್ತಿಯ ಶರಧಿಯಱಿದನು ಬಳಿಕಲಾ ಹದನ ।
ದೂರವಾದೆನು ಸಮಯಕವರುಪ
ಚಾರಗಳನಾನವರಿಗೊದಗದೆ
ಮೀರೆದಪ್ಪಿದೆನೇ ಶಿವಾ ಎನುತಿರ್ದ ಬಸವಣ್ಣ ॥ ೪೪೫ ॥

ನಾವು ಬಡ ಜಂಗಮವು ಬಂದಡೆ
ನೀವು ನಮ್ಮನು ತೃಪ್ತಿ ಬಡಿಸದೆ
ಆವ ಕಾರಣ ನೀನು ಚಿಂತಿಸುತಿರ್ದೆ ಬಸವಣ್ಣ ।
ಭಾವಿಸುವಡಾ ಸಾಧನದ ಸಂ
ಭಾವನೆಗಳು ಸಮಗ್ರವವನಿ
ನ್ನಾವನಾರೋಗಿಸುವನೈ ಪ್ರಭು ರಾಯ ಪೇಳೆಂದ ॥ ೪೪೬ ॥

ವಿಶಾಲಿ ಸುಡಿವಡೆ ನಿನ್ನೊಳಗೆ ನಾ
ನಾಲಿ ಲಕ್ಷದ ಮೇಲೆ ತೊಂಬ
ತ್ತಾರು ಸಾವಿರ ಜಂಗಮವು ಸಂತುಷ್ಟಿ ಪಡುವಂತೆ ।
ತೋರುವೆನು ಮೊದಲೆನ್ನ ಹಸಿವಿನ
ದೂರಿ ನೀ ದಿಟ ನಿಲಿಸಬಲ್ಲಡೆ
ಮಾರು ಮಾತುಗಳೇನು ಕಾರಣ ಬಸವ ಕೇಳೆಂದ ॥ ೪೪೭ ॥

ಎನಲು ಪನ್ನೀರಿನಲಿ ಪಾದಾ
ರ್ಚನೆಯ ಮಲಯಜ ಹಿಮಗಳನುಲೇ
ಪನವ ಮೌಕ್ತಿಕದಕ್ಷತೆಯ ನವ ಕುಸುಮ ಪೂಜೆಗಳ ।
ವಿನುತ ಧೂಪವ ರತ್ನದೀಪವ
ನನುಗೊಳಿಸಿ ವಂದಿಸಿದನೀ ಪರಿ
ಮನವೊಲಿದು ಬಸವಣ್ಣನಾ ಪ್ರಭು ಲಿಂಗ ಮೂರ್ತಿಯನು ॥ ೪೪೮ ॥

ಎಸೆವ ನವರತ್ನಾಳಿಯಲಿ ತೆ
ತ್ತಿಸಿದ ಹೊನ್ನಡ್ಡಣಿಗೆಗಳು ಏಗೆ
ಪಸರಿಸಿದ ಪರಿಯಾಣಗಳು ಕೆಲವಟ್ಟಲೋಳಿಯಲಿ ।
ಬಿಸಿಬಿಸಿಯ ಪರಿಪಾಕತೆಯ ಷಡು
ರಸ ಮಯಂಗಳ ಬೋನವನು ಗಡ
ಣಿಸಿ ಸಮರ್ಪಿಸಿದನು ಮಹೋತ್ಸಾಹದಲಿ ಬಸವಣ್ಣ ॥ ೪೪೯ ॥

ಹೊನ್ನ ಕೊಪ್ಪರಿಗೆಗಳ ಪಾನವ
ಹೊನ್ನ ಕೊಪ್ಪರಿಗೆಗಳ ತುಪ್ಪವ
ಹೊನ್ನ ಕೊಪ್ಪರಿಗೆಗಳ ಪಾಯಸ ಪಳಹು ಶಿಖರಿಣಿಯ ।
ಹೊನ್ನ ಕೊಪ್ಪರಿಗೆಗಳ ಬೋನವ
ತನ್ನ ಮುಂದಕೆ ತಂದು ನಿಲಿಸದ
ಮುನ್ನಲಾರೋಗಿಸಿದನಾ ಪ್ರಭು ಲಿಂಗ ನಸು ನಗುತ ॥ ೪೫೦ ॥

ಅಲ್ಲಮ ಪ್ರಭುವುಂಬ ತವಕದ
ಭುಲ್ಲವಣೆಯನೆ ಕಂಡು ಹರಿಹರಿ
ದೆಲ್ಲ ಭಕ್ತರು ತಮ್ಮ ಮನೆ ಮನೆಗಳಲಿ ಮಾಡಿರ್ದ ।
ಸಲ್ಲಲಿತ ಪಕ್ವಾನ್ನ ಫಲಗಳ
ಸೊಳ್ಳಿತಾಗಿಯೆ ತಂದು ಸಲಿಸಲು
ಪಲ್ಲವಿಸಿದುದು ಮತ್ತೆ ಹಸು ಗುರುವಿಂಗೆ ಸೂರ್ಮಡಿಸಿ ॥ ೪೫೧ ॥

ಅಂಬರವೆ ಬಾಯ್ದೆರೆದು ಜೀರ್ಣಿಸಿ
ಕೊಂಬಡದಕಿನ್ನಾರು ದಿಟ ಸಾ
ಕೆಂಬ ತೆಱದಲಿ ತೇಗುವಂತುಣಲಿಕ್ಕ ಬಲ್ಲವರು ।
ಇಂಬು ಗೊಟ್ಟಡೆ ಸಕಲ ಲೋಕವ
ನುಂಬ ಮಹಿಮಗೆ ನೀಡುತ್ತೈದನೆ
ನಂಬ ಬಲ್ಲಡೆ ಬಸವನೇ ಶಿವನೆಂದುದಖಿಳ ಜನ ॥ ೪೫೨ ॥

ಪಂಚ ಪರುಷವನುಳ್ಳ ಬಸವನ
ಸಂಚಿಸಿದ ಸಾಧನ ಸಮಗ್ರತೆ
ಮುಂಚೆ ಜೀರ್ಣಿಸಿ ಹೋದುದೂಟದ ಮೊದಲ ಚೂಣಿಯಲಿ ।
ಮುಂಚುತಿರ್ದುದು ದೀಪನ ಪ್ರಭೆ
ಸಂಚಲಿಸದತಿ ತೊಳಗಿ ಬೆಳಗುವ
ಗೊಂಚಲಂದದಲಲ್ಲಮ ಪ್ರಭು ರಾಯನಂಗದಲಿ ॥ ೪೫೩ ॥

ಆವ ಮುಖದಲಿ ಬಂದು ಬೇಡಿದ
ಡೀವೆನಾತಂಗೆಂಬ ಭಕ್ತಿಯು
ಸೇವೆಗೂಣೆಯವೀಗಲಾಯಿತು ಶಿವ ಮಹಾದೇವ ।
ದೇವನೇ ಹಸಿದುಣುತಲಿಹನಿ
ನ್ನಾವ ಪರಿಯಲಿ ದಣಿಸುವೆನೊ ಮಹ
ದೇವ ಎನುತಲಿ ಮನದೊಳಗೆ ಬಸವಣ್ಣ ಚಿಂತಿಸಿದ ॥ ೪೫೪ ॥

ಕಡುಗಲಿಗೆ ಕರುಳೊಗಲು ಕಯ್ಯಲಿ
ಹಿಡಿದು ಸಮರಕೆ ನಡೆವನಲ್ಲದೆ
ಕಡೆಗೆ ಸಾರಲಿ ಬಹುದೆ ಭಕ್ತನ ಧನ ಸಮರ್ಪಿಸಲು ।
ಒಡಲು ಮನಗಳನೊಡನೆಯರ್ಪಿಸಿ
ಕಡೆಯ ಕಾಣಿವುದೆಂದು ನುಡಿದರು
ಮಡಿವಳಯ್ಯನು ಚೆನ್ನಬಸವನು ಬಸವರಾಜಂಗೆ ॥ ೪೫೫ ॥

ತೆತ್ತಿಗರು ತಾವಾದ ಕಾರಣ
ತತ್ತ್ವವೇಳೆಯಲಾದಿರ್ಪ್ಪೆ ದಿಟ
ಹೆತ್ತ ತಂದೆಗಳಹುದು ಮಡಿವಳ ಚೆನ್ನಬಸವಣ್ಣ ।
ಹೊತ್ತು ಹೋಗದ ಮುನ್ನ ತನುವಿನ
ತುತ್ತ ನೀಡುವೆ ಗುರುವಿಗೆನುತಲಿ
ಚಿತ್ತದಲಿ ಹಾರೈಸುತಿರ್ದನು ಬಸವ ದಂಡೇಶ ॥ ೪೫೬ ॥

ಹಸಿದು ಬಂದವನಲ್ಲವರ್ಥದ
ದೆಸೆಗೆ ಬಂದವನಲ್ಲ ಕಾಮದ
ಮಸೆಗೆ ಮನದಲಿ ನೊಂದು ಬಂದವನಲ್ಲ ನಾ ನಿನ್ನ ।
ಹಸರಿಸಿದ ದಾಸೋಹತನವನು
ಸಸಿನೆ ಮಾಡಲು ಬಂದೆನಲ್ಲದೆ
ಅಶನದಾಸೆಗಳೆನ್ನಲುಂಟೇ ಬಸವ ಕೇಳೆಂದ ॥ ೪೫೭ ॥

ಕನ್ನಡಿಯ ಪ್ರತಿಬಿಂಬಕಿನ್ನೊಂ
ದನ್ಯ ಚೆಲುವಿಕೆಯಾಗ ಬಲ್ಲುದೆ
ನಿನ್ನ ಮನದೊಳು ಮಾಟಕೂಟದ ಬುದ್ಧಿ ಮಮಕರಿಸಿ ।
ನನ್ನ ಹಸು ಹುರಿದುಂಡುದಲ್ಲದೆ
ನಿನ್ನ ಮನದಲಿ ಮಾಟವಿಲ್ಲದೊ
ಡೆನ್ನ ತನುವಿಗೆ ಊಟವಿಲ್ಲೈ ಬಸವ ಕೇಳೆಂದ ॥ ೪೫೮ ॥

ಬಳಿಕ ಹಸ್ತೋದಕವನತಿ ನಿ
ರ್ಮಳ ಸುಗಂಧ ವಿಲೇಪವನು ಪರಿ
ಮಳದ ಕರ್ಪುರ ವೀಳೆಯಂಗಳನಿತ್ತು ಭಕ್ತಿಯಲಿ ।
ನಲಿದು ಗುರುವಿನ ಪಾದ ಪಂಕಜ
ಗಳ ಸಮೀಪದಲೊಪ್ಪುತಿರ್ದರು
ಬಳಸಿದಳಿ ಕುಳದಂತೆ ಬಸವಣ್ಣಾದಿ ಭಕ್ತ ಗಣ ॥ ೪೫೯ ॥

ಬಸವ ಬಾರೈ ನಿನ್ನ ಜಂಗಮ
ಹಸಿದರಲ್ಲಾ ಕರೆಯ ಹೋಗೆನೆ
ಬೆಸನ ಕೈಕೊಂಡಲ್ಲನು ಪ್ರಭುವಿಂದ ಬೀಳ್ಕೊಂಡು ।
ಒಸೆದು ಬಂದು ಮಹಂತರನು ಪ್ರಾ
ರ್ಥಿಸುತಲಾರೋಗಣೆಗೆ ಕರೆಯಲು
ಬಸವ ರಾಜಗೆ ಬಳಿಕ ನುಡಿಮದು ಜಂಗಮ ಸ್ತೋಮ ॥ ೪೬೦ ॥

ನಿನ್ನ ಗುರುವಿನ ಮಹಿಮೆಯೋ ಮೇಣ್
ನಿನ್ನ ಮಹಿಮೆಯೊ ಜಂಗಮಕೆ ದಿಟ
ನಿನ್ನ ಗುರುವಾರೋಗಿಸಲು ದಣಿವಾಯ್ತು ನಮಗೆಲ್ಲ ।
ನಿನ್ನ ಗುರು ಸಚರಾಚರದ ಚೈ
ತನ್ಯ ಮೂರ್ತಿಯೊ ಎನುತಲಾ ಬಸ
ವಣ್ಣನಿದಿರಲಿ ನುಡಿವುತಿರ್ದುದು ಜಂಗಮ ಸ್ತೋಮ ॥ ೪೬೧ ॥

ಗುರುವಿಗೊರೆದ ಸುಗಂಧಲೇಪನ
ಗುರುವಿಗಿಟ್ಟಕ್ಷತೆಗಳೆಲ್ಲವು
ಗುರುವಿಗಿಕ್ಕಿದ ಪುಷ್ಪ ಮಾಲೆಗಳೈದೆ ಜಂಗಮಕೆ ।
ಭರಿತವಾಗಿರೆ ತಿಳಿದನಿಂಗಿತ
ದಿರವಿನಲಿ ದಣಿವಾದಭೇದವ
ಕರಣದಲಿ ನೆಱೆ ಕಂಡು ನಲಿದನು ಬಳಿಕ ಬಸವಣ್ಣ ॥ ೪೬೨ ॥

ಬಂದನಾಗಳೆ ಬಸವ ತನ್ನಯ
ಮಂದಿರಕೆ ಗುರು ಪಾದದಲಿ ಶರ
ಣೆಂದು ಬಳಿಕಾ ಹದನನೆಲ್ಲವನೊಲಿದು ಬಿನ್ನೈಸೆ ।
ಮುಂದೆ ಮೋಹಿಸಿ ನೆರೆದ ಭಕ್ತರ
ಸಂದಣಿಗಳುಘೆ ಎನಲು ಪರಮಾ
ನಂದ ಶರಧಿಯ ಲಹರಿಯಂತಿರೆ ಮೆಱೆದುದಾಸ್ಥಾನ ॥ ೪೬೩ ॥

ಬಸುಱ ಹೆಂಗಸಿನೂಟ ಹೊಟ್ಟೆಯ
ಶಿಶುವ ದಣಿಸುವವೊಲು ಜಗಂಗಳ
ಬಸುಱೊಳಡಗಿಸಿಕೊಂಡು ನೀ ದಣಿಯುಣಲು ಜಂಗಮಕೆ ।
ಹಸಿವದೆಲ್ಲಿಯದೆಲ್ಲರಿಗೆ ಸಂ
ತಸವು ಸಂತುಷ್ಟತೆಯಲಿದ್ದರು
ಹೊಸತಿದಾದುದು ಲೋಕದೊಳು ಗುರು ರಾಯ ಕೇಳೆಂದ ॥ ೪೬೪॥

ನಿನ್ನ ಭಾವನೆಯಿದ್ದ ಪರಿಯಲಿ
ನಿನ್ನ ಜಂಗಮ ತುಷ್ಟರಾದಡೆ
ನನ್ನನೇತಕೆ ಱಟ್ಟು ಮಾಡಿದೆ ಬಱಿದೆ ಬಯಲಿಂಗೆ ।
ನಿನ್ನ ಕತದಿಂದಾದೆನಲ್ಲದೆ
ಮುನ್ನ ನಾನೆಂದೆಂಬ ವಾಸನೆ
ಎನ್ನಲುಂಟೇ ದಿಟ ವಿಚಾರಿಸೆ ಬಸವ ಕೇಳೆಂದ ॥ ೪೬೫ ॥

ಲಿಂಗ ನೀನಾರೋಗಿಸಿದಡಾ
ಜಂಗಮವು ಸಂತುಷ್ಟರಾದರು
ಜಂಗಮದ ಸಂತುಷ್ಟಿ ಸಚರಾಚರದೊಳೆಲ್ಲರಿಗೆ ।
ಹಿಂಗದಿತ್ತುದು ದಣಿವನೀ ಚಿ
ತ್ರಂಗಳಾಟದ ಸೂತ್ರವೆಲ್ಲವು
ಲಿಂಗ ನಿನ್ನಯ ಮಹಿಮೆ ಎಂದನು ಬಳಿಕ ಬಸವಣ್ಣ ॥ ೪೬೬ ॥

ಬಸವ ಮಾಡಿದಡಾಯ್ತು ಗುರು ನೆಲೆ
ಬಸವ ಮಾಡಿದಡಾಯ್ತು ಲಿಂಗವು
ಬಸವ ಮಾಡಿದಡಾಯ್ತು ಜಂಗಮವಱಿವ ಮಹಿಮಂಗೆ ।
ಬಸವನಿಂದಧ್ಯಾತ್ಮವೇ ಪಸ
ರಿಸಿತು ಲೋಕದೊಳಂತು ಕಾರಣ
ಬಸವನೇ ಪರ ದೈವವೆಂದೆನುತಿರ್ದ ಗುರು ರಾಯ ॥ ೪೧೭ ॥

ದೇವ ನಿನ್ನಯ ಭಕ್ತರೆಲ್ಲರು
ಜೀವ ನೀನೇ ಪರಮನಿಂತೀ
ಜೀವ ಪರಮರನೊಂದು ಮಾಡಿ ನಿರಾವಲಂಬನದ ।
ಠಾವನೆಡೆಗುಡು ಸಾಕು ಹೊಗಳುವ
ಡಾವು ನಿನಗೊಂದಿದಿರೆ ಎನುತಲಿ
ತೀವಿ ಭಯ ಭಕ್ತಿಯಲಿ ಬಿನ್ನೈಸಿದನು ಬಸವಣ್ಣ ॥ ೪೧೮ ॥

ಹೆಚ್ಚಿದನು ಗುರು ಕರುಣದಿಂದಲಿ
ನಚ್ಚಿದನು ಗುರು ಬಸವ ರಾಜನ
ಮೆಚ್ಚಿದನು ಗುರು ತನ್ನ ಭಕ್ತಿಯ ಸವಿಯ ತನಿ ರಸವ ।
ಕೊಚ್ಚಿದನು ಗುರು ಮಱವೆಯೆಲ್ಲವ
ಮುಚ್ಚಿದನು ಗುರು ಭಿನ್ನ ಭಾವವ
ಬಿಚ್ಚಿದನು ಗುರು ಭವದ ಬಂಧವ ತನ್ನ ಭಕ್ತರಲಿ ॥ ೪೧೯ ॥

ಹಲವು ದಿನ ಮಱೆದೊಱಗಿ ನಿದ್ರೆಯ
ಬಲೆಯೊಳಗೆ ದುಸ್ಸ್ವಪ್ನ ಕೋಟಿಯ
ಕೊಲೆ ಗೆಲಸಕೊಳಗಾದವರನೆಬ್ಬಿಸುವ ತೆಱನಂತೆ ।
ತೊಲಗಿಸುವೆ ಸಂಸಾರ ಸ್ವಪ್ನವ
ತಿಳುಹಿ ನಿಜ ಪದವಿಗಳ ಕೊಡುವೆನು
ಸುಲಭದಲಿ ನಾನೆನ್ನ ಭಕ್ತರಿಗೆಂದ ಗುರು ರಾಯ ॥ ೪೨೦ ॥

ಎಂದು ಬಳಿಕವರವರಿಗುಚಿತಗ
ಳಿಂದಲವರವರನುಭವಂಗಳ
ಹೊಂದಿಕೆಯ ಹೋಱುವೆವು ಬೆಂಬಳಿವಿಡಿದು ಕರುಣದಲಿ ।
ಸಂದ ಸಮ್ಯಜ್ಞಾನ ಶಿರದ
ಲ್ಲಿಂದ ವಿಾಱಿದ ಸುಖದ ಪರಮಾ
ನಂದವಹ ಸಂಕೇತಗಳ ಕರುಣಿಸಿದ ಗುರು ರಾಯ ॥ ೪೭೧ ॥

ಮರಣವಿಲ್ಲದ ಜನನವಿಲ್ಲದ
ಕರಣವಿಲ್ಲದ ಕರ್ಮವಿಲ್ಲದ
ಪರವಿಹಂಗಳೊಳೊಡಲ ಬಿಟ್ಟಿಯು ಹೊಱೆಗಳನು ಹಱಿದ । ಶಿ.ತ್ರಿ. 124
ನಿರುಪಮದ ನಿಶ್ಚಿಂತ ನಿಶ್ಚಲ
ಪರಮ ನಿತ್ಯಾನಂದ ಪದವಿಯ
ಕರುಣಿಸಿದನಾ ಗುರು ಗುಹೇಶ್ವರ ಲಿಂಗ ಬಸವಂಗೆ ॥ ೪೭೨ ॥

ಭೂರುಹದ ತಾಯ್ಬೇರಿಗಮೃತದ
ನೀರನೆಱೆದಡೆ ಶಾಖೆಗಳಿಗೆ ಸು
ಸಾರ ವೇದಿಸುವಂತೆ ಬಸವನ ಭಕ್ತಿ ಬಂಧುಗಳು ।
ಹಾರವಿಸುವಂತೆಮ್ಮ ಬಸವನ
ಕಾರಣದಲೆಲ್ಲರಿಗೆ ತನ್ನಯ
ಸಾರ ನಿತ್ಯಾನಂದ ಪದವಿಯನಿತ್ತ ಗುರು ರಾಯ ॥ ೪೭೩ ॥

ಗತಿ ೧೫

## ಪಾರ್ವತಿಯ ಪ್ರಸನ್ನತೆ

ಶರಣ ಸಂದೋಹವನು ತನ್ನಯ
ಪರಮ ನಿತ್ಯಾನಂದ ಪದವಿಯ
ಲಿರಿಸಿ ತಾನಲ್ಲಿಂದ ಹೋಗುತಲವರ ಬೀಳ್ಕೊಟ್ಟು ।
ಕರುಣದಲಿ ಸಲೆ ಸಕಲ ಸಚರಾ
ಚರದೊಳಂತರ್ಯಾಮಿಯಾಗಿಯೆ
ಗುರು ಗುಹೇಶ್ವರ ಲಿಂಗನಿರ್ದನು ತನ್ನ ಲೀಲೆಯಲಿ ॥ ೪೭೪ ॥

ಗುರು ಗುಹೇಶ್ವರ ಲಿಂಗ ತನ್ನಯ
ಚರಣ ಭಕ್ತರ ಹೃದಯ ಕಮಲಾ
ಕರದಲಾಡುತ ಹಂಸೆಯಂತಿರುತಿರ್ದನೊಲಿದಿತ್ತ ।
ಹರುಷದಲಿ ಬಳಿಕತ್ತ ಪರಮೇ
ಶ್ವರನೊಳಾ ಕೈಲಾಸ ಪುರದಲಿ
ಸರಸ ಗೋಷ್ಠಿಯ ಮಾಡುತಂದಿಂತೆಂದಳಾ ಗಿರಿಜೆ ॥ ೪೭೫ ॥

ಎಲೆ ಸದಾಶಿವ ಎನ್ನ ಸಾತ್ವಿಕ
ಕಳೆಯ ನಿನ್ನಯ ಗಣವ ನೀನಂ
ದಿಳೆಯೊಳುದಯಿಸಿ ಅಲ್ಲಮ ಪ್ರಭು ಲಿಂಗನೊಲವಿಂದ ।
ತಿಳಿದು ನಿತ್ಯತ್ವವನು ಸಾಧಿಸಿ
ಕೊಳಲಿ ಎಂದನಿಬರನು ಕಳುಹಿದೆ
ಬಳಿಕಲವರೇನಾದರೆಂದಾಲಿಸಿದಳಾ ಗಿರಿಜೆ ॥ ೪೭೬ ॥

ಎನಲು ಬಸವಣ್ಣಾದಿ ಭಕ್ತರಿ
ಗನುಪಮದ ಪದವಾದುದನು ತಾ
ನೆನೆದ ನೆನಹಿಗೆ ಮುನ್ನ ಕಂಡನು ಶರ್ವ ಸರ್ವಜ್ಞ ।
ಮನವೊಲಿದು ಸಸು ಸಗೆಯ ಕಾಂತಿಯ
ನನೆಯುನಲರಿಸುತಾ ಹದನ ನಿಜ
ವನಿತೆಗೊರೆವುತಲಿರ್ದಸಾನಂದದಲಿ ಶಶಿ ಮೌಳಿ ॥ ೪೭೭ ॥

ದೇವಿ ಕೇಳ್ ನಿನ್ನಂಶದಾ ಮಹ
ದೇವಿ ಎನ್ನಂಶದ ಗಣಂಗಳು
ದೇವ ಕನ್ಯೆಯರೆಲ್ಲರಲ್ಲಮುನಿಂದ ಜಗವಱಿಯೆ ।
ತೀವಿ ತಮ್ಮಯ ನಾಮ ರೂಪು
ಕ್ರೀ ವಿಳಾಸವನಿಳುಹಿ ನಿತ್ಯ ನಿ
ರಾವಲಂಬದ ಸುಖಿಗಳಾದರು ಗಿರಿಜೆ ಕೇಳೆಂದ ॥ ೪೭೮ ॥

ಲೇಸು ಮತ್ತೆಯು ನಿಮ್ಮವರು ಕೈ
ಲಾಸ ಪದವಿಯ ಮಿಾಱಿ ನಿರುಪಮ
ವಾಸವನೆ ವೆಂಠಣಿಸಿ ಕೊಂಡರೆಲೈ ಮಹಾದೇವ ।
ಈ ಸುಖಂಗಳನಲ್ಲಮನೆ ನಿ
ರ್ಣೈಸಿ ಕೊಟ್ಟನು ಶರಣರಿಗೆ ಸಂ
ತೋಷವಿಂದೆನಗಾದುದೆಂದಳು ಬಳಿಕ ಗಿರಿಜಾತೆ ॥ ೪೭೯ ॥

ದೇವ ನೀನೆಂದಂತೆ ಘನ ಮಹಿ
ಮಾವಲಂಬನು ತಪ್ಪದೈ ಪ್ರಭು
ದೇವ ನಾಸದಸಱಿದೆಸೀಗಳು ನಿನ್ನ ಕರುಣದಲಿ ।
ದೇವ ನಿಮ್ಮ ನಿಜ ಸ್ವರೂಪಕ
ದಾವುದರಿದೆಂದೆನುತ ಪಾರ್ವತಿ
ದೇವಿ ಸಂತೋಷದಲಿ ನುಡಿದಳು ಬಳಿಕ ಶಂಕರಗೆ ॥ ೪೮೦ ॥

ಇಂತು ಸತತೋತ್ಸಾಹದಿಂದಲಿ
ಸಂತತಾನಂದೈಕ ರಸದಲಿ
ಕಾಂತೆ ಸಹಿತಿರುತಿರ್ದನೀಶ್ವರನತ್ತ ಬಳಿಕಿತ್ತ ।
ಚಿಂತಿತಾರ್ಥವನಖಿಳ ಭಕ್ತರ
ತಿಂತಿಣಿಗೆ ಕೊಡುತಲ್ಲಮ ಪ್ರಭು
ಸಂತಸದಲಿರುತಿರ್ದನೆಲ್ಲರ ಹೃದಯ ಕಮಲದಲಿ ॥ ೪೮೧ ॥

ಬಾಲರನು ವೃದ್ಧರನು ಭೂವಿಶಾ
ಪಾಲರನು ಬಡವರನು ಸದಮಲ
ಶೀಲರನು ಗುಣಿಗಳನು ಗೋ ಬ್ರಾಹ್ಮರನು ಭಕ್ತರನು ।
ಲೋಲತೆಯುಲಿ ಸಮಸ್ತ ಜಾತಿಯ
ಜಾಲವನು ಸರ್ವರನು ಕರುಣಿಸಿ
ಪಾಲಿಸುತಲಿರುತಿರ್ದನೆಮ್ಮಯ ಗುರು ಗುಹೇಶ್ವರನು ॥ ೪೮೨ ॥

ಹಿರಿಯರಿಗೆ ಕಿಱಿಯರಿಗೆ ಸದಮಲ
ಚರಿತರಿಗೆ ಚದುರರಿಗೆ ಸಜ್ಜನ
ಶರಣರಿಗೆ ಮುಗ್ಧರಿಗೆ ಸಕಲ ಕಲಾ ವಿದಗ್ಧರಿಗೆ ।
ಗರುವರಿಗೆ ಹಿತವರಿಗೆ ಸಚರಾ
ಚರರಿಗನುದಿನ ಕರುಣದಿಂದಲಿ
ವರದನಾಗಲಿ ಗುರು ಗುಹೇಶ್ವರ ಲಿಂಗ ಲೀಲೆಯುಲಿ ॥ ೪೮೩ ॥

# ಟಿ ಪ್ಪ ಣಿ

1. **ಪದ್ಯ ೧.** "ಶ್ರೀಮದಮಲಜ್ಞಾನ ಭಕ್ತಿ ಪ್ರೇಮ" ಈ ಪದ್ಯದಲ್ಲಿ ಕವಿ ನಿಷ್ಕಲಲಿಂಗ ಸ್ತುತಿಯನ್ನು ಮಾಡಿದ್ದಾನೆ. ಜ್ಞಾನ ಭಕ್ತಿ ಪ್ರೇಮ= ಜ್ಞಾನ ಮತ್ತು ಭಕ್ತಿಗಳೆರಡರಲ್ಲಿಯೂ ಪ್ರೇಮವುಳ್ಳವನು. ಭಕ್ತಿ ಜ್ಞಾನ ಗಳೆರಡಕ್ಕೂ ಕವಿ ಪ್ರಾಶಸ್ತ್ಯವನ್ನು ಕೊಟ್ಟಿದ್ದಾನೆ. ಭಕ್ತಿಯ ಪರಿಣಾಮ ಜ್ಞಾನ, ಜ್ಞಾನದ ಪರಿಣಾಮ ಭಕ್ತಿ—ಆಗಬೇಕೆಂದು ಕವಿಯ ಆಶಯ. ವೇದ ಪುರಾಣ ಶಾಸ್ತ್ರ ಸ್ತೋಮನುತ=ನಾಲ್ಕು ವೇದಗಳು, ಅಷ್ಟಾದಶ ಪುರಾಣಗಳು, ಸಿದ್ಧಾಂತ ಶಾಸ್ತ್ರಗಳಾದ ಆಗಮ ಸಮುದಾಯಗಳು ಇವುಗಳಿಂದ ಕೀರ್ತಿಸಲ್ಪಟ್ಟವನು. ಕವಿ ವೇದಾದಿಗಳ ಪ್ರಾಮಾಣ್ಯವನ್ನು ಅಂಗೀಕರಿಸುವವನಾಗಿಯೂ, ಈಶ್ವರನು ವೇದಪ್ರತಿಪಾದ್ಯನೆಂದು ಹೇಳು ವವನಾಗಿಯೂ ಇದ್ದಾನೆ. ನಾಮ ರೂಪ ಕ್ರೀ ಕಳಾಪ ವಿರಾಮ=ನಾಮ –ಹೆಸರು, ರೂಪ–ಆಕಾರಾದಿಗಳು, ಕ್ರೀ–ಕ್ರಿಯೆ ('ಕ್ರೀ' ಎಂಬ ಮೂಲ ಧಾತುರೂಪವನ್ನೇ ಕ್ರಿಯೆ ಎಂಬ ಅರ್ಥದಲ್ಲಿ ಕವಿ ಈ ಕಾವ್ಯದಲ್ಲಿ ಉಪಯೋಗಿಸಿದ್ದಾನೆ.)—ಹೆಸರು ಆಕಾರ ಕ್ರಿಯಾದಿಗಳು ಇಲ್ಲದ ಅವ್ಯಕ್ತ ಸ್ವರೂಪದಲ್ಲಿರತಕ್ಕವನು; ನಿಷ್ಕಲನಾದ ಪರವಸ್ತು. (ಪಿಡುಪರ್ತಿ ಸೋಮನಾಥ ಕವಿ "ನಾಮ ರೂಪಕ್ರಿಯಾ ನಟನಾಭಿರಾಮ" ಎಂದು ಸ್ತೋತ್ರಮಾಡಿದ್ದಾನೆ. ಭಕ್ತಾದಿಗಳಿಗೆ ಮುಕ್ತಿಯನ್ನು ಕೊಡುವುದ ಕ್ಕಾಗಿ ನಾಮ ರೂಪ ಕ್ರಿಯೆಗಳನ್ನು ತಾಳುವನೆಂದು ತಿಳಿಯಬೇಕು.) ಅನುಪಮ ದಿವ್ಯ ತೇಜೋ ವ್ಯೋಮ ಮೂರುತಿ = ಕೇವಲ ಜ್ಯೋತಿ ಸ್ವರೂಪನೂ ಸರ್ವವ್ಯಾಪಕನೂ ಆಗಿರುವ ಮೂರುತಿ. ("ನಿರಾಮಯಂ ನಿರಾಕಾರಂ ನಿರ್ಗುಣಂ ನಿರ್ಮಲಂ ಶಿವಮ್। ಜ್ಯೋತಿರ್ಮಯಂ ನಿರಾಲ ಮ್ಬಂ ಸರ್ವಾಧಾರ ಮನೂಪಮಮ್॥" ಎಂದು ಸೂಕ್ಷ್ಮ ತಂತ್ರದ ಆರನೆಯ ಪಟಲ ಹನ್ನೊಂದನೆಯ ಶ್ಲೋಕದಲ್ಲಿ ಹೇಳಿದೆ. ಸಿದ್ಧಾಂತ

ಸಾರಾವಳಿ ಮೊದಲನೆಯ ಶ್ಲೋಕದಲ್ಲಿ, "....ಜ್ಯೋತಿಷ್ಮತಾಂ ದ್ಯೋತಕಂ। ವ್ಯೋಮ ವ್ಯಾಪಿ ಪರಂ ಶಿವಾಖ್ಯಮಕಲಂ ಜ್ಯೋತಿಃ ಪ್ರಪದ್ಯೇ ಧಿಯಾ॥" ಎಂದು ನಿಷ್ಕಲಲಿಂಗದ ಸ್ವರೂಪವನ್ನು ಹೇಳಿದೆ. ಚಾಮರಸನು ಆ ಲಕ್ಷಣಕ್ಕನುಗುಣವಾಗಿಯೇ ನಿಷ್ಕಲಲಿಂಗದ ಸ್ತೋತ್ರವನ್ನು ಮಾಡಿದ್ದಾನೆ. ವೀರಶೈವಾಮೃತ ಪುರಾಣ, ಕಾಂಡ I, ಪುಟ 44ರಲ್ಲೂ ಇದರ ಲಕ್ಷಣವನ್ನು ಹೇಳಿದೆ.) ಗುರು ಗುಹೇಶ್ವರ ಲಿಂಗ=ಇದು ಅಲ್ಲಮ ಪ್ರಭುವಿನ ಪರವಾಗಿಯೂ, ಪರಶಿವನ ಪರವಾಗಿಯೂ ಇದೆ. ಲೋಕಾನುಗ್ರಹಾರ್ಥವಾಗಿ ಪರಶಿವನು ಮೊದಲು ವೇದಗಳನ್ನು ಚತುರ್ಮುಖ ಬ್ರಹ್ಮನಿಗೂ, ಪುರಾಣಗಳನ್ನು ಪ್ರಮಥರಿಗೂ, ಆಗಮಗಳನ್ನು ವಿದ್ಯೇಶ್ವರಾದಿಗಳಿಗೂ ಬೋಧಿಸಿ ಜಗದ್ಗುರುವಾಗಿಯೇ ಇದ್ದಾನೆ: ಗುಹೇಶ್ವರ–ಎಲ್ಲರ ಹೃದಯ ಗುಹೆಯಲ್ಲಿಯೂ ಇರುವವನಾಗಿ ಗುಹೇಶ್ವರ ನಾಮಾಂಕಿತನಾಗಿದ್ದಾನೆ; ಲಿಂಗ–ಎಂದರೆ ಪರಬ್ರಹ್ಮ, ಪರಶಿವ ಅಥವಾ ಪರವಸ್ತು. "ತಸ್ಮಾಲ್ಲಿಙ್ಗಂ ಪರಂ ಬ್ರಹ್ಮ ಸಚ್ಚಿದಾನನ್ದ ಲಕ್ಷಣಮ್" ಎಂದು ಸೂಕ್ಷ್ಮತಂತ್ರ, ಆರನೆಯ ಪಟಲ, ಶ್ಲೋಕ 14ರಲ್ಲೂ "ಜ್ಯೋತಿರ್ಮಯಂ ಪರಂ ಲಿಙ್ಗಂ ಶ್ರುತಿರಾಹ ಶಿವಾತ್ಮಕಂ" ಎಂದು ಶಿವಾನುಭವ ಸೂತ್ರದ ವ್ಯಾಖ್ಯಾನ ಪುಟ 25ರಲ್ಲೂ ಹೇಳಿದೆ. ಭೂಲೋಕದಲ್ಲಿ ಭಕ್ತಾದಿಗಳನ್ನು ಉದ್ಧಾರಮಾಡುವುದಕ್ಕಾಗಿ ಬೋಧೆಮಾಡಲು ಹೊರಟ ಅಲ್ಲಮ ಪ್ರಭು ಗುರುವೆನಿಸಿಕೊಂಡನು; ಗುಹೇಶ್ವರಲಿಂಗ—ಗುಹೇಶ್ವರನೆಂಬ ಲಿಂಗ ವ್ಯಕ್ತವನು ಅಲ್ಲಮಪ್ರಭು. (ಗುಹೇಶ್ವರ ಎಂಬ ಅಂಕಿತವು ಕೆಲವು ಕಡೆಗಳಲ್ಲಿ ಗೊಗ್ಗೇಶ್ವರ, ಗೋಗೇಶ್ವರ, ಗೋಹೇಶ್ವರ, ಗೊಹೇಶ್ವರ ಎಂದು ರೂಪಾಂತರವನ್ನು ಹೊಂದಿದೆ. ಅಲ್ಲಮಪ್ರಭು ಜನಿಸಿದಾಗ ಬಳ್ಳಿಗಾವೆಯ ಗೊಗ್ಗೇಶ್ವರಾಲಯದಿಂದ ಪ್ರಸಾದವನ್ನು ತಂದುಕೊಟ್ಟಂತೆ ಪ್ರಭುದೇವರ ರಗಳೆಯಲ್ಲಿದೆ. ಪರಿಶಿಷ್ಟ II ನೋಡಿ.) ಗುಹೇಶ್ವರ ಎಂಬ ಅಂಕಿತವು ಅಲ್ಲಮಪ್ರಭುವಿನ ವಚನಗಳಲ್ಲಿ ದೊರೆಯುತ್ತದೆ.

ಪರವಸ್ತು—ನಿಷ್ಕಲ, ಸಕಲ ನಿಷ್ಕಲ ಮತ್ತು ಸಕಲ ಎಂದು ಮೂರು ವಿಧವಾಗಿ ಇರುವುದೆಂದು ಸಿದ್ಧಾಂತಕಾರರು ಹೇಳುತ್ತಾರೆ. ಸಚ್ಚಿದಾನಂದ ಸ್ವರೂಪವಾಗಿ ನಾಮ ರೂಪ ಕ್ರಿಯಾದಿಗಳು ಇಲ್ಲದಿರುವುದೇ ನಿಷ್ಕಲ.

ಮನಸ್ಸಿಗೆ ಮಾತ್ರ ಗೋಚರವಾಗುವ ಸೂಕ್ಷ್ಮರೂಪವೇ ಸಕಲ ನಿಷ್ಕಲ. ಇಂದ್ರಿಯಾನುಭವಕ್ಕೆ ಬರುವ ಸ್ಥೂಲರೂಪವೇ ಸಕಲ.

2. **ಪದ್ಯ ೨.** "ಅಲ್ಲಮಪ್ರಭು ಸಂಪ್ರದಾಯದ ಸಲ್ಲಲಿತ ಸನ್ಮಾರ್ಗವನು", ಇತ್ಯಾದಿ. ವೀರಶೈವರಲ್ಲಿ "ಸಂಪ್ರದಾಯಗಳು" ಎಂಬುವು ಅನೇಕವಿವೆ. ಸಾಮಾನ್ಯವಾಗಿ ಒಂದೊಂದು ಮತಕ್ಕೂ ಅನ್ವಯಿಸಿ, ಅಥವಾ ಪ್ರಸಿದ್ಧರಾದ ಗುರುಗಳನ್ನು ಅನ್ವಯಿಸಿ, ಸಂಪ್ರದಾಯಗಳನ್ನು ಹೆಸರಿಸುವದುಂಟು. "ಬಸವಣ್ಣನ ಸಂಪ್ರದಾಯದ ಕಂದ ನೋಡ" (ಶೂ.ಸಂ., ಸಿದ್ಧವೀರಣಾರ್ಯ ರಚಿತ, ಪುಟ ೧೬೦.) "ವೀರಭದ್ರದೇವರ ಸಾಂಪ್ರದಾಯೋದ್ಭವರಾಗಿ ತನ್ನ ನಿಜವನರಿದು" (ಶೂ.ಸಂ., K. A. 105, ವೈ. ಓ. ಲೈ. ಕೆಂಚವೀರಣ್ಣೊಡೆಯರುಗಳು ರಚಿಸಿದ್ದು, ಪುಟ 1.) "ಮೇಲಣ ಗವಿಯ ಶಾಂತಮಂಜೇಶ ಗುರು ಸಂಪ್ರದಾಯವದೆಂತೆನೆ" (ವೀರಶೈವಾಮೃತ ಮಹಾಪುರಾಣ, ಕಾಂಡ 1, ಸಂಧಿ 1, ಪದ್ಯ 54)—ಇವುಗಳಲ್ಲೆಲ್ಲ 'ಸಂಪ್ರದಾಯ' ಎಂದರೆ ಗುರುಪೀಠದ ವಂಶವೃಕ್ಷ ಎಂದು ಅರ್ಥವಾಗುತ್ತದೆ. ಸಂಪ್ರದಾಯವನ್ನು ವ್ರತಕ್ಕೆ ಆಚಾರಾದಿಗಳಲ್ಲಿ ಬರುವ ವ್ಯತ್ಯಾಸ ಎಂದು ರೂಢಿಯಾಗಿ ಅರ್ಥಮಾಡುವದುಂಟು. ಅಷ್ಟಮಿಯ ತಿಥಿಯನ್ನು ಮುಖ್ಯವಾಗಿಟ್ಟುಕೊಂಡು ಶ್ರೀಕೃಷ್ಣನ ಹುಟ್ಟಿದ ಹಬ್ಬವನ್ನು ಮಾಡುವವರು ಕೆಲವರು, ರೋಹಿಣೀ ನಕ್ಷತ್ರವನ್ನು ಮುಖ್ಯವಾಗಿಟ್ಟುಕೊಂಡು ಮಾಡುವವರು ಕೆಲವರು—ಹೀಗೆ ಭಿನ್ನ ಸಂಪ್ರದಾಯದವರು ಎಂದು ಹೇಳಬಹುದು. ಆದರೆ ಈ ಪದ್ಯದಲ್ಲಿ ಸಂಪ್ರದಾಯಕ್ಕೆ ಒಂದು ವಿಶೇಷವಾದ ಅರ್ಥವಿರುತ್ತದೆ. ಬಸವಣ್ಣನವರ ಪಂಥದಲ್ಲಿ ಭಕ್ತಿಗೆ ಪ್ರಾಶಸ್ತ್ಯ, ಪ್ರಭುವಿನ ಪಂಥದಲ್ಲಿ ಜ್ಞಾನ ಮತ್ತು ವೈರಾಗ್ಯಗಳಿಗೆ ಪ್ರಾಶಸ್ತ್ಯ. ಬಸವಣ್ಣನವರು ಹೆಚ್ಚು ಕಡಮೆ "ಅಂಗದ ಮೇಲೆ ಲಿಂಗವುಳ್ಳವರನ್ನೆಲ್ಲ ಸಂಗಮನಾಥನೆಂಬೆ" ಎನ್ನತಕ್ಕವರು. ಅಲ್ಲಮಪ್ರಭು "ಸದ್ಭಕ್ತಿ ಸದಾಚಾರವಿಲ್ಲದ ನಿಜ ಗುರುವುಂಟೇ ಮರುಳೇ" ಎಂದು ಮುಂತಾಗಿ ಬರೆಹಚ್ಚಿ ಹೇಳತಕ್ಕವನು. "ಅದ್ವೈತವೆಂಬ ಶಿಶುವೆನ್ನ ಕರಸ್ಥಲವ ನೋಂಕಲೊಡನೆ ಎನ್ನ ತನ್ನಂತೆ ಮಾಡಿತ್ತಾಗಿ ಎನ್ನ ನಾನೆಂಬ ವಿಚಾರವ ಅರತುಹೋಯಿತ್ತು ಕೇಳಾ, ಮತ್ತೆ ಅನ್ಯವಿಚಾರವನೆಂತು ಅರಿಯೆ".... (ಶೂ.ಸಂ., ಸಿದ್ಧವೀರಣಾರ್ಯ

ಸದು, ಪುಟ ೧೫೧) ಎಂಬ ಭಾವಕ್ಕೆ ತಕ್ಕಂತೆ ಆತನ ಉಪದೇಶ. ಕವಿ ನಿರಾಭಾರಿ ವೀರಶೈವ ಸಂಪ್ರದಾಯವನ್ನು ಪ್ರಭುಲಿಂಗಲೀಲೆಯಲ್ಲಿ ವಿವರಿಸುವವನಾಗಿದ್ದಾನೆ.

3. **ಪದ್ಯ ೫.** "ಸತ್ತವರ ಕಥೆಯಲ್ಲ, ಜನನದ ಕುತ್ತದಲಿ ಕುದಿ ಕುದಿವ ಕರ್ಮದ ಕತ್ತಲೆಗೆ ಸಿಲುಕುವರ ಸೀಮೆಯ ಹೊಲಬು ತಾನಲ್ಲ", ಇತ್ಯಾದಿ. ಇದು ಸಾಮಾನ್ಯರಾದ ಮನುಷ್ಯರ ಅಥವಾ ದೇವತೆಗಳ ರಂಜಕ ಕಾವ್ಯಗಳಲ್ಲ ಎಂದು ಅಭಿಪ್ರಾಯ. ಸತ್ತವರು ಹುಟ್ಟುವರು, ಹುಟ್ಟಿದವರು ಸಾಯುವರು; ಈ ಜನನ ಮರಣಾತ್ಮಕ ಸಂಸಾರದಲ್ಲಿ ಲೋಕದ ಜನವೆಲ್ಲ ತೊಳಲುತ್ತಿರುವುದು. ಶಿವಶರಣರಾದರೋ ಲಿಂಗಾಂಗ ಸಾಮರಸ್ಯವನ್ನು ಪಡೆದು ಜೀವನ್ಮುಕ್ತರೆನಿಸುವುದರಿಂದ, ಅವರಿಗೆ ಪುನರ್ಜನನ ಮರಣಾದಿಗಳಿಲ್ಲವೆಂದು ಕವಿಯ ಅಭಿಪ್ರಾಯ. ವೀರಶೈವ ಕವಿಗಳು ದೇವತೆಗಳನ್ನೂ ಮನುಷ್ಯರನ್ನೂ ಕುರಿತು ಕಾವ್ಯಗಳನ್ನು ಬರೆಯುವುದಿಲ್ಲವೆಂದು ಹೇಳಿಕೊಳ್ಳುವುದುಂಟು.

ಕಂ॥ "ರಸೆಯೊಳ್ ರಸನತ್ಕವಿತೆಯ । ನುಸಿರಲ್ಪಡೆದಸಮನಯನನಂ ಪೊಗಳದೆ ಮಾ ॥ ನಿಸರಂ ಸುರರಂ ಪೊಗಳ್ವುದು । ಕಸವರಮಂ ಕಳೆದು ಕಸವನಾಂತವೊಲಕ್ಕುಂ ॥" "ಅದರಿಂದೆ ಮಹಿತ ಮಹಿಮಾ । ಸ್ಪದನಂ ಶಿವನಂ ತದೀಯ ಶರಣವ್ರಜಮಂ ॥ ಪಡೆದು ಮುದಮೊದವೆ ಬಲ್ಲಂ। ದದೆ ನುತಿಪೆಂ ನುತಿಸೆನುಳಿದ ಸುರರಂ ನರರಂ ॥" ಎಂದು ಷಡಕ್ಷರ ಕವಿ ರಾಜಶೇಖರವಿಳಾಸದಲ್ಲಿ ಹೇಳಿದ್ದಾನೆ.

4. **ಪದ್ಯ ೧೨.** "ಶಶಿಯ ಶೀತಳದಂತೆ....", ಇತ್ಯಾದಿ. ಶಿವ ಮತ್ತು ಶಕ್ತಿ ಅವಿನಾಭಾವದಿಂದ ಯಾವಾಗಲೂ ಸೇರಿಕೊಂಡಿರುತ್ತಾರೆಂಬ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವನ್ನು ಕವಿ ಇಲ್ಲಿ ನಿರೂಪಿಸಿರುತ್ತಾನೆ. ಮತ್ತು 'ಅವಿನಾಭಾವ'ವೆಂಬ ಪದದ ಅರ್ಥವನ್ನು ಉದಾಹರಣೆಗಳಿಂದ ಸ್ಪಷ್ಟಗೊಳಿಸಿದ್ದಾನೆ. ಶಶಿಯ ಶೀತಳದಂತೆ=ಚಂದ್ರನೂ ಶೈತ್ಯವೂ—ಎಂದರೆ ಚಂದ್ರನಲ್ಲಿ ಹೇಗೆ ಶೈತ್ಯವು ಎಡೆಬಿಡದೆ ಸೇರಿಕೊಂಡಿರುತ್ತದೋ ಹಾಗೆ, ಕರ್ಪುರದೆಸೆವ ಕಂಪುಗಳಂತೆ=ಕರ್ಪುರವೂ ಅದರಲ್ಲಿ ಸುವಾಸನೆಯೂ ಹೇಗೆ ಎಡೆಬಿಡದೆ ಸೇರಿಕೊಂಡಿರುತ್ತದೋ ಹಾಗೆ. (ಉಳಿದವನ್ನೂ

ಹೀಗೆಯೇ ಅರ್ಥಮಾಡಬೇಕು.) ಲಸಿತ=ಪ್ರಕಾಶಮಾನವಾದ, ಮಿಥುನಾಳಾಪ=ಶಿವಶಕ್ತಿಗಳೆಂಬ ದ್ವಂದ್ವವು, ಹೊಱಗಾಣಿಸದೆ=ಪ್ರಕಟವಾಗದೆ. ಶಿವಶಕ್ತಿಯರ ಅವಿನಾಭಾವವನ್ನು "ಪುಷ್ಪಗಂಧವದುಜ್ಜ್ವಲಾ" ಎಂದು ಉಪಮಾನದ ಮೂಲಕ ಸಿದ್ಧಾಂತಶಿಖಾಮಣಿಯ ವ್ಯಾಖ್ಯಾನದಲ್ಲಿಯೂ (ಪುಟ 5), "ಯಥಾ ಚಂದ್ರೇ ಸ್ಥಿರಾ ಜ್ಯೋತ್ಸ್ನಾ ವಿಶ್ವವಸ್ತುಪ್ರಕಾಶಿನೀ । ತಥಾ ಶಕ್ತಿರ್ವಿಮರ್ಶಾತ್ಮಾ ಪ್ರಕಾಶೇ ಬ್ರಹ್ಮಣಿ ಸ್ಥಿತಾ॥" ಎಂದು ಶಿವಾನುಭವಸೂತ್ರ ವ್ಯಾಖ್ಯಾನದಲ್ಲಿಯೂ (ಪುಟ ೨೦–೨೧), "ಶಿವನಿಲ್ಲದಾ ಶಕ್ತಿಯಿಲ್ಲ ಶಕ್ತಿಯ ತೊಲಗಿ । ಶಿವನಿಲ್ಲ ಪುಷ್ಪ ಗಂಧಂ ಮಾರುತಾಂಬರಂಗಳ ತೆರಂ ಪರಿಭಾವಿಸೆ", ವೀರಶೈವಾಮೃತ ಮಹಾ ಪುರಾಣ, ಮೊದಲನೆಯ ಕಾಂಡ 8ನೆಯ ಸಂಧಿ, ಪದ್ಯ 7ರಲ್ಲಿಯೂ (ಇದಕ್ಕೆ ಸಂಸ್ಕೃತ ಶ್ಲೋಕ "ನ ಶಿವೇನ ವಿನಾ ಶಕ್ತಿರ್ನ ಶಕ್ತಿರಹಿತಶ್ಶಿವಃ । ಪುಷ್ಪಗಂಧಾ ವಿವಾನ್ಯೋನ್ಯಂ ಮಾರುತಾಂಬರಯೋರಿವ" ಎನ್ನುವುದನ್ನೂ 18ನೆಯ ಪದ್ಯದ ತರುವಾಯ ಕೊಟ್ಟಿದೆ.) ನಿಜಗುಣ ಶಿವಯೋಗಿಯೂ ಇದೇ ಅಭಿಪ್ರಾಯಕ್ಕೆ ಹೀಗೆ ಹೇಳಿದ್ದಾನೆ. "ಇಂಗಡಲೊಳಿಂಪು ಬೆಳ। ದಿಂಗಳೊಳು ತಂಪು ಕುಸು। ಮಂಗಳೊಳು ಕಂಪು ಬೆರೆದಂತೆ ಪರಮನೊಳು। ಪಿಂಗದಗಸುತೆಗೆ ನತನಪ್ಪೆಂ॥"

5. **ಪದ್ಯ ೩೭.** "ದೇವ ದಾನವ ಮಾನವರುಗಳ ಡಾವಣಿಯ ದನ ಮಾಡಿ ಕಟ್ಟುವ ಭಾವೆ", ಇತ್ಯಾದಿ. ದನಗಳನ್ನು ಸಾಲಾಗಿ ಒಂದೇ ಹಗ್ಗದ ಭಾಗಗಳಿಗೆ ಕಟ್ಟಿದ್ದರೆ, ಅವುಗಳನ್ನು ಡಾವಣಿಯ ದನ ಎಂದು ಕರೆಯುತ್ತಾರೆ. ದೇವ ದಾನವ ಮಾನವರುಗಳೆಲ್ಲ ಮಾಯಾಪಾಶದಲ್ಲಿ ಕಟ್ಟಲ್ಪಡುವುದರಿಂದ ಅವರೆಲ್ಲ ಡಾವಣಿಯ ದನವೆಂದೂ, ಕಟ್ಟಿರುವ ಹಗ್ಗ ಮಾಯೆಯೆಂದೂ ತಿಳಿಯತಕ್ಕದ್ದು.

6. **ಪದ್ಯ ೧೧೯.** "ಈತನಾರೆಂಬಡೆ ಸದಾ ಸಾಕ್ಷಾತನು....", ಇತ್ಯಾದಿ. ಸಾಕ್ಷಾತನು=(ಶಿವಜ್ಞಾನಿಗಳಿಗೆ) ಗೋಚರನು. "ಅವರ್ಣೋ ವರ್ಣಸಂಯುಕ್ತೋ ವಿರೂಪೀ ವಿಶ್ವರೂಪಭೃತ್ । ಪರಮಾತ್ಮಾ ಪರಬ್ರಹ್ಮ ಕಶ್ಚಿದ್ದೇವೋಽಸ್ತಿ ಚಿಚ್ಛಿವಃ ॥" (ಶಿವಯೋಗ ಪ್ರದೀಪಿಕೆ ೧ನೆಯ ಪಟಲ ಶ್ಲೋಕ ೨೦). ಅಸ್ತಿ–ಉಂಟು ಎಂಬ ಅರ್ಥದಲ್ಲಿ ಹೇಗೋ ಹಾಗೆ ಗೋಚರನು.

ಅವನಿ, ಜಲ, ಅನಲ, ಅನಿಲ, [ಅಭ್ರ] ಎಂಬ ಪಂಚಭೂತಾತ್ಮಕ ದೇಹವಿಲ್ಲದವನು, ಜಾತನಲ್ಲ=ಹಿಂದೆ ಇಲ್ಲದೆ ಈಗ ಹೊಸತಾಗಿ ಹುಟ್ಟಿದವನಲ್ಲ. ಅಜಾತನಲ್ಲ=ಹುಟ್ಟದೇ ಇರುವವನೂ ಅಲ್ಲ, ಎಂದರೆ ಚಿಚ್ಛಕ್ತಿ ಸಮೇತನಾಗಿ ಸಕಲನಾಗದೇ ಇರತಕ್ಕವನಲ್ಲ. ಉಪಮಾತೀತನು ಈ ಶಿಶು=ಪರಬ್ರಹ್ಮವೇ ಈ ಶಿಶು. "ಏಕಮೇವಾದ್ವಿತೀಯಂ" ಎಂಬರ್ಥದಲ್ಲಿ ಇನ್ನೊಬ್ಬನ ಸರಿಹೋಲಿಕೆ ಎಂದು ಹೇಳಿಸಿಕೊಳ್ಳದವನು.

7. **ಪದ್ಯ ೧೨೦** "ಮಾಯೆಯುಗಲಿದ ಬಳಿಕ..", ಇತ್ಯಾದಿ. ಈ ಪದ್ಯದಲ್ಲಿ ಮಾಯೆ ಎನ್ನುವುದಕ್ಕೆ ಮಾಯಾದೇವಿ ಎಂದು ಒಂದು ಅರ್ಥವನ್ನೂ, ಮಾಯಾಶಕ್ತಿ ಎಂದು ಇನ್ನೊಂದು ಅರ್ಥವನ್ನೂ ಇಟ್ಟುಕೊಳ್ಳಬೇಕು.

ಮಾಯಾದೇವಿಯನ್ನು ಬಿಟ್ಟು ವಿರಹವನ್ನು ಅನುಭವಿಸುವುದಾದರೆ ಆ ವಿರಹ ದುಃಖದ ದಶಮಾವಸ್ಥೆ ಮರಣವೇ ಸಂಘಟಿಸುವುದೆಂದು ಒಂದು ಅಭಿಪ್ರಾಯ. ಅಲ್ಲಮಪ್ರಭುವಿನ ಮಾತುಗಳಿಂದ ಈ ಅಭಿಪ್ರಾಯ ಮಾತ್ರ ಸಕಳಿಗೆ ಕಂಡುಬರುತ್ತದೆ.

ಆದರೆ ಅಲ್ಲಮಪ್ರಭು ಶಿವತತ್ತ್ವದ ಪರವಾಗಿಯೂ ಅರ್ಥವಿಟ್ಟು ಮಾತನಾಡಿದ್ದಾನೆ. ಮಾಯಾಶಕ್ತಿ ಬಿಟ್ಟುಹೋಗುವುದೆಂದರೇನು? ಅದು ಬಿಟ್ಟುಹೋದರೆ ದೇಹ ವ್ಯಾಪಾರವೆಲ್ಲಿಯದು? ಎಂದು ಹಾಸ್ಯಗರ್ಭಿತವಾಗಿ ಅಲ್ಲಮಪ್ರಭು ಮಾತನಾಡಿದ್ದಾನೆ. ಮಾಯಾಶಕ್ತಿಯಿಂದ ಮುಕ್ತನಾದರೆ ಸಮಾಧಿಸ್ಥಿತಿಯುಂಟಾಗಬಹುದು, ಅಥವಾ ಜೀವನ್ಮುಕ್ತಿಸ್ಥಿತಿಯುಂಟಾಗಬಹುದು.

ಸಮಾಧಿಸ್ಥನಾದವನಿಗೆ, ಕಾಯವುಂಟೇ=ದೇಹವಿರುವುದೇ–ಎಂದರೆ ಇರುವುದಿಲ್ಲ (ಅದರ ತಿಳಿವಳಿಕೆ ಇರುವುದಿಲ್ಲ) ಎಂದು ಅಭಿಪ್ರಾಯ. ಪ್ರಾಣವಾಗಿಹ ವಾಯು ನಡೆವುದೆ=ಪ್ರಾಣವಾಯು ಚಲಿಸುವುದಿಲ್ಲ. ಸಮಾಧಿಸ್ಥಿತಿಯಲ್ಲಿರುವಾಗ ವಾಯು ಸಂಚಾರವೂ ರಕ್ತ ಸಂಚಾರವೂ ಎಲ್ಲವೂ ನಿಂತುಹೋಗಿರುತ್ತವೆ. ಕಾಲು ಕೈ ಕಣ್ಣುಗಳು ಮಿಡುಕುವುವೆ=ಚಲಿಸುವುವೆ? ಇಲ್ಲ ಎಂದು ಅಭಿಪ್ರಾಯ, ಸ್ತಬ್ಧವಾಗಿರುತ್ತವೆ ಎಂದು ತಿಳಿಯತಕ್ಕದ್ದು. ಬಾಯಸುಡಿ, ಪೆವಹಾರ, ಬೆಸನಗಳಾಯತವು—ಇವುಗಳಾವುವೂ ಇರುವು

ದಿಲ್ಲ. ಸಾಯದಂತಿರೆ ಸತ್ತೆ=ಸಾಯಲಿಲ್ಲ, ಆದರೆ ಸತ್ತ ಚಿಹ್ನೆಗಳೆಲ್ಲವೂ ಇವೆ, ಸಮಾಧಿಸ್ಥಿತಿಯಲ್ಲಿ ಹೀಗೆ ಇರುತ್ತದೆ. ಪುನಃ ಪ್ರಜ್ಞೆ ಬಂದಾಗ ವಾಯು ಸಂಚಾರ, ರಕ್ತಸಂಚಾರಗಳು ಇರುತ್ತವೆ, ಕೈ ಕಾಲುಗಳು ಆಡುತ್ತವೆ.

8. **ಪದ್ಯ ೧೨೦.** "ಬಲ್ಲಡೀ ಶಿಶುವೇತಱಿತೊಳಗಿಹನಲ್ಲ", ಇತ್ಯಾದಿ. ಕಾಣಿಸಿಕೊಳ್ಳುವುದರಿಂದ ಇದ್ದಾನೆ, ಎಂಬ ಭಾವನೆಗೆ ವಿಷಾರಿದವನು. ಹೊಱಗಿಹನಲ್ಲ=ಕಾಣಿಸಿಕೊಳ್ಳದೆ ಇರುವುದರಿಂದ ಇಲ್ಲ, ಎಂಬ ಭಾವನೆಗೆ ವಿಷಾರಿದವನು. ಭಾವಿಸಲು ಇಲ್ಲದೆ ಇರುತಿಹನು ಅಲ್ಲ=ಮೊದಲು ಇಲ್ಲದೆ ಹೊಸದಾಗಿ ಬಂದು ಸೇರಿಕೊಂಡವನು ಅಲ್ಲ, ಎಂದರೆ ಅನಾದಿ. "ಮಾಯಾ ಸಮೇತಸ್ಸಕಲೋ ನಿಷ್ಕಲಃ ಕೇವಲಃ ಪರಃ । ಅಸ್ತಿ ನಾಸ್ತಿ ದ್ವಯಾತೀತೋ ವಾಙ್ಮನೋಽಗೋಚರಾತ್ಮಕಃ ॥" ಎಂಬ ಶ್ಲೋಕಾಭಿಪ್ರಾಯವನ್ನು ಕವಿಯು ಹೆಚ್ಚುಕಡಮೆ ಅನುಸರಿಸಿದ್ದಾನೆ; (ಶಿವಯೋಗಪ್ರದೀಪಿಕೆ ಪಟಲ 1, ಶ್ಲೋಕ ೧೯). "ನಾಂತಸ್ಥಂ ನ ಬಹಿರ್ವ್ಯಾಪ್ತಮಪರೋಕ್ಷಸ್ವರೂಪಕಂ। ಆಕಾಶಾಭ್ಯಂತರಾಕಾಶಮಂತರ್ಲಕ್ಷ್ಯಂ ತದೇವ ಹಿ ॥" (ಶಿವಯೋಗಪ್ರದೀಪಿಕೆ, ಪಟಲ 5, ಶ್ಲೋಕ ೨) ಇದರ ಅಭಿಪ್ರಾಯವನ್ನೂ ಕವಿ ಮನಸ್ಸಿನಲ್ಲಿಟ್ಟುಕೊಂಡಿರಬಹುದು.

9. **ಪದ್ಯ ೧೨೮.** "ಬಗೆಯೆ ನಿರಹಂಕಾರ ಸುಜ್ಞಾನಿಗಳ ಮೇಳವ ಸೊಲ್ಲದಾ ಪ್ರಭುವಗಲಿ ತಾನಿರ ಬಲ್ಲನೇ", ಇತ್ಯಾದಿ. ನಿರಹಂಕಾರ–ಅಹಂಭಾವವನ್ನು ತೊರೆದವನು, ಎಂದರೆ 'ಸೋಹಂ', 'ನಾಹಂ', 'ಕೋಹಂ'—ಎಂಬ ಮೂರು ಬಗೆಯ ಹಮ್ಮುಗಳಿಲ್ಲದವನು. ಆ ಶಿವನೆ ನಾನು ಎಂಬ ಭಾವ "ಸೋಹಂ". ಈ ಹಮ್ಮು ಇದ್ದರೆ ಶಿವ ಜೀವರಿಗೆ ಭೇದವೇ ತೋರುವುದರಿಂದ, ಈ ಸೋಹಂ ಭಾವವೂ ಅಳಿಯಬೇಕೆಂದು ಅರ್ಥ. ಶರೀರಾದಿಗಳು ನಾನಲ್ಲ ಎಂಬ ಭಾವವೇ "ನಾಹಂ". ಈ ಹಮ್ಮು ಅಳಿದರೆ ನಾನು ಜ್ಞಾನಿ ಎಂಬ ಅಹಂಕಾರವೂ ತೊಲಗುವುದು. ನಾನು ಯಾರು? ಎಂದು ವಿಚಾರಪರನಾಗಿ ಆತ್ಮಸ್ವರೂಪವನ್ನು ತಿಳಿಯ ಬಯಸುವುದೇ "ಕೋಹಂ" ಎಂಬ ಹಮ್ಮು.

["ಸೋಹಂ, ನಾಹಂ ಕೋಹಂ" ಎಂಬ ಹಮ್ಮುಗಳನ್ನು ಬೇರೆ ವಿಧವಾಗಿ ವಿವರಿಸುವುದೂ ಉಂಟು. ಈ ಶರೀರವೆ ನಾನು ಎಂಬ ಭಾವ

"ಸೋಽಹಂ". ಇದರಿಂದ ಮಡದಿಮಕ್ಕಳಲ್ಲಿ ವ್ಯಾಮೋಹಾದಿಗಳುಂಟಾಗುತ್ತವೆ. ಈ ಶರೀರ ಸಂಬಂಧಿಗಳು ದುಃಖಕಾರಣರು; ಶರೀರವು ನಾನಲ್ಲ ಎಂದು ತಿಳಿದು ಸ್ವರ್ಗಸುಖಕ್ಕಾಗಿ ಪ್ರಯತ್ನಿಸುವುದು "ನಾಹಂ" ಎಂಬ ಹಮ್ಮು. ನಾನು ಯಾರು? ಎಂದು ಆತ್ಮಜ್ಞಾನಪರಾಯಣನಾಗುವುದು "ಕೋಽಹಂ" ಎಂಬ ಹಮ್ಮು. ಈ ರೀತಿ ಮನೋವಿಜಯ ಕಾವ್ಯ, ಆರನೆಯ ಪ್ರಕರಣ, ಪದ್ಯಗಳು 15, 16, 17ರಲ್ಲಿ ಹೇಳಿದೆ.] ಐಕ್ಯಸ್ಥಲದ ಲಕ್ಷಣದಲ್ಲಿ "ನಾಹಂ ಕೋಽಹಂ ಸೋಽಹಂ ಎಂಬ ಭಾವ ವಿರಹಿತ ನಾಗಿರ್ದನು" ಎಂದು ತೋಂಟದಾರ್ಯರ ವಚನವಿದೆ. ಆದುದರಿಂದ ಈ ಮೂರು ಬಗೆಯ ಅಹಂಕಾರಗಳನ್ನು ತೊರೆದವನು ಲಿಂಗಸ್ವರೂಪಿಯಾಗಿರುತ್ತಾನೆ. ಸುಜ್ಞಾನಿ=ಜ್ಞಾನಿ–ಜಂಗಮವು ಜ್ಞಾನಸ್ವರೂಪ. ಸುಜ್ಞಾನಿ ಜಂಗಮರೂಪವೇ ಆಗಿರುವುದರಿಂದ ಪರವಸ್ತು. ಹೀಗೆ ನಿರಹಂಕಾರ ಮತ್ತು ಸುಜ್ಞಾನಿಗಳಿಗೆ ಸ್ವಸ್ವರೂಪವನ್ನು ತಿಳಿಸಿ ಐಕ್ಯಸ್ಥಲವನ್ನು ಮುಂದೆ ಅಲ್ಲಮಪ್ರಭು ಉಪದೇಶಿಸುತ್ತಾನೆ. ನಿರಹಂಕಾರವೂ ಸುಜ್ಞಾನವೂ ಇರುವವರಿಗೆ ಪರವಸ್ತು ಪ್ರತ್ಯಕ್ಷವಾಗಿ ಎಲ್ಲ ಕಡೆಯೂ ಕಾಣುವುದರಿಂದ ಅಂತರಂಗ ಬಹಿರಂಗಗಳಲ್ಲಿ ಪರಶಿವ ವ್ಯಾಪ್ತಿಯುಳ್ಳವರಾಗಿ ಪರಶಿವನನ್ನು ಅವರು ಬಿಟ್ಟಿರಲು ಸಾಧ್ಯವಿಲ್ಲವೆಂದಭಿಪ್ರಾಯ. (ಲಿಂಗದಲ್ಲಿ ಸಮರಸ ಭಾವದಿಂದ ಐಕ್ಯವಾಗುವುದು ಐಕ್ಯಸ್ಥಲ.)

10. **ಪದ್ಯ ೧೨೯.** "ಜಳಿಕ ತತ್ವವಿವೇಕವೆಲ್ಲವನಳವಡಿಸಿ", ಇತ್ಯಾದಿ. ತತ್ವ ಎಂದರೆ ಶಿವತತ್ವ. ಪರವಸ್ತುವಿಗೆ ಶಿವತತ್ವ ಎಂದು ಸಿದ್ಧಾಂತಕಾರರು ಹೇಳುತ್ತಾರೆ (ಆಗಮ ಪರಿಜ್ಞಾನ, ಪುಟ 24). ಐಕ್ಯಭಾವ ಸ್ಥಳವ ಕಾಣಿಸಿ=ಐಕ್ಯಸ್ಥಲವನ್ನು ಅನುಗ್ರಹಿಸಿ. ದೃಷ್ಟದಲಿ ಪರಿಪೂರ್ಣಮಯ ನೆನಿಸಿ=ದೃಷ್ಟವಾದ ಇಷ್ಟಲಿಂಗದಲ್ಲಿ, ಪರಿಪೂರ್ಣಮಯನು=ಸೂಕ್ಷ್ಮತನು ವಿನ ಪ್ರಾಣಲಿಂಗ, ಕಾರಣತನುವಿನ ಭಾವಲಿಂಗ—ಇವುಗಳ ಅನುಸಂಧಾನ ದಿಂದ ಅಂತರಂಗ ಬಹಿರಂಗಗಳಲ್ಲಿ ಏಕಪ್ರಕಾರವಾಗಿ ತುಂಬಿಕೊಂಡಿರುವವನು, ನಿತ್ಯವನು=ಮೋಕ್ಷವನ್ನು, ಇತ್ತನು=ಅನುಗ್ರಹಿಸಿದನು.

11. **ಪದ್ಯ ೧೪೮.** "ನೋಟವೆಸೆದದು....", ಇತ್ಯಾದಿ. ಮುನ್ನ ಮುಟ್ಟಿದ ಬೇಟವಲ್ಲದೆ=ಹಿಂದೆ ಕಾಮಾತುರದಿಂದ ಬಯಸಿದ ಭಾವ ತಪ್ಪಿ

ಬೇಡಿ ಬುದ್ಧಿಯು ಕೂಟದಿಂದ=(ಶಿವತತ್ತ್ವವನ್ನು ತಿಳಿಯಬೇಕೆಂಬ) ಬೇರೆಯಾದ ಬುದ್ಧಿಯು ಸೇರಿಕೆಯಿಂದ, ಲತಾಂಗ=ಲತೆಯಂತೆ ಕೋಮಲವಾದ ಅಂಗವು, (ಕೈ) ಲಂಬಿಸಿತು=ಮುಂದುವರಿಯಿತು, ಆತನ ಸ್ಥಿತಿಯು ನಾಟಿ ಸಲಿದುದು ಚಿತ್ತ=ಅಲ್ಲಮಪ್ರಭು ಈಶ್ವರನೆಂಬ ಭಾವದಲ್ಲಿ ಮಾಯೆಯ ಚಿತ್ತವು ಸಿಕ್ಕಿ ಸಂತೋಷಿಸಿತು, ಈ ನಟನಾಟಕನ–ನಟನಂತೆ ವೇಷತಾಳಿ ಬಂದಂಥ ಅಲ್ಲಮಪ್ರಭುವನ್ನು, ಸಿಕ್ಕಿಸುವ ಬಗೆಯಲಿ=ವಶಪಡಿಸಿಕೊಳ್ಳುವ ರೀತಿಯಲ್ಲಿ, ಮಾಟ ಮಕರಿಸಿ=ಮನಸ್ಸಿನ ಮತ್ತು ದೇಹದ ವ್ಯಾಪಾರವು ಚಲಗೂಡಿ, ಕಾಣಲಾಯಿತು=ಕಾಣಿಸಿಕೊಂಡಿತು.

["ಆತನ ಸ್ಥಿತಿಯು" ಎಂಬ ಕಡೆ "ಆನತ ಸ್ಥಿತಿಯು" ಎಂದು ಪಾಠಾಂತರವಿದೆ. ಇದರಂತೆ "ಲತಾಂಗ ಲಂಬಿಸಿತು ಆನತ ಸ್ಥಿತಿಯ" ಎಂದು ಓದಿಕೊಂಡರೆ ಹೀಗೆ ಅರ್ಥಮಾಡಬಹುದು.— ನಿಂತು ನರ್ತಿಸುತ್ತಿದ್ದ ಮಾಯೆಯ ಅಂಗವೆಂಬ ಲತೆ ಆನತ ಸ್ಥಿತಿಯ=ಬಗ್ಗಿದ ಆಕಾರವನ್ನು, ಲಂಬಿಸಿತು=ಆಶ್ರಯಿಸಿತು. ಅಂದರೆ ಮಾಯೆ ಅಲ್ಲಮನನ್ನು ತುಡುಕಲು ಮುಂದಕ್ಕೆ ಬಾಗಿದಳು ಎಂದರ್ಥ. ಇದರಿಂದ ಮಾಯೆಗೆ ಅಲ್ಲಮನ ಸ್ಥಿತಿಯನ್ನು ತಿಳಿಯಬೇಕೆನ್ನುವುದರಲ್ಲಿ ಇದ್ದ ಆತುರತೆಯೂ, "ಆನತ" ಶಬ್ದದ ಪ್ರಯೋಗದಿಂದ, ಅಲ್ಲಮನ ವಿಷಯವಾಗಿ ಮಾಯೆಗೆ ಆಗಲೇ ಶರಣು ಹೋಗಬೇಕೆಂಬ ನಮ್ರತೆಯೂ, ವಿನಯವೂ, ಸೌಜನ್ಯವೂ ತಲೆದೋರಿದುವು ಎಂಬ ಧ್ವನಿ ತೋರುವುದು.]

12. **ಪದ್ಯ ೨೦೩.** "ಅಳಸು ಮಿಡುಕಸು....", ಇತ್ಯಾದಿ. ಬಸವಣ್ಣನವರು ಜನಿಸಿದಾಗ ನಿಶ್ಚೇಷ್ಟಿತರಾಗಿದ್ದರೆಂದೂ, ಅದನ್ನು ನೋಡಿ ತಂದೆತಾಯಿಗಳು ಭಯಪಟ್ಟಿರಲು ಈಶ್ವರನೇ ಜಂಗಮವಾಗಿ ಬಂದು ಮಗುವಿನಲ್ಲಿ ಚೈತನ್ಯವನ್ನುಂಟುಮಾಡಿದನೆಂದೂ ವೀರಶೈವ ಪುರಾಣಗಳಲ್ಲಿ ಹೇಳಿದೆ. ಜಾತವೇದಮುನಿ ಎಂಬಾತನು ಕೂಡಲಸಂಗಮ ಕ್ಷೇತ್ರದಿಂದ ಬಂದು ಈ ಕೆಲಸಮಾಡಿದಂತೆ ಸಿಂಗಿರಾಜ ಪುರಾಣದಲ್ಲಿದೆ.

13. **ಪದ್ಯ ೨೦೪.** "ಪರಮನಹೆ ನೀನೆಂದು....", ಇತ್ಯಾದಿ. ಬಸವಣ್ಣನವರು ನಂದೀಶ್ವರಾವತಾರ. ನಂದೀಶ್ವರನು ದ್ವಿತೀಯ ಶಂಭು

ವೆಂದೂ, ನಂದೀಶ್ವರನಿಗೂ ಶಿವನಿಗೂ ಭೇದವೇನೂ ಇಲ್ಲವೆಂದೂ ಪುರಾಣ ಗಳಲ್ಲಿ ಹೇಳಿದೆ. ನಿರುತ ನಿಸ್ಸುವನಗಲ ಸಾಸಿರನೆಂದು ಕುಱುಹಾಗಿ ನೆರಹು ವಂತಿರೆ ದಿವ್ಯ ಲಿಂಗವ ಕೊರಳಿನಲಿ ಅವಧರಿಸಿ=ನಿರಾಕಾರನೂ ಅಗೋಚರನೂ ಆದ ನಿಷ್ಕಲ ಪರಶಿವನು ಸಾಕಾರನೂ ಗೋಚರನೂ ಆಗಿ ಸಕಲ ರೂಪಾದ ಇಷ್ಟಲಿಂಗದ ಕುರುಹಿನಿಂದ ಬಳಿಯಲ್ಲಿದ್ದಾನೆ ಎಂದು ಅಭಿಪ್ರಾಯ. ತಾನೆ ಗುರುವಾದ=ವಿಭೂತಿಯನ್ನಿಟ್ಟು ಲಿಂಗಧಾರಣಮಾಡಿಸಿ ಮುಂದಿನ ಪದ್ಯ ದಲ್ಲಿ ಹೇಳಿರುವಂತೆ ಪಂಚಾಕ್ಷರಿಯನ್ನು ಉಪದೇಶಮಾಡಿ ದೀಕ್ಷಾಗುರು ಮತ್ತು ಬೋಧಾಗುರುವಾದನು. (ಕೊರಳಿನಲ್ಲಿ ಕಟ್ಟಿದ್ದರಿಂದ ಸರ್ವಾರ್ಥ ಸಾಧನೆಯಾಗುವುದೆಂದು ಭಾವ. ವೀರಶೈವಧರ್ಮಶಿರೋಮಣಿ, ಪುಟ 110.)

14. **ಪದ್ಯ ೨೦೫.** "ಸಂಬುಗೆಯ ಕೊಡುವಂತೆ", ಇತ್ಯಾದಿ. "ತತ್ತ್ವಮಸಿ" ಎಂಬ ಮಹಾವಾಕ್ಯದ ಸಂಬುಗೆಯನ್ನುಂಟುಮಾಡುವಂತೆ, ಹಸ್ತವನಿಂಬಿನಲಿ ಮಸ್ತಕದೊಳಿರಿಸುತಲಿ=ದೀಕ್ಷಾ ಕಾಲದಲ್ಲಿ ಗುರುವಿನ ಹಸ್ತ ಶಿಷ್ಯನ ಮಸ್ತಕ ಸಂಯೋಗವಾಗುವುದು. ಗುರು ತನ್ನ ಮಾಹಾತ್ಮ್ಯದ ದೆಸೆಯಿಂದ ಶಿಷ್ಯನ ಬ್ರಹ್ಮರಂಧ್ರದ ಬಳಿಯಿರುವ ನಿಷ್ಕಲದ ಚೈತನ್ಯವನ್ನು ಅಲ್ಲಿಂದ ಹೊರಡಿಸಿ, ಶಿಷ್ಯನ ಹೃದಯಕ್ಕೆ ಇಳಿಸಿ ಪ್ರಾಣಲಿಂಗವನ್ನಾಗಿ ಮಾಡಿ, ಅಲ್ಲಿಂದ ನೇತ್ರಗಳಿಗೆ ತಂದು, ಇಷ್ಟಲಿಂಗದಲ್ಲಿ ಸೇರಿಸುವನು. ಹಸ್ತ ಮಸ್ತಕ ಸಂಯೋಗದಿಂದ ವೇಧಾದೀಕ್ಷೆಯಾಯಿತೆಂದು ತಿಳಿಯತಕ್ಕದ್ದು. ಉಂಬತಾಣವಿದೆಂದು=ತುಂಬಿಕೊಳ್ಳುವ ಸ್ಥಳ ಎಂದು, ಕಿವಿಯ ಮೂಲಕ ವಾಗಿ ಪಂಚಾಕ್ಷರಿಯನ್ನು ದೇಹದಲ್ಲೆಲ್ಲ ವ್ಯಾಪಿಸುವಂತೆ ಮಾಡುವುದು. ಭಕ್ತನ ದೇಹವಾದ್ಯಂತವೂ ಮಂತ್ರಮಯವಾಗಿರುವುದೆಂದು ತಿಳಿಯ ತಕ್ಕದ್ದು. (ಇದರ ಹೆಚ್ಚು ವಿವರಗಳನ್ನು ಶಿವಾನುಭವಸೂತ್ರ ವ್ಯಾಖ್ಯಾನ, ಪುಟ ೬೬–೬೯ ಇವುಗಳಲ್ಲಿ ನೋಡತಕ್ಕದ್ದು.)

15. **ಪದ್ಯ ೨೦೭.** "ಉಪನಯನ ಲಕ್ಷ್ಯವನು....", ಇತ್ಯಾದಿ. ಈ ಉಪನಯನದ ವಿಚಾರದಲ್ಲಿ ವೀರಶೈವ ಗ್ರಂಥಗಳಲ್ಲಿ ಏಕಾಭಿಪ್ರಾಯವಿಲ್ಲ. ಬಸವಣ್ಣನವರಿಗೆ ಉಪನಯನವಾದಂತೆ ಬರೆದಿರುವವರಲ್ಲಿ ಹರೀಶ್ವರನೇ ಮೊದಲಿಗನೆಂದು ಕಾಣುತ್ತದೆ. ಚಾಮರಸ ಮತ್ತು ಸಿಂಗಿರಾಜ ಉಪ

ನಯನವಾಯಿತೆಂದು ಹೇಳಿದ್ದಾರೆ. ಉಪನಯನವಾಗಲಿಲ್ಲವೆಂದು ಹೇಳು ವವರಲ್ಲಿ ಪಾಲ್ಕುರಿಕೆ ಸೋಮನಾಥನೇ ಮೊದಲಿಗನಾಗಿ ಕಾಣುತ್ತಾನೆ. ಇವನನ್ನು ಅನುಸರಿಸಿ ಭೀಮಕವಿ, ಲಕ್ಕಣ್ಣ ದಂಡೇಶ, ಸಂಸ್ಕೃತ ಪಂಡಿತಾರಾಧ್ಯ ಚರಿತ್ರಕಾರ ಗುರುರಾಜ, ವಿರೂಪಾಕ್ಷ ಪಂಡಿತ, ಎಳಂದೂರು ಹರೀಶ್ವರ, ಶಂಕರ ಕವಿ ಮುಂತಾದವರು ಬರೆದಿದ್ದಾರೆ. ಚಾಮರಸನು ಉಪನಯನವಾಯಿತೆಂದು ಹೇಳಿದ್ದರೂ ಸಂಸ್ಕೃತ ಮತ್ತು ತೆಲುಗು ಪ್ರಭುಲಿಂಗಲೀಲಾಕಾರರು ಉಪನಯನವಾಗಲಿಲ್ಲವೆಂದೇ ಬರೆದಿದ್ದಾರೆ. ತಮಿಳು ಪ್ರಭುಲಿಂಗಲೀಲೆಯಲ್ಲಿ—ಮಾಡಬೇಕಾದ ಕರ್ಮಗಳನ್ನೆಲ್ಲ ಸಾಂಗವಾಗಿ ನೆರವೇರಿಸಿ—ಎಂದು ಕವಿ ಹೇಳಿ ಅಡ್ಡಗೋಡೆಯ ಮೇಲೆ ದೀಪವಿಟ್ಟಿದ್ದಾನೆ.

[ರಾಘವಾಂಕನ ಕಾವ್ಯದಲ್ಲಿ ಹರೀಶ್ವರನಿಗೆ ಉಪನಯನವಾಗಿತ್ತೆಂಬ ಸೂಚನೆಯನ್ನೂ, ರಾಘವಾಂಕನಿಗೆ ಉಪನಯನವಾಯಿತೆಂಬ ವಿಷಯ ವನ್ನೂ ಸಿದ್ಧನಂಜೇಶನು ಬರೆದಿದ್ದಾನೆ.]

16. **ಪದ್ಯ ೨೪೨.** "ಇಲ್ಲಿ ಭಕ್ತಿಯ ಮಾಡುತಲಿ. . . .", ಇತ್ಯಾದಿ. ಬಾಹ್ಯ ಗುರು ಲಿಂಗ ಜಂಗಮ–ಇವರ ಸೇವೆಮಾಡಿದರೆ ಮುಕ್ತಿಯುಂಟಾ ಗುವುದೆಂದು ಗೊಗ್ಗಯ್ಯನ ಅಭಿಪ್ರಾಯ.

17. **ಪದ್ಯ ೨೪೫.** "ಸಾವಡೀ ಗುರು ಲಿಂಗ ಜಂಗಮ ಸೇವೆ", ಇತ್ಯಾದಿ. ಅಲ್ಲಮನು ಪ್ರಾಣಲಿಂಗಾನುಸಂಧಾನವನ್ನು ಕುರಿತು ಹೇಳುವವನಾದ್ದರಿಂದಲೂ, ಅದ್ವೈತವನ್ನು ಬೋಧಿಸುವವನಾದ್ದರಿಂದಲೂ, ಬಾಹ್ಯ ಗುರು ಲಿಂಗ ಜಂಗಮ ಸೇವೆ ಆತ್ಮಕಲ್ಯಾಣಕ್ಕೆ ಸಾಧಕವಲ್ಲವೆಂದು ತಿಳಿಸುತ್ತಾನೆ. ಸಾವಡೆ=ಸಾಯುವುದಾದರೆ, ಗುರು ಲಿಂಗ ಜಂಗಮ ಸೇವೆ ತಾ, ಮುನ್ನ=ಮೊದಲು, ಏಕೆ=ಏತಕ್ಕೆ, ಎಂದರೆ ವ್ಯರ್ಥ ಎಂದು ಅಭಿಪ್ರಾಯ. ಹಸುವಿನ=ಹಸಿವಿನ, ಬೇವಸದಲಿ=ದುಃಖದಲ್ಲಿ, ಅಡಿಗಡಿಗೆ, ಬೇವಡೆ=ಬೆಂದುಹೋಗುವುದಾದರೆ, ಒಕ್ಕುದ = ಪ್ರಸಾದವನ್ನು, ಉಣಲೇಕೆ?=ಉಂಡು ಪ್ರಯೋಜನವೇನು?—ವ್ಯರ್ಥ ಎಂದು ಅಭಿಪ್ರಾಯ. ಫಲಾಪೇಕ್ಷೆಯಿಂದ ಕರ್ಮ ಮಾಡುತ್ತಿರುವವರೆಗೂ ಸಾಯುವುದು ತಪ್ಪುವುದಿಲ್ಲ, ಎಂದರೆ ಮೋಕ್ಷವಾಗುವುದಿಲ್ಲ ಎಂದು ಅಭಿಪ್ರಾಯ.

ನಿರ್ಭಾವದಂಗವನಱಿಯದನ್ನಕ=ಮನಸ್ಸನ್ನು ಲಯಮಾಡಿಸುವ ರೀತಿಯನ್ನು ತಿಳಿಯುವವರೆಗೂ, ಸಾವುದಾದಡೆ=ಸಾಯುವುದಾದರೆ, ಮಾಣದೈ=ತಪ್ಪದು, ಲಿಂಗೈಕ್ಯನಾಗುವುದಿಲ್ಲ, ಜನನ ಮರಣಾದಿಗಳಲ್ಲಿ ತೊಳಲುತ್ತಿರುವನೆಂದು ಅಭಿಪ್ರಾಯ.

18. **ಪದ್ಯ ೨೪೬.** "ಪರಿಕಿಸಲು ಗುರು ಲಿಂಗ ಜಂಗಮ....", ಇತ್ಯಾದಿ. ಗುರು ಲಿಂಗ ಮತ್ತು ಜಂಗಮ–ಎಂಬುದಾಗಿ ಪರವಸ್ತು ಮೂರು ರೂಪಾಯಿತು. ಗುರು, ಲಿಂಗ, ಜಂಗಮದ ಇರವು=ಸ್ಥಿತಿ, ಸ್ವರೂಪ, ಲಕ್ಷಣ, ಆವೆಡೆ=ಯಾವ ಸ್ಥಳದಲ್ಲಿ, ಎಂದರೆ ಅವುಗಳ ಮೂಲವೇನು? ಎನ್ನುವುದು, ಈ ಉಪಚರಣೆಗೆ=ಉಪಚಾರದ ಮಾತಿಗೆ, ಅಱುಹಿಸದು=ತಿಳಿವಳಿಕೆಯಾಗುವುದಿಲ್ಲ. (ಗುರು ಲಿಂಗ ಜಂಗಮದ ಸಂಪೂರ್ಣ ವಿವರಗಳನ್ನು ವೀರಶೈವಾಮೃತ ಮಹಾಪುರಾಣ, ಕಾಂಡ I, ಸಂಧಿ ೨, ೩ ಗಳಲ್ಲಿ ನೋಡಿ ತಿಳಿದುಕೊಳ್ಳತಕ್ಕದ್ದು.)

19. **ಪದ್ಯ ೨೫೩.** "ನೋಟವೇ ಪ್ರಾಣಸ್ವರೂಪಿನ ಮಾಟವಾದ ನಿಮಿತ್ತ....", ಇತ್ಯಾದಿ. ಇಷ್ಟಲಿಂಗದ ಜೊತೆಯಲ್ಲಿ ಅನಿಮಿಷಯ್ಯನ ಜೀವಕಳೆಯೂ ಬಂದು ಅಲ್ಲಮನಲ್ಲಿ ಸೇರಿದುದಕ್ಕೆ ಕಾರಣವನ್ನು ಕವಿ ಹೇಳುತ್ತಾನೆ. "ನೋಟವೇ ಕೂಟ, ಕೂಟವೇ ಪ್ರಾಣ. ಪ್ರಾಣವೇ ಏಕ, ಏಕವೇ ಸಮರಸ, ಆ ಸಮರಸವೇ ಲಿಂಗ, ಲಿಂಗವೇ ಪರಿಪೂರ್ಣ, ಪರಿಪೂರ್ಣವೇ ಪರಬ್ರಹ್ಮ ತಾನೇ ಗುಹೇಶ್ವರಾ" ಎಂಬ ಗುಹೇಶ್ವರ ವಚನದಂತೆ (ಶಿವಯೋಗ ರಹಸ್ಯ, ಪುಟ ೨೭, ಲಿಂಗಸೂತ್ರ ನಿರ್ಣಯ–ಗುಹೇಶ್ವರ ವಚನಗಳು, ಪುಟ ೧–೨) ಕರಸ್ಥಲದ ಇಷ್ಟಲಿಂಗದಲ್ಲಿ ದೃಷ್ಟಿ ಸಂಲಗ್ನವಾದುದೇ ಪ್ರಾಣಾಯಾಮಯೋಗ. ಇಷ್ಟಲಿಂಗವು ಸ್ವಸ್ಥಾನವನ್ನು ಬಿಟ್ಟು ಅಲ್ಲಮನಲ್ಲಿ ಸೇರಿದಾಗ ದೃಷ್ಟಿಯ ಹಿಂದೆ ಪ್ರಾಣವೂ ಬಂದು ಸೇರಿತು ಎಂದು ಅಭಿಪ್ರಾಯ. ಕರಸ್ಥಲದ ಇಷ್ಟಲಿಂಗವನ್ನು–ಇಷ್ಟಬ್ರಹ್ಮವನ್ನು–ನೇತ್ರದ ಮಧ್ಯದಲ್ಲಿಟ್ಟುಕೊಂಡು ಧ್ಯಾನಿಸಿದ್ದರಿಂದ ಇಷ್ಟಲಿಂಗವೇ ಪ್ರಾಣಲಿಂಗವಾಯಿತು. "ನೇತ್ರದೇವಾತ್ಪರಂ ನಾಸ್ತಿ" ಎಂಬುದಾಗಿ ನೇತ್ರವು ಪರಬ್ರಹ್ಮಸ್ವರೂಪವಾಗಿತ್ತೆಂದೂ ತಿಳಿಯುವುದು. ಇಷ್ಟಲಿಂಗವು ಬಾಹ್ಯದಲ್ಲಿಯೂ, ಪ್ರಾಣಲಿಂಗವು ಅಭ್ಯಂತರದಲ್ಲಿಯೂ ಇದ್ದುದರಿಂದ,

ಇಷ್ಟಲಿಂಗವು ಅಲ್ಲಮನಲ್ಲಿ ಸೇರಲು ಹಿಂದೆಯೇ ಪ್ರಾಣಲಿಂಗವೂ ಹೋಯಿತು–ಎಂದು ಅಭಿಪ್ರಾಯ. ಕಣ್ಣಾಲಿಗಳು ಅಡದೆ ಇಷ್ಟಲಿಂಗದಲ್ಲಿ ದೃಷ್ಟಿ ನಿಬ್ಬೆರಗಾಗಿ ನಿಂತದ್ದರಿಂದ ಪ್ರಾಣರೂಪಿಣಿಯಾದ ಚಿಚ್ಛಕ್ತಿ ನೋಟದಲ್ಲಿ ನಿಂದು ಇಷ್ಟಲಿಂಗದಲ್ಲಿ ಏಕರವಾಗಿದ್ದಿತು. ಶಿವ ಶಕ್ತಿಗಳ ವಿಯೋಗವಿಲ್ಲದ್ದರಿಂದ ಇಷ್ಟಲಿಂಗದ ಜೊತೆಗೆ ಪ್ರಾಣರೂಪಿಣಿಯಾದ ಚಿಚ್ಛಕ್ತಿಯೂ ಅಲ್ಲಮನಲ್ಲಿ ಸೇರಿಹೋದಳು ಎಂದು ಸಿದ್ಧಾಂತಶಿಖಾಮಣಿ, ೧೨ನೆಯ ಪರಿಚ್ಛೇದ, ೫ನೆಯ ಶ್ಲೋಕದ ಆಧಾರದಿಂದ ಅರ್ಥಮಾಡಬಹುದು.

20. **ಪದ್ಯ ೨೭೦.** "ಕೇಳಿದೌ ಶಿಶುಗಳಿಗೆ....", ಇತ್ಯಾದಿ. ೨೬೯ನೆಯ ಪದ್ಯದಲ್ಲಿ "ಕರ್ಮೇಂದ್ರಿಯಗಳನೊಯ್ಯನೋಸರಿಸಿ" ಎಂದು ಮುಂತಾಗಿ ಹೇಳಿದೆಯಷ್ಟೆ. ಅದು ಹೇಗೆ ಸಾಧ್ಯವೆನ್ನುವುದನ್ನು ಅಲ್ಲಮನು ಈಗ ವಿವರಿಸುತ್ತಾನೆ. "ಕಂಗಳೇಕೆ ನೋಡಬೇಡವೆಂದರೆ ಮಾಣವು? ಶ್ರೋತ್ರಂಗಳೇಕೆ ಆಲಿಸಬೇಡವೆಂದರೆ ಮಾಣವು? ನಾಸಿಕವೇಕೆ ವಾಸಿಸ ಬೇಡವೆಂದರೆ ಮಾಣದು? ತ್ವಕ್ಕೇಕೆ ಸೋಂಕಬೇಡವೆಂದರೆ ಮಾಣದು? ಈ ಭೇದವನರಿದು ನುಡಿಯಲು ಸಮಧಾತುವಾಯಿತ್ತು. ಗುಹೇಶ್ವರ ಲಿಂಗಕ್ಕೆ ಒಲಿದ ಕಾರಣ ಅಭಿಮಾನದ ಲಜ್ಜೆ ಬೇಸತ್ತು ಹೋಯಿತ್ತು" ಎಂಬ ವಚನದ ಅರ್ಥದಂತೆ ಇಂದ್ರಿಯಾದಿಗಳು ವಿಷಯಗಳ ಕಡೆಗೆ ಹರಿಯುವುದು, ಮಗು ಮೊಲೆಹಾಲನ್ನು ಬಯಸುವುದು ಹೇಗೆ ಸ್ವಾಭಾವಿಕವೋ ಹಾಗೆ ಸ್ವಾಭಾವಿಕವು. ಆದರೆ ಮಗುವಿಗೆ ಮೊಲೆಹಾಲನ್ನು ಕಡಮೆಮಾಡುತ್ತ ಎರೆಹಾಲಿನ ಕಡೆಗೂ, ಅನ್ನದ ಕಡೆಗೂ ಪ್ರೇಮ ಹುಟ್ಟುವಂತೆ ತಾಯಿ ಯಾದವಳು ಹೇಗೆ ಅಭ್ಯಾಸ ಮಾಡಿಸುವಳೋ, ಕಡೆಗೆ ಮೊಲೆಹಾಲಿನ ಚಾಪಲ್ಯವನ್ನೇ ಹೇಗೆ ಮರೆಯಿಸಿಬಿಡುವಳೋ ಹಾಗೆಯೆ ಗುರುವಾದವನು ಭಕ್ತಿಯ ಅಭ್ಯಾಸವನ್ನು ಮಾಡಿಸಿ ವಿಷಯಗಳ ಕಡೆಗೆ ಮನಸ್ಸು ಹರಿಯುವುದನ್ನು ಕ್ರಮವಾಗಿ ಬಿಡಿಸುತ್ತಾನೆ. ಈ ಭಕ್ತಿಯ ಅಭ್ಯಾಸಕ್ಕೆ ಇಷ್ಟಲಿಂಗವು ಆವಶ್ಯಕ. ಇದರ ಮೂಲಕ ಅಂತರ್ಮುಖಿಯಾಗಬೇಕು ಎಂದು ಅಭಿಪ್ರಾಯ.

21. **ಪದ್ಯ ೨೭೩.** "ಅಕಟ ನಿಮ್ಮಯ ಗುರುವಿನಾಗಮ ಯುಕುತಿ....", ಇತ್ಯಾದಿ. ಪಾಷಾಣಕ್ಕೆ ಬಂದುದೆ=ಕಲ್ಲಿನಲ್ಲಿ ಅಭಿಮಾನ

ವಿಟ್ಟು ದೇವರೆಂದು ಒಡ್ಡಾಡುವ ಸ್ಥಿತಿಗೆ ಬಂದಿತೆ? ಮೂರ್ತಿಪೂಜೆಯನ್ನು ಬಿಟ್ಟು ಜ್ಯೋತಿರ್ಲಿಂಗವನ್ನು ಸಾಧಿಸಲು ಸಿದ್ಧರಾಮನ ಮನಸ್ಸು ಏರದೇ ಹೋಯಿತೇ ಎಂದು ಅಭಿಪ್ರಾಯ. ಸಕಲ ಕಲ್ಲನು=ಇಂದ್ರಿಯಕ್ಕೆ ಗೋಚರವೂ ಕ್ಲಿಪ್ತ ಪರಿಮಾಣ ಆಕಾರಗಳೂ ಉಳ್ಳ ಶಿಲೆಯನ್ನು, ಕಡಿದು, ಕಲ್ಲಿಗೆ=ದೇವರೆಂದು ಭ್ರಮಿಸಿ ತಿಳಿದ ಶಿಲೆಗೆ, ಶಿಖರ, ದೇಗುಲ ಎಂದು ಮಾಡಿಸಿ ಮಕರಿಸುವರು, ಇವರು ಒಡ್ಡರಲ್ಲದೆ ಸಿದ್ಧರಲ್ಲ. "ಮರ್ತ್ಯ ಲೋಕದ ಮಾನವರು ದೇಗುಲದೊಳಗೊಂದು ದೇವರನು ಮಾಡಿದರೆ ನಾನು ಬೆರಗಾದೆನಯ್ಯ. . . ." "ಕಲ್ಲದೇವರ ಮಾಡಿ, ಕಲ್ಲಮನೆಯ ಮಾಡಿ, ಆ ಕಲ್ಲು ಕಲ್ಲಮೇಲೆ ಕೆಡೆದರೆ ದೇವರೆತ್ತ ಹೋದರೋ. . . ." ಎಂದು ಮುಂತಾಗಿ ನುಡಿದ ಅಲ್ಲಮನು ನಿಷ್ಕಲಲಿಂಗ ಸಾಧನೆಯನ್ನೇ ಒತ್ತಿ ಹೇಳುತ್ತಿದ್ದನು.

22 **ಪದ್ಯ ೨೮೮.** "ಕೆಣಕದಿರು ನೀ ಸಂಪ್ರದಾಯಗಳೆಣಿಕೆ. . . .", ಇತ್ಯಾದಿ. ಹಣೆಯ ಕಣ್ಣಿನ ಕಿಡಿಯ ಕೆದಱುವನು—ಸಿದ್ಧರಾಮಯ್ಯನು ಮೃಡರೂಪಿಯೆಂದೂ, ಆತನಿಗೆ ಮೂರು ಕಣ್ಣುಗಳಿದ್ದುವೆಂದೂ ಪುರಾಣ ಗಳಲ್ಲಿಯೂ ವಚನಗಳಲ್ಲಿಯೂ ಹೇಳಿದೆ.

23. **ಪದ್ಯ ೨೯೨.** "ಕಡಲನತಿಮಥನವನು ಮಾಡಲು. . . .", ಇತ್ಯಾದಿ ಪದ್ಯದ ಉತ್ತರಾರ್ಧ. "ತೊಡೆದನಾಗಳೆ ನೊಸಲ ಕಣ್ಣಿನ ಕಿಡಿಯ" ಸಿದ್ಧರಾಮನು ಹಣೆಗಣ್ಣಿನಿಂದ ಬಿಟ್ಟ ಜ್ವಾಲೆಗೆ ಪ್ರತಿಯಾಗಿ ಅಲ್ಲಮನು ತನ್ನ ಅಂಗಾಲ ಕಣ್ಣಿನಿಂದ ಜ್ವಾಲೆಯನ್ನು ಬಿಟ್ಟಂತೆಯೂ, ಕಡೆಗೆ ಆ ಎರಡು ಜ್ವಾಲೆಗಳನ್ನೂ ತನ್ನ ಕಾಲಿನಲ್ಲಿ ಅಡಗಿಸಿಕೊಂಡಂತೆಯೂ ವಚನಗಳಲ್ಲಿ ಮತ್ತು ವೀರಶೈವ ಪುರಾಣಗಳಲ್ಲಿ ಹೇಳಿದೆ.

24. **ಪದ್ಯ ೩೧೨.** "ಎಂದು ಬಳಿಕೇಕಾಂತದಲಿ. . . .", ಇತ್ಯಾದಿ. ಕಾಯ ಕರಣದ ಸಂದು ಸಂಬಂಧವನು=ದೇಹೇಂದ್ರಿಯಾದಿಗಳ ವ್ಯಾಪಾರಕ್ಕೆ ಮೂಲಭೂತವಾದ, ಆಯಾ ಸ್ಥಾನಗಳಲ್ಲಿರುವ ಲಿಂಗ ಚೈತನ್ಯಗಳ ಕೀಲ ಗಳನ್ನು, ಸೂಚಿಸಿ=ತಿಳಿಸಿ, ಜೀವ ಪರಮರನು=ಜೀವಾತ್ಮ ಪರಮಾತ್ಮರನ್ನು, ಒಂದುಮಾಡುವ=ಸಮರಸಭಾವದಿಂದ ಐಕ್ಯಮಾಡಿಸುವ, ಶಕ್ತಿ ಭಕ್ತಿಯ

ಹೊಂದಿಕೆಯನು=ಕ್ರಿಯಾಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ, ಆದಿಶಕ್ತಿ, ಪರಾಶಕ್ತಿ, ಚಿಚ್ಛಕ್ತಿಗಳಿಂದ ಕ್ರಮವಾಗಿ ಕೂಡಿದ ಆಚಾರಲಿಂಗ, ಗುರು ಲಿಂಗ, ಶಿವಲಿಂಗ, ಚರಲಿಂಗ, ಪ್ರಸಾದಲಿಂಗ ಮತ್ತು ಮಹಾಲಿಂಗ ಸ್ಥಲ ಗಳಲ್ಲಿ, ಶ್ರದ್ಧಾಭಕ್ತಿ, ನೈಷ್ಠಿಕಭಕ್ತಿ, ಅವಧಾನಭಕ್ತಿ, ಅನುಭವಭಕ್ತಿ, ಆನಂದಭಕ್ತಿ ಮತ್ತು ಸಮರಸಭಕ್ತಿಗಳಿಂದ ಕ್ರಮವಾಗಿ ಕೂಡಿದ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯ ಎಂಬ ಅಂಗಸ್ಥಲ ಗಳ ಸೇರಿಕೆಯನ್ನು, ಅಲ್ಲಮಪ್ರಭು ಸಿದ್ಧರಾಮಂಗೆ ಅಂದು ಕರುಣದಲಿ ಉಪದೇಶಮಾಡಿದನು—ಎಂದು ಅಭಿಪ್ರಾಯ.

25. **ಪದ್ಯ ೩೧೯.** "ಕರತಳದೊಳಿಡೆಗೊಂಡು....", ಇತ್ಯಾದಿ. ಎಡಗೈಯಲ್ಲಿ ಇಷ್ಟಲಿಂಗವನ್ನು ಬಿಜಯಮಾಡಿಸಿಕೊಂಡು, ಪೂಜಿಸುವ ಆತುರದಲ್ಲಿರುವಾಗ, ಚರವನು=ಜಂಗಮಾಕಾರವನ್ನು, ಅಂಗೀಕರಿಸಿ=ಕೈ ಕೊಂಡು, ಬಂದಡೆ=ಬಂದಪ್ಪಾದರೆ, ಲೇಸು ಲೇಸೆನುತ—ಪೂಜೆಗೊಳ್ಳ ಬೇಕೆಂದು ಲಿಂಗದೇವನೇ ಜಂಗಮವಾಗಿ ಬಂದರೆ ಒಳ್ಳೆಯದೇ ಆಯಿತು ಎಂದು ಬಸವಣ್ಣನವರ ಅಭಿಪ್ರಾಯ.

26. **ಪದ್ಯ ೩೨೯.** "ನೋಡಿದ್ದೈ ರಾಮಯ್ಯ ಭಕ್ತರು ಮಾಡು ವುದು....", ಇತ್ಯಾದಿ. ಸ್ಥಾವರ ಲಿಂಗ ಭಕ್ತಿಯನ್ನು ಮಾಡುವುದು ಸುಲಭ. ಆ ಲಿಂಗವು ಬೇಡದು ಬೆಸಗೊಳ್ಳದು. "ಎರೆದರೆ ನೆನೆಯದು ಮರೆದರೆ ಬಾಡದು. ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ. ಕೂಡಲ ಸಂಗಮ ದೇವ, ಜಂಗಮಕ್ಕೆರೆದರೆ ಸ್ಥಾವರ ನೆನೆಯಿತ್ತು." "....ಜಂಗಮ ಪಾಪ್ಯಾಯನವಾದರೆ ಲಿಂಗ ಸಂತುಷ್ಟಿಯಹುದಯ್ಯ" ಎಂದು ಮುಂತಾಗಿ ಬಾಯಲ್ಲಿ ಹೇಳುತ್ತಿದ್ದ ಬಸವಣ್ಣನವರು, ಈಗ ಜಂಗಮವೇ ಬಾಗಿಲಲ್ಲಿ ಬಂದು ನಿಂತಿರಲು ಜಂಗಮವನ್ನು ಉದಾಸೀನಮಾಡಿ ಹುರುಳಿಲ್ಲದ ಲಿಂಗಾರ್ಚನೆಗೆ ಆತುರರಾಗಿದ್ದರು. ಇದನ್ನು ಅಲ್ಲಮನು ವಿಡಂಬಿಸುವನು.

27. **ಪದ್ಯ ೩೩೦.** "ಪ್ರಾಣವಿದು ನೋಡೆಂದು ಪ್ರತಿ ಗುರು....", ಇತ್ಯಾದಿ. ಪ್ರತಿ ಗುರು=ಗುರುರೂಪವನ್ನು ತಾಳಿದ ಶಿವಲಿಂಗವು ಅಥವಾ ಪರಮೇಶ್ವರನು. (ಸಿದ್ಧಾಂತಶಿಖಾಮಣಿ, ೯ನೆಯ ಪರಿಚ್ಛೇದ, ಉಭಯ

ಸ್ಥಲ ; ಶಿವಯೋಗಪ್ರದೀಪಿಕೆ, ಪುಟ ಲ೧) ಪ್ರಾಣವಿದು ನೋಡೆಂದು=ಇದು ಪ್ರಾಣಲಿಂಗವು, ನೋಡು ಎಂಬುದಾಗಿ ಹೇಳಿ, ಅಣತಿಯನಿದಿರಿಡಲು= ಇದನ್ನು ಪ್ರಾಣದಂತೆ ತಿಳಿದು ಶರೀರದಿಂದ ಅಗಲಿಸದೆ ಇರು—ಎಂಬ ಆಜ್ಞೆಯನ್ನು ಕೊಡಲು ("ಪ್ರಾಣವದ್ಧಾರಣೀಯಂ ತತ್ಪ್ರಾಣಲಿಂಗಮಿದಂ ತವ। ಕದಾಚಿತ್ಕುತ್ರಚಿದ್ವಾಪಿ ನ ವಿಯೋಜಯ ದೇಹತಃ ॥ ಯದಿ ಪ್ರಮಾದಾತ್ಪತಿತೇಲಿಂಗೇ ದೇಹಾಸ್ಮಿಹೀತಲೇ । ಪ್ರಾಣಾನ್ವಿಮುಂಚ ಸಹಸಾ ಪ್ರಾಪ್ತಯೇ ಮೋಕ್ಷಸಂಪದಃ"—ಸಿದ್ಧಾಂತಶಿಖಾಮಣಿ, ೬ನೆಯ ಪರಿಚ್ಛೇದ, ಶ್ಲೋಕಗಳು ೨೬–೨೭; "ಪ್ರಾಣವದ್ರಕ್ಷಣೀಯಂ ಹಿ ಪ್ರಾಣಲಿಂಗಮಿದಂತವ । ಉತ್ತಮಾಂಗೇ ಗಲೇ ಕಕ್ಷೇ ತಥಾ ವಕ್ಷಸ್ಸ್ಥಲೇಪಿ ವಾ॥ ಕರಸ್ಥಲೇಪಿ ವಾ ನಿತ್ಯಂ ಸಾವಧಾನೇನ ಧಾರಯ । ಪ್ರಮಾದಾತ್ಪತಿತೇ ಲಿಂಗೇ ಭಿನ್ನೇ ಚೋರಾದಿಭಿರ್ಹೃತೇ । ಪೀಠಾದುತ್ಕ್ರಮಿತೇ ವಾಪಿ ಸಹ ಪ್ರಾಣಾನ್ಪರಿತ್ಯಜ । ಮಯಾ ನಿಯಮಿತಾಚಾರೇ ಪ್ರಸಾದೇ ಪಾದವಾರಿಣಿ॥" ಸೂಕ್ಷ್ಮತಂತ್ರ, ಪಂಚಮ ಪಟಲ, ಶ್ಲೋಕಗಳು ೫೦–೫೨) ಕಣ್ಣಿಗೆ ಕಾಣಿಸುವ ತನ್ನಿಷ್ಟಲಿಂಗವನತಿ ಸಮೇಳದಲಿ—ಅಂತರ್ಲಿಂಗಾನುಸಂಧಾನವು ಸಾಧಕನಿಗೆ ಕಷ್ಟವಾಗಿರುವುದರಿಂದ ನಿಷ್ಕಲಲಿಂಗ ಕಳೆಯನ್ನು ಗುರುವು ಆಕರ್ಷಿಸಿ ಸಕಲವಾದ ಇಷ್ಟಲಿಂಗವಾಗಿ ದೃಗ್ಗೋಚರವಾಗುವಂತೆ ಮಾಡಿ ಕೊಟ್ಟಿದ್ದಾನೆ.

28. **ಪದ್ಯ ೩೫೧.** "ಇಷ್ಟಗುರುವಿಗೆ ತನುವ ಸಲಿಸುತ . . . .", ಇತ್ಯಾದಿ. ಶರೀರಾಭಿಮಾನವನ್ನು ಬಿಟ್ಟು ಗುರುವನ್ನು ಓಲೈಸಬೇಕು; ಮನಸ್ಸು ಅನ್ಯತ್ರ ಚಲಿಸದಂತೆ ಅದನ್ನು ಲಿಂಗದಲ್ಲಿ ನೆಲೆಗೊಳಿಸಬೇಕು. ಧನವನ್ನು ಜಂಗಮಕ್ಕೆ ಅರ್ಪಿಸಬೇಕು. ಇದರಿಂದ ಮದಮೋಹಾದಿಗಳೂ ಹಮ್ಮುಬಿಮ್ಮುಗಳೂ ನಷ್ಟವಾಗುವುವು. ಈ ಬಾಹ್ಯ ಗುರು ಲಿಂಗ ಜಂಗಮಸೇವೆಯಿಂದ ಆಗುವ ಫಲವು ಈ ರೀತಿಯಿರುತ್ತದೆ. ಸ್ಥೂಲ ತನುವಿಗೆ ಸಹಜವಾದ ಪ್ರಕೃತಿ ಗುಣಗಳನ್ನು ಸತ್ಕ್ರಿಯಾಚಾರದಿಂದ ಸುಡುವುದೇ ಗುರುವಿಗೆ ತನುವನ್ನು ಸಲಿಸುವುದರ ಫಲ; ಸೂಕ್ಷ್ಮತನುವಿನಲ್ಲಿ ಪ್ರಾಣಲಿಂಗವನ್ನು ಸಂಬಂಧಿಸಿ ಮನಸ್ಸಿನ ಗುಣಗಳನ್ನು ಸುಜ್ಞಾನ ಎಂಬ ಬೆಂಕಿಯಲ್ಲಿ ಸುಡುವುದೇ ಮನವನ್ನು ಲಿಂಗಕ್ಕೆ ಸಲಿಸುವುದರ ಫಲ; ಕಾರಣ

ಶರೀರದಲ್ಲಿ ಭಾವಲಿಂಗವನ್ನು ಪ್ರತಿಷ್ಠಿಸಿ ಆತ್ಮನಿಗೆ ಸಹಜವಾದ ಕಿಂಚಿದ್ಜ್ಞತೆ ಮುಂತಾದುವನ್ನು ಮಹಾಜ್ಞಾನಾಗ್ನಿಯಲ್ಲಿ ಸುಡುವುದೇ ಜಂಗಮಕ್ಕೆ ಧನವನ್ನು ಸಲಿಸುವುದರ ಫಲ. (ಕಾಡಸಿದ್ಧೇಶ್ವರ ವಚನ ಮತ್ತು ಅದರ ಟೀಕೆಯನ್ನು—ವಚನಶಾಸ್ತ್ರಸಾರ, ಭಾಗ ೧, ಪುಟಗಳು ೩೬೪—೩೬೫ ನೋಡಿ ಹೆಚ್ಚು ವಿವರಗಳನ್ನು ಗ್ರಹಿಸಬಹುದು.)

29. **ಪದ್ಯ ೩೬೪.** "ಪೊಂಪುಳಿಯ ಘನಸೌಖ್ಯ....", ಇತ್ಯಾದಿ. ಈ ಪದ್ಯದ ಅಭಿಪ್ರಾಯ ಈ ರೀತಿಯಿರುತ್ತದೆ—ಸಾಮಾನ್ಯವಾಗಿ ತುಂಬಿಗಳು ಸಂಪಗೆಯ ಹೂವುಗಳ ಬಳಿ ಹೋಗಲಾಗುವುದಿಲ್ಲ ಎಂದು ಹೇಳುವುದು ಕವಿಸಮಯ. ("ಅರಳಾದ ಮಲ್ಲಿಗೆಯ ಪೊದರೊಳಗೆ ತಿರುಗಿದೊಡೆ। ತೆರಳಬಲ್ಲುದೆ ಸಂಪಗೆಯ ಬಸಕೆ ಮರಿದುಂಬಿ।" ಜೈಮಿನಿ ಭಾರತ ಎರಡನೆಯ ಸಂಧಿ, ಪದ್ಯ ೫೭.) ಹೀಗೆಯೆ ಮನುಷ್ಯರು ಕಷ್ಟಸಾಧ್ಯವಾದ ಮೋಕ್ಷಸುಖಕ್ಕೆ ಎಳಸದೆ ಸುಲಭಸಾಧ್ಯಗಳಾದ ವಿಷಯಸುಖಗಳನ್ನೇ ಬಯಸುವರು. ಆದರೆ ಮಹದೇವಿಯಕ್ಕನು ಇತರರಿಗೆ ದುಸ್ಸಾಧ್ಯವಾದ ಮೋಕ್ಷವನ್ನೇ ಎಳಸಿ ವಿಷಯಸುಖಾದಿಗಳನ್ನು ತೊರೆದು ಮೋಕ್ಷಸ್ವರೂಪಿಯಾದ ಅಲ್ಲಮಪ್ರಭುವನ್ನು ಆಶ್ರಯಿಸಿದಳು. ಮನವೆಂಬ ತುಂಬಿಯು ಭಾವ ಮಿಗೆ ತುಂಬಿ—ಮೊದಲನೆಯ ತುಂಬಿ ನಾಮಪದ, ಎರಡನೆಯದು ಕ್ರಿಯಾಪದ. ಸಾಮಾನ್ಯಾರ್ಥವು ಸುಲಭವಾಗಿಯೆ ಇದೆ. ವೀರಶೈವ ತತ್ವದಲ್ಲಿ ತುಂಬಿ ಎಂದರೆ ಪರಿಪೂರ್ಣಾತ್ಮ ಎಂದು ಅಭಿಪ್ರಾಯ ("ತುಂಬಿ ಪರಿಮಳ ಉಂಡುದೋ, ಪರಿಮಳ ತುಂಬಿಯನುಂಡುದೋ, ಲಿಂಗ ಪ್ರಾಣವಾಯಿತೋ, ಪ್ರಾಣ ಲಿಂಗವಾಯಿತೋ ಗುಹೇಶ್ವರಾ ಈ ಉಭಯದ ಭೇದವ ನೀನೆ ಬಲ್ಲೆ", "ತುಂಬಿಯೆಂದರೆ ಪರಿಪೂರ್ಣಕ್ಕೆ ಹೆಸರು...." ಪ್ರಭುದೇವರ ವಚನಗಳು, ಪುಟ ೩೩೬) ಮನಸ್ಸು ಪರಿಪೂರ್ಣ ಭಾವವನ್ನು ತುಂಬಿಕೊಂಡು, ಸರ್ವಜ್ಞತ್ವ ಸರ್ವಶಕ್ತಿತ್ವಾದಿಗಳನ್ನು ಪಡೆದು, ಆತ್ಮನ ಪ್ರಕೃತಿ ಗುಣಗಳನ್ನು (ಆಣವಾದಿ ಮಲಗಳನ್ನು) ಕಳೆದುಕೊಂಡು ಲಿಂಗವಾಗಿದ್ದುದರಿಂದ, ಸಮರಸಭಾವ ಪಳವಟ್ಟು ನಿಷ್ಕಲಲಿಂಗವಾದ ಅಲ್ಲಮಪ್ರಭುವನ್ನು ಸೇರಿದಳು ಎಂದು ವಿಶೇಷಾರ್ಥ.

30. **ಪದ್ಯ ३೬೯.** "ಆಯುತವಸಳವಡಿಸಿ ....", ಇತ್ಯಾದಿ. ಆಯುತ ಲಿಂಗ, ಸ್ವಾಯುತ ಲಿಂಗ, ಸನ್ನಿಹಿತ ಲಿಂಗ ಎಂಬುದಾಗಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳಿಗೆ ಕ್ರಮದಲ್ಲಿ ಹೆಸರು. ("......ಇಂತು ಇಷ್ಟ ಪ್ರಾಣ ಭಾವ ಲಿಂಗಂಗಳು ತನುತ್ರಯಂಗಳಲ್ಲಿ ಆಯುತ, ಸ್ವಾಯುತ, ಸನ್ನಿಹಿತಂಗಳಾಗಲು ಆ ಶರಣನ ಷಡಂಗದಲ್ಲಿ...."—ಶೂ. ಸಂ. ಸಿದ್ಧ ವೀರಣಾರ್ಯನದು, ಪುಟ ೧೭.) ಆಯುತವ=ಇಷ್ಟಲಿಂಗವನ್ನು, ಅಳವಡಿಸಿ= ಧರಿಸಿ, ಸ್ವಾಯುತವ=ಪ್ರಾಣಲಿಂಗವನ್ನು, ಅವಗಯಿಸಬೇಕು=ಅವಗ್ರಹಿಸ ಬೇಕು, ಎಂಬ ಆಯುತಕೆ=ಭಕ್ತಿಯ ವಿಸ್ತಾರಕ್ಕೆ, ಸರ್ವಾಂಗವನು ಸಲಿಸವೆದ ರಾರುಂಟು ಇತ್ಯಾದಿ, ಕಾಯದಲಿ ಕಲಿ ಯಾರು=ದೇಹ ಕಷ್ಟಪಟ್ಟ ಧೀರ ರಾರು? ಲಿಂಗಕ್ಕೆ ಸರ್ವವನ್ನೂ ಅರ್ಪಿಸಬೇಕೆಂದು ಎಲ್ಲರೂ ಬಾಯಲ್ಲಿ ಹೇಳು ವರು. ನಿನ್ನಂತೆ ಭಕ್ತಿಯನ್ನೇ ಸೂರೆಗೊಂಡು ಶರೀರಾಭಿಮಾನವನ್ನು ತೊರೆದು ಲಿಂಗಕ್ಕೆ ಸಮರ್ಪಿಸಿದವರು ಯಾರೂ ಇಲ್ಲ—ಎಂದು ಅಭಿಪ್ರಾಯ.

31. **ಪದ್ಯ ३೭೦.** "ಎಸುತಲಾ ಮಹದೇವಿಯಕ್ಕಗೆ ....", ಇತ್ಯಾದಿ. ತನು ಮನೋ ವಾಯುಗಳ=ದೇಹ ಮನಸ್ಸು ಮತ್ತು ಪ್ರಾಣಗಳ ಸಂಚವನು=ಸಮೂಹವನ್ನು, ಅನಲನಲಿ=ಮಹಾಜ್ಞಾನಾಗ್ನಿ ಯಲ್ಲಿ, ಸಲೆ ಸುಡುವ, ಸಮತೆಯ=ಸರ್ವ ಸಮತಾಭಾವದ, ಜೀವ ಪರಮರನು ಅನುಗೊಳಿಸಿ ನಿರ್ವಯಲವಮಾಡುವ="ನಿಶ್ಯಬ್ದೇ ಕೇವಲೇ ಕುಂಭೇ ಪ್ರಾಪ್ತೋ ವಿಷ್ಣುಪದಂ ಮರುತ್ । ತಥಾ ಖಲು ತಯೋರೈಕ್ಯಂ ಜೀವಾತ್ಮ ಪರಮಾತ್ಮನೋಃ ॥" ಶಿವಯೋಗಪ್ರದೀಪಿಕೆ, ೨ನೆಯ ಪಟಲ, ಶ್ಲೋಕ ೪೭ರ ಅಭಿಪ್ರಾಯದಂತೆ ಕೇವಲ ಕುಂಭಕದಲ್ಲಿ ಪ್ರಾಣವಾಯುವನ್ನು ಬಿಂದ್ವಾಕಾಶಸ್ಥಾನದಲ್ಲಿ (ಭ್ರೂಮಧ್ಯ ಸ್ಥಾನದಲ್ಲಿ) ಸೇರಿಸುವುದೇ ಜೀವಾತ್ಮ ಪರಮಾತ್ಮರನ್ನು ಒಂದಾಗಿ ಸೇರಿಸಿ ಐಕ್ಯಮಾಡುವುದು ಎಂದು ತಿಳಿಯ ತಕ್ಕದ್ದು. "ದೇಹಪಾತ್ರೇ ಜ್ವಲದ್ಜ್ಞಾನವಹ್ನೌ ಭೂತಗುಣಾಧಿಕಂ । ಕ್ಷಿಪ್ತ್ವಾ ದಶಾಂಗವಲ್ಲಿಂಗಂ ಧೂಪಯೇದ್ಧಾರಣಾದ್ಬುಧಃ ॥" (ಶಿವಯೋಗ ಪ್ರದೀಪಿಕೆ, ३ನೆಯ ಪಟಲ, ಶ್ಲೋಕ ३೪ರ ಅಭಿಪ್ರಾಯದಂತೆ)—"ತನು ಮನೋ ವಾಯುಗಳ ಸಂಚವನನಲನಲಿ ಸಲೆ ಸುಡುವ" ಎಂಬುದನ್ನು

ಅರ್ಥಮಾಡಲೂ ಬಹುದು. ಅಲ್ಲಮಪ್ರಭು ನಿರ್ವಿಕಲ್ಪ ಸಮಾಧಿಯ ಉಪದೇಶವನ್ನು ಮಾಡಿದನೆಂದು ಅಭಿಪ್ರಾಯ.

32. **ಪದ್ಯ ೩೭೨.** "ನಿಲಿಸಿ ನಿರ್ವಯಲಿನ ಸಮಾಧಿಯನಳವಡಿಸಿ..", ಇತ್ಯಾದಿ. ಪದ್ಯದ ಕೊನೆಯಲ್ಲಿ "ಏಕಸ್ಥಳವನೆಂದೆನುತ", "ತಸ್ಮಾತ್ತ್ರಿಕೂಟನಾಮಾಪಿ ತ್ರಿವೇಣೀಸಂಗಮಸ್ಥಲಂ। ಶೃಂಗಾಟಕಚತುಃಪೀಠ ನಾಮನ್ಯೇಕಸ್ಥಲಸ್ಯ ಹಿ।" (ಶಿವಯೋಗಪ್ರದೀಪಿಕೆ, ೨ನೆಯ ಪಟಲ, ಶ್ಲೋಕ ೩೭ರ ಅಭಿಪ್ರಾಯದಂತೆ.) 'ಏಕಸ್ಥಲ' ಎಂಬುದು ಭ್ರೂಮಧ್ಯಸ್ಥಾನಕ್ಕೆ ಅನ್ವಯಿಸುವುದೆಂದು ತಿಳಿಯಬೇಕು. ಈ ಭ್ರೂಮಧ್ಯಸ್ಥಾನವು ಮಹಾಲಿಂಗದ ಸ್ಥಾನವಾಗಿರುವುದೆಂದು ಶಿವಯೋಗಿಗಳು ಹೇಳುವರು. ಈ ಮಹಾಲಿಂಗ ಸ್ಥಲದ ಅನುಸಂಧಾನವನ್ನು ಅಲ್ಲಮಪ್ರಭು ಬಸವಣ್ಣನವರಿಗೆ ಉಪದೇಶಿಸಲು ತೊಡಗಿದನೆಂದು ತಿಳಿಯಬೇಕು.

33. **ಪದ್ಯ ೩೭೩.** "ಗಿಡವಳುಕಿ ಹೂ ಪತ್ರೆಗೋಸುಗ ....", ಇತ್ಯಾದಿ. ಈ ಪದ್ಯದಲ್ಲಿ ಬಿಂದುನಾದಾತ್ಮಕವಾದ ಪ್ರಾಣಲಿಂಗದ ಪೂಜೆಯೇ ಮೇಲೆಂದು ಅಲ್ಲಮಪ್ರಭು ತಿಳಿಸುತ್ತಾನೆ. "ಆತ್ಮಲಿಂಗಮಿದಂ ಪಶ್ಯನ್ಕಿಮನ್ಯೈಃ ಕರ್ಮವಿಭ್ರಮೈಃ। ಅಹಿಂಸಾದ್ಯಷ್ಟಪುಷ್ಪೈಸ್ತನ್ಮಾನಸ್ಯೈರಂಗಪೂಜಯ॥" ಶಿವಯೋಗಪ್ರದೀಪಿಕೆ, ೫ನೆಯ ಪಟಲ, ೧೧ನೆಯ ಶ್ಲೋಕದ ಅಭಿಪ್ರಾಯದಂತೆಯೂ, "ವೈರಾಗ್ಯಜ್ಞಾನಯುಕ್ತಾನಾಂ ಯೋಗಿನಾಂ ಸ್ಥಿರ ಚೇತಸಾಂ। ಅಂತರ್ಲಿಂಗಾನುಸಂಧಾನೇ ರುಚಿರ್ಬಾಹ್ಯೇ ನ ಜಾಯತೇ॥" ಎಂದು ಮುಂತಾದ ಸಿದ್ಧಾಂತಶಿಖಾಮಣಿ ೬ನೆಯ ಪರಿಚ್ಛೇದದ ಶ್ಲೋಕಗಳ ಅಭಿಪ್ರಾಯದಂತೆಯೂ ಬಾಹ್ಯಭಕ್ತಿಯನ್ನು ಅಲ್ಲಮಪ್ರಭು ತಿರಸ್ಕರಿಸಿ ಉಪದೇಶಮಾಡುತ್ತಾನೆ.

34. **ಪದ್ಯ ೩೭೪.** "ಉಸುರು ಗರಗಸದಲ್ಲಿ ತನುವಿನ ಬೆಸುಗೆಯನು..", ಇತ್ಯಾದಿ. ನಿಶ್ವಾಸೋಚ್ಛ್ವಾಸಗಳು ಆಡುತ್ತ ಆಯುಸ್ಸನ್ನು ಕೊಯ್ದು ಕಡಮೆಮಾಡುವುವು. ಆದುದರಿಂದ ಕುಂಭಕಾಭ್ಯಾಸದಿಂದ ಪ್ರಾಣವಾಯುವನ್ನು ನಿಲ್ಲಿಸಿದರೆ ಮರಣವನ್ನು ಗೆಲ್ಲಬಹುದು. ತನುವಿನ ಬೆಸುಗೆಯನು=ಕಾಯ ಮತ್ತು ಜೀವ ಕೂಡಿರುವುದನ್ನು, ಬಿಡಮಾಡಿ=

ಬಿಡುವಂತೆ ಮಾಡಿ, ಬಸುರಿದನೆ=ಮರಣಕ್ಕೆ ತುತ್ತಾಗದೆ, ಹಸು ತೃಷೆಯು ಹರಿಹುಗಿಲಿನ=ಹಸಿವು ಬಾಯಾರಿಕೆ ಮುಂತಾದುವುಗಳ ಪ್ರವೇಶದ, ಉಸಟಳ ಕೆಂಡೆ ಮುಟುಗುದದೆ=ಹಸಿವು ಬಾಯಾರಿಕೆ ಮೊದಲಾದ ಶಾರೀರಿಕ ವ್ಯಾಪಾರಗಳಿಗೊಳಗಾಗದೆ, ದಶವಿಧೇಂದ್ರಿಯ ಧಾಳಿಯಲಿ=ಜ್ಞಾನೇಂದ್ರಿಯಗಳು ಐದು, ಕರ್ಮೇಂದ್ರಿಯಗಳು ಐದು, ಇವುಗಳ ಮುತ್ತಿಗೆಯಲ್ಲಿ ಎದೆಗೆಡದೆ–ಇಂದ್ರಿಯಾಧೀನನಾಗದೆ ಎಂದು ಅಭಿಪ್ರಾಯ. ಸಿದ್ಧರಾಮನು ಪ್ರಾಣಲಿಂಗದ ಸಿದ್ಧಿಯನ್ನು ಪಡೆದಿದ್ದವನಾದ್ದರಿಂದ ಆತನ ಉದಾಹರಣೆಯನ್ನು ಅಲ್ಲಮಪ್ರಭು ಕೊಟ್ಟನೆಂದು ತಿಳಿಯಬೇಕು.

35. **ಪದ್ಯ ೩೭೯.** "ಅವಧಾರಿಸಿ ಕೇಳು....", ಇತ್ಯಾದಿ. ತನುವಿಡಿದು ಕಾಬುದು ತಾ ಸಮಸ್ತವನು=ಮನುಷ್ಯ ಶರೀರದಿಂದಲೆ ಸಮಸ್ತವನ್ನೂ ಸಾಧನೆ ಮಾಡಬೇಕು ಎಂದು ಅಭಿಪ್ರಾಯ. ಇಂದ್ರಿಯಾದಿಗಳನ್ನು ವಿಷಯಗಳ ಕಡೆಗೆ ಹರಿಸದೆ ಇಂದ್ರಿಯಗಳಲ್ಲಿ ಪ್ರತಿಷ್ಠಿತವಾಗಿರುವ ಆಚಾರಾದಿ ಷಡ್ಲಿಂಗಗಳನ್ನೂ ಅವುಗಳ ಸ್ವರೂಪವನ್ನೂ ತಿಳಿದು ಸರ್ವಾಂಗ ಲಿಂಗಿಯಾಗಬೇಕು. ಆದರಿಂ ಈ ತನುವ, ಲಿಂಗೋಪಾದಿಯಲಿ ಭೋಗಿಸಿ ಕೊಳುತವೆ—"ಮನ ಉಂಟೆ ಮರುಳೇ ಶಿವಯೋಗಿಗೆ? ಮತ್ತೊನ್ನೆ ಮನ ಮಗ್ನ ಉಂಟೆ ಶಿವಯೋಗಿಗೆ? ಇಲ್ಲದ ಮನ ಉಂಟೆಂದು ನುಡಿದು ಅಡಗಿಸಿದೆನೆಂಬ ಮಾತು ಮನದ ನೆಲೆಮಾಡಿ ತೋರುತ್ತಿದೆ. ಗುಹೇಶ್ವರನನರಿದ ಶರಣಂಗೆ ತೋರಲಿಲ್ಲ ಅಡಗಲಿಲ್ಲ ಕೇಳಾ" ಎಂಬ ವಚನದ ಅಭಿಪ್ರಾಯದಂತೆ ಕರಣಗಳೆಲ್ಲ ಲಿಂಗ ಕರಣಗಳಾಗಿ ಮನಸ್ಸು ಲಯವಾಗಿ ಸಾಕ್ಷಾತ್ ಲಿಂಗ ಸ್ವರೂಪಿಯೇ ಆಗಬೇಕು. ಈ ಶರೀರವು ವಿಶ್ವರೂಪದ ಪ್ರತಿರೂಪವೆಂದು ತಿಳಿದು ಆಚರಿಸಬೇಕು. ನಾನು ಮಾಡುತ್ತೇನೆ, ನಾನು ಭೋಗಿಸುತ್ತೇನೆ–ಇತ್ಯಾದಿ ಭಾವಗಳೆಲ್ಲ ಹೋಗಬೇಕು; ಕರಣ ವ್ಯಾಪಾರವೆಲ್ಲ ಲಿಂಗ ವ್ಯಾಪಾರವೇ ಆಗಿರುವುದರಿಂದ ಸ್ವಯಂ ಲಿಂಗವೆಂದು ತಿಳಿಯಬೇಕು.

36. **ಪದ್ಯ ೩೮೧.** "ತನ್ನೊಳಗೆ ಗುರು ಲಿಂಗ ಜಂಗಮ ....", ಇತ್ಯಾದಿ. ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಮಂತ್ರ, ಪಾದೋದಕ, ಪ್ರಸಾದ, ಎಂಬೀ ಎಂಟು ಅಷ್ಟಾವರಣಗಳು. ಸತ್ಕ್ರಿಯಾಚಾರಗಳು ಏರ್ಪಡುವುದಕ್ಕೆ ಈ ಎಂಟು ಆವರಣಗಳನ್ನು ಸಿದ್ಧಾಂತದಲ್ಲಿ ಹೇಳಿ

ದ್ದಾರೆ. ಬಾಹ್ಯದಲ್ಲಿ ಅಷ್ಟಾವರಣಗಳನ್ನು ಪಾಲಿಸಿಕೊಂಡು ಬಂದರೆ ಒಳಗೆ ಬೆಳಕು ಕಂಡು ಸ್ವಸ್ವರೂಪ ಜ್ಞಾನವುಂಟಾಗುತ್ತದೆ. ಬಾಹ್ಯದ ಅಷ್ಟಾವರಣಗಳೇ ಧ್ಯೇಯಗಳಲ್ಲ, ಅವು ಒಳಗಿನವನ್ನು ತಿಳಿಯುವುದಕ್ಕೆ ಸಾಧನಗಳೆಂದು ಅಲ್ಲಮಪ್ರಭು ತಿಳಿಸುತ್ತಾನೆ. ಗುರು ಲಿಂಗ ಜಂಗಮ ಕ್ರಮವಾಗಿ ನಾದ ಬಿಂದು ಕಳೆಗಳೆಂದು ತನ್ನೊಳಗೆ ಸಾಧಕನು ತಿಳಿಯುವಂತೆ ಆಗಬೇಕು. (ಶಿವಯೋಗ ಪ್ರದೀಪಿಕೆ, ಪುಟ ೯೮, ೪ನೆಯ ಪಟಲ, ಶ್ಲೋಕ ೩೨-೩೭ ಟೀಕು.) ಪಾದೋದಕಾಮೃತ—ಇದು ಬಾಹ್ಯದಲ್ಲಿ ದಶವಿಧವಾಗಿದೆ:—ಗುರು ಪಾದೋದಕ, ಲಿಂಗ ಪಾದೋದಕ, ಜಂಗಮ ಪಾದೋದಕ, ಇತ್ಯಾದಿ. ಸಾಧಕನಿಗೆ "ಸಹಸ್ರಾರಪದ್ಮಸ್ಥಿತಾಪಾರಧಾರಾಂ ಸುಧಾಮಾಧುರೀಂ ಸಾಧುರೀತ್ಯಾ ಪಿಬದ್ಭಿಃ। ಚಿದಾನಂದಕಂದೈರ್ಮಹಾಯೋಗಿವೃಂದೈಸ್ಸದಾ ಸೇವ್ಯಮಾನಂ ಸಮುದ್ಬುದ್ಧಮಾನಾಂ" (ವೀರಶೈವಧರ್ಮಶಿರೋಮಣಿ, ಪುಟ ೨೪೯, ಉದಾಹೃತ ಶ್ಲೋಕ ೯೫) ಎಂಬುದರ ಅಭಿಪ್ರಾಯದಂತೆ, ಸಹಸ್ರದಳ ಕಮಲದ ಮಧ್ಯದಲ್ಲಿನ ವಿಧುಮಂಡಲದಿಂದ ಸ್ರವಿಸುವ ಅಮೃತಜಲವೇ ಪಾದೋದಕಾಮೃತ; ಪರಮಪ್ರಸಾದ—ತೃಪ್ತಿ—ಆನಂದ ರೂಪವಾದುದು. "ಪರಮ ಸದ್ಭಕ್ತನಾದ ವೀರಶೈವನಿಗೆ ಗುರು ಲಿಂಗ ಜಂಗಮರೆಂದರೆ ಸಾಕ್ಷಾತ್ ಪರಶಿವನ ಸ್ವರೂಪಗಳು; ಪಾದೋದಕವೆಂದರೆ ಪರಶಿವನ ಜ್ಞಾನರಸವು; ಪ್ರಸಾದವೆಂದರೆ ಶಿವನ ಕರುಣಾಮೃತವು; ವಿಭೂತಿಯೆಂದರೆ ಆ ಶಂಭುವಿನ ದಿವ್ಯತೇಜವು; ರುದ್ರಾಕ್ಷಿಯೆಂದರೆ ಆ ಪಶುಪತಿಯ ನೇತ್ರವು; ಮಂತ್ರವೆಂದರೆ ಶಿವನ ವಾಕ್ಯವು." (ಶಿವಾನುಭವ, ಬಾಹ್ಯ ಅಷ್ಟಾವರಣಗಳು, ಪುಟ ೨೭೧—೨೭೨, ೧೯೩೪ನೆಯ ಜನವರಿ ಸಂಚಿಕೆ.)

37. **ಪದ್ಯ ೩೯೬.** "ಕಾಯವೆಂಬುದು ತಾನು ಮಾಯಾಕಾಯವಾಗಿಹುದಿಂತು..", ಇತ್ಯಾದಿ. ದೇಹವು ಮಾಯೆಯ ವಿಕಾರವೇ ಆಗಿದೆ. ಪಂಚಭೂತಗಳೂ, ಅವುಗಳ ಪಂಚೀಕರಣಗಳೂ ಸೇರಿ ಮಾಯೆಯು ಅಜ್ಞಾನಮಯ ರಚಿಸಿದ್ದಾಗಿದೆ. ತನ್ನೊಂದು ಅಮೃತದ ತಿಳಿವೆಂಬುದು ಇದು ಕಾಪಾಲ ಮಾರ್ಗವಲ್ಲ. ಈ ದೇಹವು ನಷ್ಟವಾಗದಂತೆ ಮುಕ್ತಿಯನ್ನು ಸಿದ್ಧಿಯ ಮೂಲಕ ಪಡೆದಿದ್ದೇನೆ, ಹೀಗೆ ಮಾಯೆಯನ್ನು ಗೆದ್ದಿದ್ದೇನೆ; ಈ ದೇಹಕ್ಕೆ ಮೋಕ್ಷವಾಗಿದೆ ಎಂದು ಗೋರಕ್ಷನ ಅಭಿಪ್ರಾಯ.

38. **ಪದ್ಯ ೪೦೮.** "ಕಾಯ ಬಲಿದಡೆ..", ಇತ್ಯಾದಿ. ದೇಹ ಗಟ್ಟಿಯಾದರೆ ಮಾಯೆಯನ್ನು ಗೆದ್ದಹಾಗೆ ಆಗಲಿಲ್ಲ—ಎಂದು ಅಲ್ಲಮಪ್ರಭು ತಿಳಿಸುತ್ತಾನೆ. ಕಾಯ ಬಲಿದಡೆ=ದೇಹವು ನಷ್ಟವಾಗದಂತೆ ಗಟ್ಟಿಯಾದರೆ, ಮಾಯೆ=ಶರೀರಾಭಿಮಾನವು—ಅಹಂಭಾವ, ಅಭಿಮಾನಾದಿಗಳು ಮಾಯೆಯ ಕಾರ್ಯಗಳೆಂದು ತಿಳಿಯತಕ್ಕದ್ದು. "ಬ್ರಹ್ಮ ಘನವೆಂಬೆನೆ? ಬ್ರಹ್ಮನ ನುಂಗಿತ್ತು ಮಾಯೆ, ವಿಷ್ಣು ಘನವೆಂಬೆನೆ? ವಿಷ್ಣುವ ನುಂಗಿತ್ತು ಮಾಯೆ. ರುದ್ರ ಘನ ವೆಂಬೆನೆ? ರುದ್ರನ ನುಂಗಿತ್ತು ಮಾಯೆ. ತಾ ಘನವೆಂಬೆನೆ? ತನ್ನ ನುಂಗಿತ್ತು ಮಾಯೆ. ಇಂತು ಸರ್ವವು ನಿನ್ನ ಮಾಯೆ. ಒಬ್ಬರನ್ನೊಬ್ಬರನೊಳ ಕೊಂಡಿತ್ತು ಹೇಳಾ ಗುಹೇಶ್ವರಾ" ಎಂಬ ವಚನಾಭಿಪ್ರಾಯದಂತೆ ರಾಜಸ, ಸಾತ್ವಿಕ, ತಾಮಸಾಹಂಕಾರಗಳಲ್ಲಿ ಸಿಕ್ಕಿ ಬ್ರಹ್ಮವಿಷ್ಣ್ವಾದಿಗಳೇ ಮಾಯಾಧೀನರಾಗಿರುವುದರಿಂದ ಕಾಯ ಬಲಿದಡೆ ಶರೀರಾಭಿಮಾನವು ಹೆಚ್ಚಿ ಮಾಯೆಯ ಪ್ರಭಾವವು ಅಧಿಕವಾಗಿಯೇ ಕಂಡುಬರುತ್ತದೆ. ಇಂದ್ರಿಯಾದಿ ಗಳ ಪಟುತ್ವವೂ ಹೆಚ್ಚಿ ಪ್ರಪಂಚವಾಸನೆ ಹೆಚ್ಚುವುದರಿಂದ ಮಾಯೆ ಬಲಿದಡೆ ಛಾಯೆ ಬಲಿಯುವುದು, ಛಾಯೆ=ಪ್ರಪಂಚ ವಾಸನೆ. ಕಾಯ ಮಾಯಾ ಛಾಯೆ ಬಲಿದಡೆ ಸಿದ್ಧನವನಲ್ಲ. ಆದುದರಿಂದ, ಈ ದೇಹ ಅದರ ಪ್ರಕೃತಿ ಗುಣಗಳು, ಮಾಯೆಯ ಕಾರ್ಯಗಳಾದ ಅಹಂಕಾರಾದಿಗಳು ಪ್ರಪಂಚದ ಆಸೆ ವಾಸನೆಗಳು ಇವುಗಳ ಆಗಿನ ದಾಯವನು=ಫಲರೂಪವನ್ನು, ನೆಟ್ಟನೆ ಕಳೆದನಾದಡೆ—ಇತ್ಯಾದಿ.

39. **ಪದ್ಯ ೪೧೭.** "ಲೇಪಿಸಿದಹಂಕಾರವೇ ಪಶು ....", ಇತ್ಯಾದಿ. ಆತ್ಮಯಾಗದ ವಿವರನ್ನು ಕವಿ ಈ ಪದ್ಯದಲ್ಲಿ ಹೇಳಿದ್ದಾನೆ. ಸಂಹಾರವಾಗಬೇಕಾದ ಪಶು ಅಹಂಕಾರವೆನ್ನುವುದು; ಮನಸ್ಸು ಎಂಬುದೇ ಯೂಗಸ್ತಂಭ—ಹಗ್ಗದಿಂದ ಪಶುವನ್ನು ಕಂಭಕ್ಕೆ ಕಟ್ಟುವಾಗ ಪಶುವೂ ಬಿಗಿಯಲ್ಪಡುತ್ತದೆ, ಕಂಬವೂ ಬಿಗಿಯಲ್ಪಡುತ್ತದೆ; ಮನಸ್ಸು ಏಕೋ ಭಾವದಲ್ಲಿ ಕಟ್ಟಲ್ಪಡುವುದು ಎಂದು ಅಭಿಪ್ರಾಯ. ಬಂಧಿಸುವ ಪಾಶ ಬಂಧಿಸುವ ಹಗ್ಗ, ಪವನಸ್ಥಾಪಿತ=ವಾಯುವನ್ನು ಕುಂಭಕ ಮಾಡುವುದು; (ವಾಯುವಿನ ಹರಿದಾಟ ನಿಂತರೆ ಕಣ್ಣಾಲಿಗಳು ನಿಲ್ಲುವುವು, ಕಣ್ಣಾಲಿಗಳು ಸ್ತಬ್ಧವಾದರೆ ಮನಸ್ಸಿನ ಹರಿದಾಟ ನಿಲ್ಲುವುದು, ಆಗ ವಿವೇಕೋದಯ

ವಾಗುವುದು)—ಅಹಂಕಾರವನ್ನು ಛೇದಿಸುವ ಶಸ್ತ್ರವೇ ಇದು. ವಿವೇಕೋದಯದಿಂದ ಸುಜ್ಞಾನವುಂಟಾಗುವುದು. ಮಲತ್ರಯಗಳನ್ನೂ ಕರ್ಮತ್ರಯಗಳನ್ನೂ ಸುಡುವ ಬೆಂಕಿಯೇ ಇದು. ಇದರಿಂದ ಆತ್ಮನು ಶುದ್ಧನಾಗಿ ಅಂಗಸ್ವರೂಪನಾಗಿ ಸ್ವಸ್ವರೂಪಜ್ಞಾನದಿಂದ ಯಾಗಮಾಡುವ ಯಜಮಾನನಾಗುವನು. ಅಂಗಲಿಂಗಗಳ ಸಾಮರಸ್ಯವುಂಟಾಗುವುದು.

40. **ಪದ್ಯ ೪೧೮.** "ಮಿಥ್ಯವೆಲ್ಲವು ಹೋಮದಾಹುತಿ . . . .", ಇತ್ಯಾದಿ. ಮದಮೋಹಾದಿ ಅರಿಷಡ್ವರ್ಗಗಳು ಹೋಮದಾಹುತಿ; ಮಾಯಾಧೀನನಾಗಿ ಇಲ್ಲದುದನ್ನು ತಾನೆಂದು ತಿಳಿದಿರುವುದು—ಇದೇ ಮಿಥ್ಯೆ—ಅಗ್ನಿಗೆ ಆಹುತಿಯಾಗತಕ್ಕದ್ದು (ಜ್ಞಾನಾಗ್ನಿಯಲ್ಲಿ). ಆ ಅಗ್ನಿಯಲ್ಲಿ ಸುಡದೆ ನಿಲ್ಲುವ ಶಿವತತ್ವವೆಂಬ ಸತ್ಯಾಂಶವೇ ತಾನು ಭುಂಜಿಸತಕ್ಕ ಪ್ರಸಾದ. ಆ ಶಿವತತ್ವದಲ್ಲಿರುವ ಆನಂದ ರಸಾಸ್ವಾದನೆಯೇ ತೃಪ್ತಿ. ಬಾಹ್ಯಾಭ್ಯಂತರಗಳಲ್ಲಿ ವ್ಯಾಪಿಸಿದ ಆನಂದದ ಪರಿಣಾಮವೇ ತೃಪ್ತಿ. ಸಚ್ಚಿದಾನಂದಸ್ವರೂಪವೇ ತಾನೆಂಬರಿವುದು—ತಾನಾಗುವುದು—ಫಲ.

41. **ಪದ್ಯ ೪೨೩.** "ಅನುಗೊಳಿಸಿದನು ಶೂನ್ಯಸಿಂಹಾಸನವಿದೆಂದದ ಕಿಟ್ಟು ಹೆಸರನು . . . .", ಇತ್ಯಾದಿ. ಶೂನ್ಯಸಿಂಹಾಸನ ಎಂದರೆ ಭಕ್ತನ ಪಶ್ಚಿಮ ಹೃದಯ ಸ್ಥಾನವು. ಬ್ರಹ್ಮರಂಧ್ರಕ್ಕೆ ಪಶ್ಚಿಮದಲ್ಲಿ ಪರವಸ್ತು ಇರುವುದೆಂದು ಸಿದ್ಧಾಂತಕಾರರು ಹೇಳುತ್ತಾರೆ. 'ಶೂನ್ಯ' ಎನ್ನುವುದು ಪರವಸ್ತುವಿಗೇ ಹೆಸರು ಎಂದು ತಿಳಿಯತಕ್ಕದ್ದು. "ದಿವ್ಯ ಪ್ರಕಾಶದೊಳ್ ಮುಳುಂಗಿದುದೇ ಶೂನ್ಯಭಾವವೆಂದರ್ಥ." (ಶಿವಯೋಗಪ್ರದೀಪಿಕೆ, ೫ನೆಯ ಪಟಲ, ೩೮ನೆಯ ಶ್ಲೋಕದ ಅರ್ಥ.) ವೀರಶೈವ ತತ್ವದಲ್ಲಿ ಆಚಾರಾದಿ ಷಡ್ಲಿಂಗಗಳಲ್ಲದೆ, ಇನ್ನೂ ಮೂರು ಲಿಂಗಗಳನ್ನು ಹೇಳಿದ್ದಾರೆ. ಬಸವಣ್ಣನವರು ಶಿವಯೋಗ ಸಾಧನೆಯನ್ನು ಮಾಡಿದವರಾದ್ದರಿಂದ ಆಯಾ ಲಿಂಗದ ಸ್ವರೂಪವನ್ನು ತಿಳಿದವರಾಗಿದ್ದರು. ತಮ್ಮ ಅನುಭವವನ್ನು ಬಾಹ್ಯದಲ್ಲಿ ತೋರಿಸಿಕೊಟ್ಟು ಪಶ್ಚಿಮ ಹೃದಯ ಸ್ಥಾನದಲ್ಲಿ ತಾವು ಕಂಡ ಶಿವಪ್ರಕಾಶದ ವ್ಯಕ್ತರೂಪನಾದ ಅಲ್ಲಮಪ್ರಭುವನ್ನು ಆ ಶೂನ್ಯ ಸಿಂಹಾಸನದಲ್ಲಿ ಕುಳ್ಳಿರಿಸಲು ಏರ್ಪಾಟು ಮಾಡಿದರು. ಆಧಾರ, ಸ್ವಾಧಿಷ್ಠಾನಾದಿ ಷಟ್ಚಕ್ರಗಳಲ್ಲಿ ರಂಜಿಸುವ ಲಿಂಗಗಳನ್ನೂ ಚಂದ್ರನಾಡಿ, ಸೂರ್ಯನಾಡಿ, ಸುಷುಮ್ನಾ

ನಾಡಿಗಳನ್ನೂ, ಕುಂಡಲಿನೀ ಶಕ್ತಿಯನ್ನೂ ತೋರಿಸುವಂತೆ ರಚನೆ ಮಾಡಿದರು. ಲಿಂಗಗಳ ಜ್ಯೋತಿ ಈ ರೀತಿ ಇರುವುದೆಂದು ಶಿವ ಯೋಗಿಗಳು ಹೇಳುತ್ತಾರೆ. "ಪ್ರಾಣಲಿಂಗದ ಕಳೆ ಎಂದಡೆ, ಆಧಾರದಲ್ಲಿ ಎಳೆಯ ಸೂರ್ಯನಂತೆ ಬೆಳಗುತ್ತಿರ್ಪುದು ನೋಡಾ. ಸ್ವಾಧಿಷ್ಠಾನದಲ್ಲಿ ಪೌರ್ಣಿಮೆಯ ಚಂದ್ರನಂತೆ ಬೆಳಗುತ್ತಿರ್ಪುದು ನೋಡಾ. ಪ್ರಾಣ ಲಿಂಗವು ಮಣಿಪೂರಕದಲ್ಲಿ ಮಿಂಚಿನ ಲತೆಯಂತೆ ಬೆಳಗುತ್ತಿರ್ಪುದು ನೋಡಾ. ಪ್ರಾಣಲಿಂಗವು ಅನಾಹತದಲ್ಲಿ ಸ್ಫಟಿಕದ ಶಲಾಕೆಯಂತೆ ಬೆಳಗುತ್ತಿರ್ಪುದು ನೋಡಾ. ಪ್ರಾಣಲಿಂಗವು ವಿಶುದ್ಧಿಯಲ್ಲಿ ಮೌಕ್ತಿಕದ ಗೊಂಚಲಂತೆ ಬೆಳಗುತ್ತಿರ್ಪುದು ನೋಡಾ. ಪ್ರಾಣಲಿಂಗವು ಆಜ್ಞೆಯಲ್ಲಿ ರತ್ನದೀಪ್ತಿ ಯಂತೆ ಬೆಳಗುತ್ತಿರ್ಪುದು ನೋಡಾ. ಪ್ರಾಣಲಿಂಗವು ಬ್ರಹ್ಮರಂಧ್ರದಲ್ಲಿ ಸ್ವಯಂಜ್ಯೋತಿಯಂತೆ ಬೆಳಗುತ್ತಿರ್ಪುದು ನೋಡಾ. ಪ್ರಾಣಲಿಂಗವು ಶಿಖೆಯಲ್ಲಿ ಶುದ್ಧತಾರೆಯಂತೆ ಬೆಳಗುತ್ತಿರ್ಪುದು ನೋಡಾ. ಪಶ್ಚಿಮದಲ್ಲಿ ಉಳಕ ನಕ್ಷತ್ರದಂತೆ ಬೆಳಗುತ್ತಿರ್ಪುದು ನೋಡಾ ಪ್ರಾಣಲಿಂಗವು" (ಅಖಂಡೇಶ್ವರ ವಚನ). ಶಿವಯೋಗಪ್ರದೀಪಿಕೆಯಲ್ಲಿ ೫ನೆಯ ಪಟಲ, ೧೦ನೆಯ ಶ್ಲೋಕದಲ್ಲಿ ಹೀಗೆ ಹೇಳಿದೆ:—

"ಪೂರ್ಣೇಂದುಬಿಂಬಮಿವ ಸನ್ಮಣಿದೀಪಿಕೇವ ಮಧ್ಯಾಹ್ನಸೂರ್ಯ ಇವ ವಹ್ನಿಶಿಖೇವ ನಿತ್ಯಂ । ವಿದ್ಯುತ್ಪ್ರಭೇವ ಶಿವಲಿಂಗಮಹೋ ವಿಚಿತ್ರಂ ಲಕ್ಷ್ಯಾಂತರೇ ಜ್ವಲತಿ ಪಶ್ಯತು ಚಕ್ಷುರಗ್ರೇ ।"

ಬಸವಣ್ಣನವರು ಆಯಾ ಸ್ಥಾನಗಳಲ್ಲಿರುವ ಪ್ರಕಾಶವನ್ನು ಸಾಮಾನ್ಯ ಜನರಿಗೆ ಬಾಹ್ಯದಲ್ಲಿ ತೋರಿಸಲು ಕನಕ, ಮರಕತ, ಮುಂತಾದ ಮುಖ್ಯ ವಾದ ಮಣಿಗಳನ್ನು ಉಪಯೋಗಿಸಿ ಶೂನ್ಯಸಿಂಹಾಸನವನ್ನು ಸಿದ್ಧ ಗೊಳಿಸಿದರು.

———

# ಶಬ್ದಕೋಶ

## ಅ

| | | |
|---|---|---|
| ಅಕ್ಕಜ | ೧೨೩ | ಆಶ್ಚರ್ಯ |
| ಅಕ್ಕಱು | ೧೨೩ | ಪ್ರೀತಿ |
| ಅಂಗವಟ್ಟ | ೬೪ | ಅಂಗಸೌಷ್ಠವ, ದೇಹರಚನೆ |
| ಅಂಗವಣೆ | ೨೮೭ | ಪರಾಕ್ರಮ |
| ಅಗ್ಗದ | ೩೭೨ | ಹೆಚ್ಚಿನ, ಶ್ರೇಷ್ಠನಾದ |
| ಅಗ್ಗಳೆಯತನ | ೨೫೭ | ಹಿರಿಯತನ |
| ಅಟಮಟಿಗತನ | ೧೬೧ | ಮೋಸ |
| ಅಟಮಟಿಸು | ೩೫೨ | ಉಪಾಯದಿಂದ ಬಿಡಿಸು |
| ಅಡಬಳ | ೧೮೬ | ಮಾಂಸ |
| ಅಡರು | ೧೩ | ಹತ್ತು |
| ಅಡಸು | ೩೨೪ | ಪ್ರಾಪ್ತವಾಗು |
| ಅಡ್ಡಣಿಗೆ | ೪೪೯ | ಮುಕ್ಕಾಲು ಮಣೆ |
| ಅಣಕ | ೧೯೫ | ಹಾಸ್ಯ, ಕುಚೋದ್ಯ |
| ಅಣೆ | ೪೦೭ | ಚುಚ್ಚು |
| ಅರ್ತಿ | ೫೪ | ಪ್ರೀತಿ |
| ಅತುಳ | ೧೯೯ | ಹೆಚ್ಚಾದ, ಎಣೆಯಿಲ್ಲದ |
| ಅರ್ಥ | ೩೩ | ಹಣ, ದ್ರವ್ಯ |
| ಅರ್ಥಿ | ೩೩ | (ಹಣವನ್ನು) ಯಾಚಿಸುವವನು |
| ಅದಟು | ೨೫ | ಪರಾಕ್ರಮ |
| ಅಂದವಿಗರು | ೩೧೭ | ರೂಪಿಗಳು |
| ಅನುಕರಿಸು | ೬೦ | ಅನುಕರಣ ಮಾಡು, ಹೇಳಿ ಕೊಟ್ಟಂತೆ ಮಾಡು |
| ಅನುಗೂಡಿ | ೩೮೩ | ಸಿದ್ಧರಾಗಿ (ಕಾರ್ಯವನ್ನು) ಕೈಕೊಂಡು |
| ಅನುಭಾವಿ | ೧೨೮ | ಅನುಭವವುಳ್ಳವ, ಜ್ಞಾನಿ |
| ಅನ್ಯಾಪದೇಶ | ೨೪೬ | ಬೇರೆ ರೀತಿ |

| | | |
|---|---|---|
| ಅಱತವು | ೧೫೭ | ಬತ್ತಿದವು |
| ಅರಿದು | ೨೨ | ಅಸಾಧ್ಯ |
| ಅಱಿವು | ೨೧ | ತಿಳಿವಳಿಕೆ, ಜ್ಞಾನ |
| ಅಱಿಯಟ್ಟು | ೪೩೨ | ಓಡಿಸಿಕೊಂಡುಹೋಗು |
| ಅಲಂಪು | ೩೬೪ | ಸಂತೋಷ |
| ಅಸಿಯ | ೬೫ | ತೆಳುವಾದ |
| ಅಳಬಳ | ೧೪೬ | ಸಾಮರ್ಥ್ಯ, ಮಾಹಾತ್ಮ್ಯ |
| ಅಳಲು | ೨೫೮ | ದುಃಖ |
| ಅಳವಿ | ೬೯ | ಸಾಮರ್ಥ್ಯ, ಶಕ್ತಿ |
| ಅಳಿವುದೇ | ೮೭ | ನಷ್ಟವಾಗುವುದೇ |
| ಅಳುಕಿ | ೩೭೩ | ಭಯಪಟ್ಟು |
| ಅಳುಪು | ೭೬ | ಆಸೆಪಡು |

ಆ

| | | |
|---|---|---|
| ಆಡುವೊಲ | ೫೩ | ಆಟದ ಬಯಲು |
| ಆಣತಿ | ೩೫೦ | ಅಪ್ಪಣೆ, ಆಜ್ಞೆ |
| ಆತು | ೧೨೨ | ಒದಗಿ, ಸೇರಿ (ಧಾತು—ಆನು) |
| ಆನು | ೨೭೮ | ಎದುರಿಸು, ಪ್ರತಿಭಟಿಸು |
| ಆಯತ | ೧೦೦ | ವಿಸ್ತಾರ |
| ಆರವೆ | ೩೦೬ | ಆರಾಮ, ತೋಟ |
| ಆಱನು | ೧೩೪ | ಶಕ್ತಿಯಿಲ್ಲ, ಸಮರ್ಥಳಲ್ಲ |
| ಆರೂಢ | ೪೦೫ | ಏರಿರುವಿಕೆ, ಪಡೆದಿರುವಿಕೆ |
| ಆರೋಗಣೆ | ೪೪೨ | ಭೋಜನ, ಊಟ |
| ಆಲಿ | ೨೪೯ | ದೃಷ್ಟಿ, ನೋಟ (ಕಣ್ಣುಗುಡ್ಡೆ) |
| ಆಲೋಕಿಸು | ೧೪೪ | ನೋಡು, ಈಕ್ಷಿಸು |
| ಆವರಿಸಿ | ೩೨೧ | ಗ್ರಹಿಸಿ (ಅವಗ್ರಹಿಸಿ) |
| ಆಸನ್ನಿಸು | ೨೧೬ | ಸೇರು, ಪ್ರಾಪ್ತವಾಗು, ಬರು |
| ಆಸಱು | ೧೫೮ | ಬಳಲಿಕೆ |
| ಆಳ್ದನ | ೨೭೯ | ಯಜಮಾನನ |
| ಆಳಾಪಿಸು | ೫೫ | ಆಲೋಚಿಸು |

ಇ

| | | |
|---|---|---|
| ಇಕ್ಕೆ | ೨೬೮ | ಮನೆ, ವಾಸಸ್ಥಳ |
| ಇಂಗಿತ | ೧೪೪ | ಮನೋಭಾವ |

| | | |
|---|---|---|
| ಇಟ್ಟಣಿಸಿ | ೧೪೩ | ಗುಂಪು ಸೇರಿ |
| ಇಡಿದ | ೩೧ | ತುಂಬಿದ |
| ಇನಿಯಳು | ೨೦ | ಪ್ರಿಯಳು, ಮಡದಿ |
| ಇಂಬಿನಲಿ | ೨೦೫ | ಚೆನ್ನಾಗಿ |
| ಇರವು | ೧೦೮ | ಸ್ಥಿತಿ |

## ಈ

| | | |
|---|---|---|
| ಈಡಾಡು | ೯೪ | ಬಿಡು, ಬಿಸುಡು |
| ಈಪ್ಸಿತಾರ್ಥ | ೧೯೮ | ಮನಸ್ಸಿನ ಬಯಕೆ |
| ಈಸು | ೨೮೫ | ಇಷ್ಟು |

## ಉ

| | | |
|---|---|---|
| ಉಕ್ಕಲಿಸು | ೨೭೯ | ಮೀರು, ಕೈಮೀರು |
| ಉಗ್ಘಡಣೆ | ೬೬ | ಘೋಷ |
| ಉತ್ತರಾಯಿ | ೨೨೯ | ದೂರದವರು, ಪರಕೀಯರು |
| ಉಪಟಳ | ೩೭೪ | ಹಿಂಸೆ, ದುಃಖ |
| ಉಪಮಿಸು | ೨೯೩ | ಹೋಲಿಸು |
| ಉಮ್ಮಳಿಕೆ | ೯೭ | ವ್ಯಥೆ, ಕಳವಳ |
| ಉಱುಬಿ | ೧೬೯ | ಹೆಚ್ಚಾಗಿ |
| ಉಱುವ | ೬೫ | ಒಪ್ಪುವ |

## ಎ

| | | |
|---|---|---|
| ಎಕ್ಕೆವಿಂಡು | ೨೭೨ | ದೊಡ್ಡ ಗುಂಪು (ಶಿಷ್ಯ ಸಮೂಹ) |
| ಎಗ್ಗತನ | ೧೪೩ | ದಡ್ಡತನ |
| ಎಡೆ | ೨೩೩ | ಸ್ಥಳ |
| ಎಡೆವಱಿ | ೨೩೦ | ನಾಶವಾಗು, ಬಿಟ್ಟುಹೋಗು |
| ಎರವು | ೨೨೨ | ಸಾಲ |
| ಎಱಕ | ೮೨ | ಪ್ರೀತಿ |
| ಎಱೆಯ | ೨೯೪ | ಯಜಮಾನ, ಒಡೆಯ, ಕಾಪಾಡುವವನು |
| ಎಱೆವಾಲು | ೨೭೦ | ಎರೆಯುವ ಹಾಲು, ಪಾತ್ರೆಯಿಂದ ಕುಡಿಸುವ ಹಾಲು |
| ಎವೆ | ೪೩೧ | ರೆಪ್ಪೆ |

## ಏ

| | | |
|---|---|---|
| ಏಡಿಸು | ೩೯೮ | ಹಾಸ್ಯಮಾಡು, ತಿರಸ್ಕರಿಸು |
| ಏಸಜಿ | ೩೭೬ | ಎಷ್ಟರ |
| ಏಳಿಸು | ೨೮೩ | ನಿಂದಿಸು, ಹಾಸ್ಯಮಾಡು |

## ಒ

| | | |
|---|---|---|
| ಒಕ್ಕ | ೨೩೯ | ಚೆಲ್ಲಿ, ಹಂಚಿ |
| ಒಚ್ಚತವಾಗಿ | ೩೮೦ | ಅಚ್ಚುಗಟ್ಟಾಗಿ, ಚೆನ್ನಾಗಿ |
| ಒಡ್ಡವಣೆ | ೨೭೮ | ರೀತಿ, ಸ್ವರೂಪ |
| ಒಡ್ಡೈಸು | ೩೨೯ | ರಾಶಿಮಾಡು |
| ಒರೆದ | ೧೭, ೪೬೨ | ಲೇಪಿಸಿದ |
| ಒಲವು | ೧೧ | ಪ್ರೀತಿ |
| ಒಲಹು | ೪೩೧ | ಇತ್ತ ಅತ್ತ ಚಲಿಸು, ತೂಗಾಡು, ತೊನೆದಾಟ, ಒಲಪು |
| ಒಸೆದು | ೧೨ | ಪ್ರೀತಿಯಿಂದ, ಪ್ರಸನ್ನನಾಗಿ |

## ಓ

| | | |
|---|---|---|
| ಓಜೆ | ೮೯ | ರೀತಿ, ಕ್ರಮ, ನಡತೆ |
| ಓತು | ೧೦೩ | ಪ್ರೀತಿಪಟ್ಟು, ಸೋತು |
| ಓರಂತೆ | ೩೬೦ | ಒಂದೇ ಸಮನಾಗಿ, ಚೆನ್ನಾಗಿ |
| ಓವಿ | ೮೨ | ಪ್ರೀತಿಯಿಟ್ಟು, ರಕ್ಷಿಸಿ |
| ಓಸರಿಸು | ೨೩೦ | ಓರೆಮಾಡು (ತೊಲಗು) |

## ಕ

| | | |
|---|---|---|
| ಕಚ್ಚಟ | ೧೬೪ | (ಕಕ್ಷಾಪಟ) ಕೌಪೀನ |
| ಕಡದುಜು | ೫೮ | ಕಣಜ |
| ಕಡವಸ | ೧೫೪ | (ಚರ್ಮ) ಕೃಷ್ಣಾಜಿನ |
| ಕಡುಹು | ೨೯೨ | ಬಲ, ಹೆಚ್ಚಿಕೆ |
| ಕಡೆಯನು | ೩೯೨ | ಕೊನೆಯನ್ನು (ಮೋಕ್ಷವನ್ನು), ಲಯವನ್ನು |
| ಕಂಡಿ | ೪೩೫ | ವೇಷ, ಸ್ಥಿತಿ |
| ಕಣ್ಣಕಿಸುರು | ೧೨೩ | ದೃಷ್ಟಿದೋಷ |
| ಕತ | ೧೯೪ | ನೆಪ, ಕಾರಣ |
| ಕನ್ಯಾಮಾಡ | ೫೫ | ಅಂತಃಪುರ |

| | | |
|---|---|---|
| ಕರಣಗಳು | ೧೧೫ | ಇಂದ್ರಿಯಗಳು |
| ಕರು | ೨೫೧ | ಪುತ್ತಳಿ, ಎರಕದ ಬೊಂಬೆ |
| ಕವಲುವಟ್ಟೆ | ೩೬ | ಬೇರೆ ಮಾರ್ಗ, ಅಡ್ಡದಾರಿ |
| ಕಳ | ೩೨ | ಯುದ್ಧರಂಗ |
| ಕಾಕರು | ೧೪೯ | ನೀಚರು |
| ಕಾಗುದುರೆ | ೩೧೧ | ನೀಚ ಜಾತಿಯ ಕುದುರೆ |
| ಕಾರಣಕನ್ಯೆ | ೫೭ | ಅವತಾರವಾಡಿದ ಹೆಂಗಸು, ಉದ್ದೇಶಸಾಧನೆಗಾಗಿ ಮನುಷ್ಯಾಕಾರವನ್ನು ಪಡೆದವಳು. |
| ಕಾರಣೆ | ೩೧ | ಗೋಡೆಯ ಕೆಳಭಾಗಕ್ಕೆ ಅಲಂಕಾರವಾಗಿ ಎಳೆಯುವ ಕೆಂಪು ಗೆರೆ |
| ಕಾಳುಮತಿ | ೧೭೧ | ನೀಚ ಬುದ್ಧಿ |
| ಕಾಹು | ೯೩ | ಕಾವಲು |
| ಕಿಸುಕುಳ | ೩೦೯ | ತುಚ್ಛ, ಅಲ್ಪ |
| ಕೀಲಣ | ೧೮೬ | ತಂತ್ರ (?) |
| ಕೀಸು | ೧೬೭ | ಗೀರು, ಕೆತ್ತು |
| ಕ್ರೀ | ೧ | ಕ್ರಿಯೆ |
| ಕುಡಿವರಿದು | ೧೭೯ | ಬಳ್ಳಿ ಬಳ್ಳಿಯಾಗಿ |
| ಕುತ್ತ | ೫ | ರೋಗ |
| ಕೆಲದ | ೫೭ | ಸಮೀಪದ, ಪಕ್ಕದ |
| ಕೆಲವಟ್ಟಲು | ೪೪೯ | ತಟ್ಟೆಯ ಸುತ್ತ ಇಡುವ ಬಟ್ಟಲು |
| ಕೇಳಿ | ೧೨೬ | ಕ್ರೀಡೆ |
| ಕೇಣ | ೩೫ | ಮತ್ಸರ, ದುರಾಸೆ, ದೋಷ |
| ಕೇವಣ | ೪೨೩ | (ಕ್ಷೇಪಣ) ಸೇರಿಸುವಿಕೆ, ಬಂಧಿಸುವಿಕೆ |
| ಕೈದು | ೨೮೦ | ಆಯುಧ |
| ಕೈವಾರ | ೨೮೪ | ಹೊಗಳಿಕೆ |
| ಕೊಳುಕೊಡೆ | ೧೯ | ಹೆಣ್ಣನ್ನು ಕೊಟ್ಟು ತರುವುದು, ವಿವಾಹ ಸಂಬಂಧ |
| ಕೋಟರ | ೨೫೩ | ಪೊಟ್ಟರೆ |
| ಕೋಟಲೆ | ೭೪ | ತೊಂದರೆ |
| ಕೋಡ | ೪೩೨ | ದಾನಮಾಡುವ |
| ಕೋಳ | ೨೭೩ | ಸಂಕೋಲೆಯನ್ನು |
| ಕೋಳುವೋಗು | ೨೭೩ | ಗುರಿಯಾಗು, ತುತ್ತಾಗು, ಸೋಲು |

ಖ

| | | |
|---|---|---|
| ಖಡ್ಡತನ | ೨೭೫ | ನೀಚತನ, ಮೂರ್ಖತೆ, ಖಂಡಿತತನ |
| ಖಂಡೆಯ | ೪೦೪ | ಕತ್ತಿ |
| ಖತಿ | ೧೬೦ | ಮನಸ್ಸಿನ ಉದ್ರೇಕ |
| ಖಾತಿ | ೨೩ | ಕೋಪ |
| ಖುಲ್ಲತನ | ೧೩೫ | ನೀಚತನ |
| ಖೋಡಿಗಳೆ | ೬೭೭ | ತಪ್ಪು ಹುಡುಕು, ದೂಷಿಸು |

ಗ

| | | |
|---|---|---|
| ಗಡಣಿಸು | ೪೪೯ | ರಾಶಿಮಾಡು |
| ಗರುವ | ೩೫೪ | ಯೋಗ್ಯ, ಗೌರವವುಳ್ಳವ |
| ಗಸಣಿ | ೧೫೦ | ತೊಂದರೆ |
| ಗಾಜು | ೯೬ | ತಪ್ಪು, ಅಪರಾಧ |
| ಗುಡ್ಡ | ೨೭೨ | ಶಿಷ್ಯ |
| ಗುಡಿ | ೭೫ | ಮಂಟಪ |

ಘ

| | | |
|---|---|---|
| ಘಟಣೆ | ೩೫೨ | ಪ್ರಾಪ್ತಿ |
| ಘಡಾವಣೆ | ೬೬ | ಮೃದಂಗ ಧ್ವನಿ, ವಾದ್ಯ ಧ್ವನಿ |
| ಘೂರ್ಮಿಸು | ೨೯೦ | ಗದರಿಸು, ಗರ್ಜಿಸು |

ಚ

| | | |
|---|---|---|
| ಚರವನು | ೩೧೯ | ಜಂಗಮಾಕಾರವನ್ನು |
| ಚಳತೆ | ೧೪೬ | ಚಾಂಚಲ್ಯ |
| ಚಳಿಯ | ೩೧ | ಚಿಮುಕಿಸುವುದು |
| ಚಾಟು | ೧೬೦ | ಚಮತ್ಕಾರ, ಚತುರ |
| ಚೌಪಾಳಿಗೆ | ೭೩ | ಚಚ್ಚೌಕವಾದ ಮಂಟಪ ಅಥವಾ ದೊಡ್ಡ ಮಂದಿರ. |
| ಚಿಮ್ಮುಜ | ೬೫ | ಎಳೆದು ಹಿಂದಕ್ಕೆ ಕಟ್ಟಿದ ಗಂಟು |
| ಚೂಣಿ | ೪೫೩ | ಅಗ್ರ, ಮುಂಭಾಗ |

ಜ

| | | |
|---|---|---|
| ಜಗುಳಿ | ೧೮೧ | ಜಾರಿ |
| ಜಂಗುಳಿ | ೫೩ | ಗುಂಪು, ಸಮೂಹ |

| | | |
|---|---|---|
| ಜಾತಿಜಾಣಿಕೆ | ೧೪೩ | ಸಹಜವಾದ ಜಾಣತನ |
| ಜಾತ್ಯಶ್ವ | ೩೧೧ | ಒಳ್ಳೆಯ ಜಾತಿಯ ಕುದುರೆ |
| ಜಾವಳಿಗ | ೮೫ | ಸಾಮಾನ್ಯ ಮನುಷ್ಯ |
| ಜಿಸುಗುಮತಿ | ೧೬೪ | ತುಚ್ಛವಾದ ಬುದ್ಧಿಯುಳ್ಳವನು, ಅಲ್ಪಮತಿ |
| ಜೋಗವಿಸು | ೧೦೨ | ಸೇರಿಕೊ |

ಝ

| | | |
|---|---|---|
| ಝಾಳಕತನ | ೮೨ | ಚಮತ್ಕಾರ, ಝಳುಕು |

ತ

| | | |
|---|---|---|
| ತರ್ಕೈಸಿ | ೩೩೫ | ಆಲಿಂಗಿಸಿ, ಅಪ್ಪಿಕೊಂಡು |
| ತತ್ರವಸರ | ೩೨೧ | ಸಂಬಂಧಪಟ್ಟ ಕೆಲಸ (ತತ್ರ+ಅವಸರ ಧಾತು—ತರು) |
| ತಮಂಧ | ೪೭ | ಕಗ್ಗತ್ತಲೆ |
| ತರಹರ | ೪೨ | ಮನಶ್ಶಾಂತಿ, ಮನಸ್ಥೈರ್ಯ, ಸಮಾಧಾನ |
| ತವಕ | ೧೫೨ | ಆಸೆ, ವೇಗ |
| ತವಸಿಧಿ | ೩೮೬ | ಭಂಡಾರ |
| ತಳಿತ | ೧೪೧ | ಹೊಂದಿದ |
| ತಳುವು | ೩೧೯ | ತಡಮಾಡುವುದು, ತಡ |
| ತಾಮರಸ | ೧೭೮ | ತಾವರೆ |
| ತಾಜಪ | ೪೧೬ | ಬತ್ತಿಹೋಗದ, ಒಣಗಿಹೋಗದ |
| ತಿಟ್ಟಪಿಟ್ಟಿತು | ೧೦೭ | ಚಿತ್ರದಂತೆ ವ್ಯಕ್ತವಾಯಿತು, ಸ್ಪಷ್ಟವಾಗಿ ಹೊಳೆಯಿತು |
| ತಿಣ್ಣಸೆ | ೧೦೭ | ಹೆಚ್ಚಾಗಿ |
| ತಿಮಿರ | ೧೭೮ | ಕತ್ತಲೆ |
| ತೀಡು | ೨೩೭ | ಬೀಸು, ಆಗುಮಾಡು, ತರು |
| ತೀವಿ | ೩೦ | ತುಂಬಿ, ಹೆಚ್ಚಾಗಿ |
| ತೂಪಿಜು | ೧೨೩ | ಉಃಪ್ ಎಂದು ಊದು |
| ತೂರ್ಯೋದ್ಘಾರ | ೬೭ | ವಾದ್ಯಧ್ವನಿ |
| ತೆಂಕ | ೨೫ | ದಕ್ಷಿಣ ದಿಕ್ಕು |
| ತೆಕ್ಕೆ | ೨೭೯ | ಆಲಿಂಗನ |
| ತೆತ್ತಿಗ | ೪೫೬ | ಆಪ್ತಸ್ನೇಹಿತ, ಸಮೀಪದ ಬಂಧು |
| ತೆತ್ತಿಸು | ೨೫೨ | ಬಂದು ಸೇರು |

| | | |
|---|---|---|
| ತೆತ್ತವಣೆ | ೨೧೪ | ಜೋಡಣೆ |
| ತೆರೆ | ೩೬೭ | ಚರ್ಮದ ಸುಕ್ಕು, ಮಡಿಕೆ |
| ತೊಡಕು | ೩೦೨ | ಗೊಡವೆ, ವಿಚಾರ |
| ತೊನಹು | ೪೩೧ | ತೂಗಾಟ |
| ತೋಟಿ | ೨೭೫ | ಹೋರಾಟ, ಕಾದಾಟ |

## ದ

| | | |
|---|---|---|
| ದಂಡಿ | ೪೩೫ | ವೈಪರೀತ್ಯ, ವಿಪರೀತ ವರ್ತನೆ |
| ದಂದುಗ | ೩೩೭ | ತೊಂದರೆ, ಕಾಟ |
| ದಾಯ | ೨೧೮ | ಆಸ್ತಿ |
| ದಾಯಿಗ | ೪ | ಭ್ರಾತೃ, ಭಕ್ತ (ಧಾರ್ಮಿಕ, ಮೋಕ್ಷಾಪೇಕ್ಷಿ) |
| ದಾವಾನಳ | ೧೪೧ | ಕಾಳ್ಕಿಚ್ಚು |
| ದಾಸೋಹತನ | ೨೧೨ | ದಾಸನ ಭಾವ, ಭಕ್ತಭಾವ |
| ದಾಳಿ | ೩೭೪ | ಮುತ್ತಿಗೆ |
| ದುರಿತ | ೧೮ | ಪಾಪ |
| ದುಸ್ತರ | ೨೪ | ಅಸಾಧ್ಯ |
| ದೂಪಿಸು | ೧೫೩ | ಬಳಲು, ಆಯಾಸ ಹೊಂದು |
| ದೂರಿಸು | ೧೫೯ | ವ್ಯಥೆಪಡು |
| ದೇಸಿಗ | ೧೮೧ | ಊರಿಂದೂರಿಗೆ ಅಲೆಯುವವ, ಭಿಕಾರಿ |
| ದೊಠಾರತನ | ೨೭೭ | ಮೂರ್ಖತನ, ಹಠ |

## ಧ

| | | |
|---|---|---|
| ಧಾವತಿ | ೧೬೭ | ಆತುರ, ತವಕ |

## ನ

| | | |
|---|---|---|
| ನಟ್ಟುವಿಗತನ | ೧೪೯ | ನಟನವೃತ್ತಿ |
| ನಿಚ್ಚ | ೧೦೩ | ನಿತ್ಯ, ದಿನವೂ |
| ನಿಚ್ಚಟರು | ೩೮೩ | ದೃಢಮನಸ್ಕರು, ಚಿತ್ತಸ್ಥೈರ್ಯವುಳ್ಳವರು |
| ನಿಟ್ಟೊಡಲು | ೪೩ | ಉದ್ದವಾದ ದೇಹ |
| ನಿಧಾನಿಸು | ೧೯೨ | ಆಲೋಚಿಸು |
| ನಿಷ್ಪಸರ | ೪೦೬ | ಕ್ರೂರವಾದ, ಪ್ರಬಲವಾದ |
| ನಿಚ್ಚೆಜಿಗು | ೨೪೮ | ರೆಪ್ಪೆ ಹೊಡೆಯದ ದೃಷ್ಟಿ |
| ನಿರ್ಭಾವದ | ೨೪೫ | ಭಾವವಿಲ್ಲದ, ಮನಸ್ಸು ಲಯವಾದ |

| | | |
|---|---|---|
| ನಿರಾಕುಳ | ೧೦ | ವ್ಯಸನವಿಲ್ಲದ |
| ನಿರಾಳ | ೧೦ | ಶಾಂತವಾದ ಬಾಧೆಗಳಿಲ್ಲದ |
| ನಾಗವಾಸ | ೭೨ | ನಾಟ್ಯಗಾರರ ಮನೆ, ನಾಟ್ಯಗಾತಿಯರ ಗುಂಪು |
| ನಾರಂಗ | ೩೦ | ಕಿತ್ತಿಳೆ |
| ನಿಲವು | ೧೮೭ | ಸ್ಥಿತಿ, ಔನ್ನತ್ಯ |
| ನಿರ್ಲೇಪನು | ೨೮೦ | ಸಂಬಂಧವಿಲ್ಲದವನು, ತೊಂದರೆ ಇಲ್ಲದವನು |
| ನಿರ್ವಾಣ | ೩೪೦ | ಬತ್ತಲೆ, ಮುಕ್ತಿ |
| ನಿರ್ವಯಲು | ೨೬೬ | ಬಯಲಾಗುವುದು, ಲಿಂಗೈಕ್ಯ, ಮುಕ್ತಿ |
| ನಿಶ್ಚಳ | ೧೦ | ಚಲಿಸದ, ಸ್ಥಿರ, 'ಕೂಟಸ್ಥ' |
| ನೀಱೆ | ೯೬ | ಸುಂದರಿ |
| ನೆಗಳು | ೮೯ | ಮಾಡು |
| ನೆನಹು | ೪೦ | ಧ್ಯಾನ |
| ನೆಮ್ಮುಗೆ | ೧೬೯ | ಸಂಬಂಧ |
| ನೆರಹು | ೮೮ | ಕೂಡಿಸು (ಕೂಡಿಸಿ ಹೇಳು). |
| ನೆಲಸುಗ್ಗಡಣೆಕಾರರು | ೪೨೯ | ಪಾದಾವಧಾನವನ್ನು ಹೇಳುವವರು |
| ನೇಸಱು | ೧೧೩ | ಸೂರ್ಯ |
| ನೇಹ | ೧೪೫ | ಸ್ನೇಹ, ಪ್ರೀತಿ |
| ನೈವಾರಿಸು | ೩೫೨ | ನಿವಾರಿಸು |

## ಪ

| | | |
|---|---|---|
| ಪಕ್ಕ | ೧೮೬ | ರೆಕ್ಕೆ |
| ಪಚ್ಚು | ೨೦೫ | ಪಿಸುಮಾತು ಆಡು |
| ಪತಿಕರಿಸಿ | ೧೩೧ | ಒಲಿದು |
| ಪಟು | ೯೩ | ಅರೋಗದೃಢಕಾಯ |
| ಪರಕಲಿಸಿ | ೧೫ | ಸುತ್ತಲೂ ಹರಡಿ |
| ಪರಿಕರಣೆ | ೪೨೬ | ಸಿದ್ಧತೆ, ವ್ಯವಸ್ಥೆ |
| ಪರಿಕಿಸು | ೧೬೫ | ಆಲೋಚಿಸು |
| ಪರಿಚರಿಸಿ | ೫೫ | ಸೇವೆಮಾಡಿ–ಅಭ್ಯಾಸಮಾಡಿ, ವ್ಯಾಸಂಗಮಾಡಿ |
| ಪರಿ ಪರಿವ | ೪೩೯ | ದಿಕ್ಕು ದಿಕ್ಕಿಗೆ ಓಡುವ |
| ಪರಿಮಿತ | ೩೩೯ | ಮಿತಗೋಷ್ಠಿ, ಪ್ರಮುಖರ ಸಭೆ |
| ಪರಿವಿಡಿ | ೩೫೪ | ಕ್ರಮ |

| | | |
|---|---|---|
| ಪರುಠವಿಸು | ೩೨೯ | ವಿವರಿಸು, ವಿಸ್ತರಿಸು |
| ಪಲ್ಲವಿಸಿ | ೧೩೫ | ಹೆಚ್ಚಿ |
| ಪಾತ್ರದ | ೧೦೨ | ನಾಟ್ಯದ |
| ಪಾಷಾಣ | ೨೭೬ | ಕಲ್ಲು, ಶಿಲೆ |
| ಪೂರವಿಸು | ೧೧೮ | ತುಂಬು |
| ಪೂವಲಿ | ೩೧ | ರಂಗವಲ್ಲಿ |
| ಪೈಜೆ | ೨೫ | ಪ್ರತಿಜ್ಞೆ |

ಬ

| | | |
|---|---|---|
| ಬಗೆಬಂದ | ೧೩೧ | ಮನಸ್ಸಿಗೆ ಬೇಕಾದ |
| ಬಟ್ಟೆ | ೧೭೮ | ಮಾರ್ಗ, ದಾರಿ |
| ಬಂಡಿಕಾರ | ೧೬೧ | ಕಳ್ಳ |
| ಬನ್ನ | ೯೮ | ಭಂಗ, ಸೋಲು |
| ಬಱನು | ೪೨೫ | ಕ್ಷಾಮ, ಬರ (ಅತಿಯಾದ ಆಸೆ) |
| ಬಣಗ | ೨೮೮ | ಅಪ್ರಯೋಜಕ, ಅರಿಯದವ |
| ಬಱಿದೆ | ೯೨ | ವ್ಯರ್ಥವಾಗಿ |
| ಬಱಿಮಾತು | ೨೩ | ವ್ಯರ್ಥವಾದ ಮಾತು |
| ಬಲ್ಲಹ | ೧೫೫ | ವಲ್ಲಭ, ಸ್ವಾಮಿ |
| ಬಲುಹು | ೧೮೭ | ಶಕ್ತಿ |
| ಬಸವಳಿ | ೧೫೩ | ಶಕ್ತಿಗುಂದು |
| ಬಳಿಯಟ್ಟು | ೩೨೩ | ದೂತನನ್ನು ಕಳುಹಿಸು |
| ಬಾತಡೆ | ೯೪ | ಉಬ್ಬಿದರೆ |
| ಬಾಯ್ದೆರೆ | ೧೫ | ತುಟಿ |
| ಬಾಣಸ | ೧೮೬ | ಅಡಿಗೆ |
| ಬಿಂಕಕಾಱ | ೭೦ | ಜಂಬಗಾರ, ಗರ್ವಿಷ್ಠ |
| ಬಿತ್ತರ | ೪೪ | ವಿವರ, ವಿಸ್ತಾರ |
| ಬಿಡಮಾಡಿ | ೩೭೪ | ಬಿಡುವಂತೆ ಮಾಡಿ |
| ಬಿನುಗು | ೩೫೯ | ಕೀಳು |
| ಬಿಱುಬು | ೪೦೩ | ಕಾಠಿನ್ಯ (ಪ್ರಬಲ) |
| ಬಿಱುವೊಯ್ಲು | ೪೦೨ | ಪ್ರಬಲವಾದ ಹೊಡೆತ |
| ಬೀಯ | ೪ | ವ್ಯಯ |
| ಬುಲ್ಲವಿಸು | ೨೨ | ಮರುಳುಮಾಡು, ಮೋಹ ಹುಟ್ಟಿಸು, ಉಬ್ಬು (ಪುಸಲಾಯಿಸು) |
| ಬೆಗಡುಗೊಳ್ | ೮೧ | ಹೆದರು |

| | | |
|---|---|---|
| ಬೆದೆ | ೧೦೭ | ಬಿತ್ತನೆ |
| ಬೆಬ್ಬಳಗೊಂಡು | ೪೩೫ | ಗಾಬರಿಗೊಂಡು |
| ಬೆಸನು | ೧೦೩ | ಅಪ್ಪಣೆ |
| ಬೆಸಲಾದಂತೆ | ೩೭೨ | ಈದಂತೆ, ಹಡೆದಂತೆ |
| ಬೆಸುಗೆ | ೩೫ | ಹೊಂದಿಕೆ, ಕೂಡಿಕೆ |
| ಬೆಳವಿಗೆ | ೧೦೭ | ಬೆಳೆವಣಿಗೆ |
| ಬೆಳೆನೀರ್ | ೧೩ | ಮರಕ್ಕೆ ಎರೆಯುವ ನೀರು |
| ಬೋನ | ೪೫೦ | ಅನ್ನ |
| ಬೇವಸ | ೨೪೫ | ತೊಂದರೆ, ದುಃಖ, ಚಿಂತೆ |
| ಬೋಳೆಯರು | ೧೫೫ | ದೇವತೆಗಳು |
| ಬೋಳೈಸು | ೮೧ | ಸಮಾಧಾನಮಾಡು |

## ಭ

| | | |
|---|---|---|
| ಭಣಿತೆ | ೨೯೭ | ಮಾತು (ಮಾತಿನ ರೀತಿ) |
| ಭರಭಾರ | ೩೪೪ | ಹೆಚ್ಚಾದ ಭಾರ |
| ಭವ | ೧೬ | ಜನ್ಮ, ಸಂಸಾರ |
| ಭವಭಾರಿ | ೨೭೪ | ಜನ್ಮಗಳನ್ನು ಹೊತ್ತವನು, ಸಂಸಾರಿ |
| ಭವರೋಗಿ | ೨೮೯ | ಜನನ ಮರಣಗಳೆಂಬ ರೋಗವುಳ್ಳವನು |
| ಭವಿ | ೨೪೧ | ವೀರಶೈವದೀಕ್ಷೆಯನ್ನು ಪಡೆಯದವನು |
| ಭ್ರಾಮಕದ ನುಡಿ | ೧೭೮ | ಹುಚ್ಚು ಮಾತು, ಅಸಂಬದ್ಧವಾದ ಮಾತು |
| ಭಾವೆ | ೩೭ | ಶಕ್ತಿಯುಳ್ಳವಳು |
| ಭುಲ್ಲವಣೆ | ೧೧೦ | ಮೋಹ |
| ಭೂತಿ | ೧೫೪ | ವಿಭೂತಿ |
| ಭೋಗಾರುಹ | ೩೧೬ | ಸುಖದಾಯಕ |

## ಮ

| | | |
|---|---|---|
| ಮಕರಿಸು | ೧೪೮, ೨೫೩ | ಒತ್ತು, ಹೆಚ್ಚು, ವರ್ಧಿಸು (?) |
| ಮಂಡಿಸಿ | ೩೦೭ | ಕುಳಿತು |
| ಮಮಕರಿಸಿ | ೨೫೩ | ಅಹಂಕರಿಸಿ |
| ಮರುಳಾಡು | ೯೨ | ದೂರು, ನಿಂದಿಸು |
| ಮಜವೆ | ೨೦೩ | ಅಜ್ಞಾನ |
| ಮಲಿವುತ | ೨೭ | ಗರ್ವಿಸುತ್ತ |
| ಮಸಕ | ೧೫೭ | ವಿಜೃಂಭಣೆ |

| | | |
|---|---|---|
| ಮಾರ್ಕೊಂಡು | ೧೯೨ | ಪ್ರತಿಭಟಿಸಿ, ತಿರಸ್ಕರಿಸಿ |
| ಮಾಡ | ೩೯೮ | ಮನೆ (ಮಹಡಿ) |
| ಮಾಣಿಸು | ೨೫೮ | ಹೋಗಲಾಡಿಸು, ನಿವಾರಿಸು |
| ಮಾದುದು | ೧೫೭ | ಹೋಯಿತು, ಅಡಗಿತು (ಧಾತು—ಮಾಣ್) |
| ಮಾಱಾಂತು | ೪೦೭ | ಎದುರಾಗಿ, ಅಡ್ಡವಾಗಿ ಸಿಕ್ಕಿ |
| ಮಿಡುಕು | ೧೦೦ | ಅಲ್ಲಾಡು, ಚಲಿಸು |
| ಮಿಱುಪ | ೬೫ | ಹೊಳೆಯುವ |
| ಮುಟ್ಟಲಿ | ೩೫೪ | ಕಡೆತನಕ (ಮುಗಿಯುವತನಕ) |
| ಮುಗುಳು | ೧೧೫ | ಮೊಗ್ಗು |
| ಮುಡುಬ | ೨೫೦ | ಹೆಳವ |
| ಮುಡುಹು | ೪೦೪ | ಭುಜ |
| ಮುಂಗುಡಿ | ೪೨೯ | ಮುಂಭಾಗ |
| ಮುರುಟಿಸು | ೩೮ | ಕುಗ್ಗಿಸು |
| ಮುತ್ತು | ೩೮ | ಮುಪ್ಪುವಡೆದು, ಮುಪ್ಪಾಗಿ (ಧಾತು—ಮುದು) |
| ಮುರಿದು | ೯೦ | ತಿರುಗಿ |
| ಮುಱಿವಡೆದ | ೧೬೯ | ಸೋತ, ಅವಮಾನಿತಳಾದ, ಭಂಗಪಟ್ಟ |
| ಮುಂತೆ | ೨೭ | ಮೊದಲು |
| ಮೇಳ | ೧೨೮ | ಜೊತೆ, ಸಹವಾಸ |
| ಮೇಳಾಪ | ೧೧೨ | ಸೇರಿಕೆ |
| ಮೊಗಸಿ | ೧೧೭ | ಶ್ರಮಿಸಿ (?), ಸಾಧನೆಮಾಡಿ (?) |
| ಮೊಗ್ಗು | ೨೮೬ | ಇಂದ್ರಜಾಲ |
| ಮೋಡಿ | ೪೦೫ | ರೀತಿ, ಕ್ರಮ, ವರಸೆ |
| ಮೋಹಿಸಿ | ೪೬೩ | ಸೇರಿ, ಗುಂಪುಕೂಡಿ |

## ರ

| | | |
|---|---|---|
| ರಾಗ | ೨೮೯ | ಅನುರಕ್ತಿ, ಸಂಸಾರದಲ್ಲಿ ಆಸಕ್ತಿ |
| ರಾಘೆ | ೩೧೧ | ತೊಡೆ |
| ರುಚಿ | ೧೨ | ಕಿರಣ, ಕಾಂತಿ |

## ಱ

| | | |
|---|---|---|
| ಱಟ್ಟೆ | ೯೯ | ಪ್ರಚಾರ, ಬಹಿರಂಗ |
| ಱೋಡಾಡು | ೧೬೫ | ಹಾಸ್ಯಮಾಡು, ಕಾಡು |

## ಲ

| | | |
|---|---|---|
| ಲಾಕುಳ | ೧೫೪ | ದಂಡ, ದೊಣ್ಣೆ |
| ಲಾಗಿಸು | ೩೦೦ | ಮುಂದುವರಿ |
| ಲಾಗು | ೩ | ಲಾಘವ, ಸುಲಭ |
| ಲೋಗರು | ೩ | ಜನರು, ಲೋಕದವರು |
| ಲೋಚು | ೧೬೪ | ಲುಂಛನ, ತಲೆಯ ಕೂದಲುಗಳನ್ನು ಕೀಳಿಸಿಕೊಳ್ಳುವುದು |

## ವ

| | | |
|---|---|---|
| ವಹಣೆ | ೬೬ | ವಿಡಾಯ (ಜೋಕು ?) |
| ವಾಸಿ | ೧೬೭ | ಕೀರ್ತಿ |
| ವಾಸಿಗ | ೭೦ | ಕೀರ್ತಿಪಡೆದವ |
| ವಿಕಳ | ೯೨ | ಹುಚ್ಚು, ಮತಿಭ್ರಮೆ |
| ವಿಗಡ | ೩೨ | ಶೂರ |
| ವಿಡಾಯ | ೪ | ಸೊಗಸುಗಾರಿಕೆ |
| ವಿಷಮಕುಲ | ೨೧೯ | ಭಿನ್ನ ಜಾತಿ. ಬೇರೆ ಬೇರೆ ಜಾತಿ |
| ವೆಗ್ಗಳಿಸಿ | ೩೮ | ಹೆಚ್ಚಿ, ಅಧಿಕವಾಗಿ |
| ವೇದಿಸುವೆ | ೧೩೮ | ತಿಳಿಸುವೆ |
| ವೈಹಾಳಿ | ೨೧೫ | ಸೈನ್ಯದ ಮೆರೆವಣಿಗೆ, ಕುದುರೆಯ ಸವಾರಿ |

## ಸ

| | | |
|---|---|---|
| ಸಕೀಲಕ | ೨೭೦ | ಸಂಬಂಧ |
| ಸಘಾಡಿಕೆ | ೩೨೯ | ಹೊಂದಿಕೆ, ಜೋಡಣೆ |
| ಸಮನಿಸು | ೩೧ | ಉಂಟಾಗು |
| ಸಮಯ | ೨೨೯ | ಮತಸಿದ್ಧಾನ್ತ |
| ಸಮ್ಮೇಳ | ೩೫ | ಕೂಟ, ಜೊತೆ |
| ಸಯವಾದ | ೩೧೫ | ಕೂಡಿಕೊಂಡ, ಒಂದಾದ |
| ಸರಿಸಗೊಂಡುದು | ೧೪೨ | ಹತ್ತಿರಕ್ಕೆ ಬಂತು |
| ಸಲ್ಲವಿಡು | ೭೧ | ಹೋಗುಬಿಡು |
| ಸವ್ಯಾಪಸವ್ಯ | ೪೦೫ | ಬಲ ಎಡ (ಕತ್ತಿಯಿಂದ ಬಲಕ್ಕೂ ಎಡಕ್ಕೂ ಹೊಡೆಯುವುದು) |
| ಸಸಿನೆ | ೩೨೦ | ಸೆಟ್ಟಗೆ, ಡೊಂಕಿಲ್ಲದೆ, ದೋಷವಿಲ್ಲದೆ |
| ಸಂಘಟ | ೩೫೨ | ಪ್ರಯತ್ನ, ಸಂದರ್ಭ, ವಿಚಾರ |

| | | |
|---|---|---|
| ಸಂಚಲವಾಗಿ | ೪೦ | ಚೆನ್ನಾಗಿ ಚಲಿಸಿ |
| ಸಂದ | ೧೩೬ | ಹೆಸರಾದ |
| ಸಂದಣಿಸು | ೯ | ಒಟ್ಟುಗೂಡಿಸು |
| ಸಂಭಾವಿಸು | ೬೯ | ಗೌರವಿಸು |
| ಸಂವರಿಸು | ೧೫೪ | ಗಂಟು ಕಟ್ಟು |
| ಸಾರಣೆ | ೩೧ | ಸಾರಿಸುವುದು |
| ಸಾರಲು | ೧೬೬ | ಬಳಿ ಸೇರಲು, ನೆರವೇರಲು |
| ಸ್ವಾನುಭಾವ | ೧೯೪ | ಸ್ವಂತ ಅನುಭಾವ |
| ಸಾಂಗತ್ಯ | ೪೪ | ಸಂಬಂಧ, ಹೊಂದಿಕೆ |
| ಸೀಕರಿಗೊಳಿಸು | ೨೯೦ | ಕರಿಯಾಗಿಸು, ಇದ್ದಿಲಾಗಿ ಮಾಡು, ಸುಡು |
| ಸ್ಫುರಣೆಯನು | ೧೫ | ಹೊಳೆದದ್ದನ್ನು, ತೋರಿದ್ದನ್ನು |
| ಸೂಡುತಲಿ | ೧೫೪ | ಗಂಟು ಕಟ್ಟಿ |
| ಸೆಜ್ಜೆಯ ಮಂದಿರ | ೮೬ | ಮಲಗುವ ಮನೆ |
| ಸೆಳೆ | ೨೬ | ಆಕರ್ಷಿಸು, ಪ್ರೀತಿಸು |
| ಸೌರಂಭ | ೨೯ | ಸಂತೋಷ, ಸಂಭ್ರಮ |

## ಹ

| | | |
|---|---|---|
| ಹಕ್ಕೆ | ೪೧೪ | ಶಯನಾಸನ (ಮಲಗುವ) ಹಾಸಿಗೆ |
| ಹಣ್ಣಿ | ೯೮ | ಸಿದ್ಧವಾಗಿ |
| ಹದನು | ೮೮ | ಸಂಗತಿ, ವೃತ್ತಾಂತ |
| ಹದವಳೆ | ೧೯೧ | ಹದವಾದ ಮಳೆ |
| ಹದುಳ | ೨೪ | ಕ್ಷೇಮ |
| ಹಪ್ಪಳೆ | ೪೨೪ | ಚಪ್ಪಡಿ |
| ಹರಗು | ೩೦೯ | ಸಮಮಾಡು, ಹೆಂಟೆಯೊಡೆದು ಸಿದ್ಧಮಾಡು |
| ಹರಿತಂದು | ೧೮೧ | ಓಡಿಬಂದು, ವೇಗವಾಗಿ ಬಂದು |
| ಹರಿದು | ೨೧೬ | ಓಡಿಹೋಗಿ |
| ಹರಿಸುಟಿಗೆ | ೧೬೩ | (ಸುಗ್ಗಿ ಹಿಡಿಯುವುದು?) |
| ಹಱಂಗಲನು | ೨೬೯ | ಹರಿಗೋಲನ್ನು |
| ಹಱಮುಱ | ೪೦೦ | ಛೇದಿಸುವುದು, ತುಂಡಾಗುವುದು |
| ಹಱವು | ೧೬೯ | ಕೊನೆಗಾಣಿಸುವ ಉಪಾಯ |
| ಹವಣಿಲ್ಲ | ೩೫ | ಆಲೋಚನೆಗೆ ಅಸಾಧ್ಯ, ಸಾಧ್ಯವಲ್ಲ |
| ಹಸರಿಸು | ೧೯೧ | ಪ್ರಸರಿಸು |

| | | |
|---|---|---|
| ಹಳಿದು | ೨೮೩ | ತಿರಸ್ಕರಿಸಿ, ನಿಂದಿಸಿ |
| ಹಾರಬೇಡ | ೧೮೪ | ಹಾರೈಸಬೇಡ, ನಿರೀಕ್ಷಿಸಬೇಡ |
| ಹಾರೈಸು | ೬೭ | ಅಪೇಕ್ಷಿಸು, ಆಶಿಸು |
| ಹಾರಿಕೊಂಡು | ೪೧೫ | ನಿರೀಕ್ಷಿಸಿಕೊಂಡು, ಆಶ್ರಯಿಸಿಕೊಂಡು |
| ಹಿಸುಣಿಗ | ೨೨೬ | ಚಾಡಿಕೋರ (ನಿಂದೆಮಾಡುವವ) |
| ಹಿಳುಕು | ೭೮ | ಬಾಣದ ಹಿಡಿ, ಕೋಲು |
| ಹುಗಿಲು | ೩೭೪ | ಪ್ರವೇಶ |
| ಹುರಿಗೊಳಿಸು | ೪೬ | ಹಗ್ಗದಂತೆ ಹೆಣೆ |
| ಹುರುಳು | ೧೭೦ | ಸತ್ವ |
| ಹುಂಡ | ೩೫೫ | ಅನಾಗರಿಕ, ಹಳ್ಳಿಯವ (ವಿಷಯಲಂಪಟ) |
| ಹೂಡಿ | ೧೪೦ | ಕಟ್ಟಿ, ಬಂಧಿಸಿ |
| ಹೂಣಿಕೆ | ೨೫ | ಪ್ರತಿಜ್ಞೆ |
| ಹೆಡತಲೆ | ೨೮೪ | ತಲೆಯ ಹಿಂಭಾಗ |
| ಹೆಱಹಿಂಗಬಾರದ | ೬೪ | ಅಳಿಸಿಹೋಗದ, ಮರೆತುಹೋಗದ |
| ಹೇಡಾಡದವರು | ೩೮೩ | ಹಿಮ್ಮೆಟ್ಟದವರು, ಹೇಡಿಗಳಂತೆ ಆಗದವರು |
| ಹೇವ | ೧೪೬ | ನಾಚಿಕೆ, ಲಜ್ಜೆ |
| ಹೊರಳಿ | ೧೧೫ | ಗುಂಪು |
| ಹೊಲಬು | ೫ | ಮಾರ್ಗ, ರೀತಿ, ದಿಕ್ಕು |
| ಹೊಲಬು | ೮೭ | ದಾರಿ, ಗುರುತು, ನೆಪ್ಪು |
| ಹೊರೆಯಲಿ | ೧೧೫ | ಸಮೀಪದಲ್ಲಿ |
| ಹೋರಟೆ | ೨೬೮ | ಜಗಳ (ವಿಷಯಗಳಲ್ಲಿ ಸಿಕ್ಕಿ ಹೋರಾಟ) |

---

2276-33.—ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ ಟಿ. ಸುಬ್ರಹ್ಮಣ್ಯ ಅಯ್ಯರವರಿಂದ ಮುದ್ರಿಸಲ್ಪಟ್ಟಿತು.

